ಸ್ರಜಾ ವೃಷ್ಟಿಂ ದಿವ ಆऽऽದ್ಭಿಃ ಸಮುದ್ರಂ ಪೃಣ । ಅಬ್ಜಾ ಅಸಿ ಪ್ರಥಮಜಾ ಬಲಮಸಿ ಸಮುದ್ರಿಯಮ್ । ಉನ್ನಂಭಯ ಪೃಥಿವೀಂ ಭಿಂಧೀದಂ ದಿವ್ಯಂ ನಭಃ । ಉದ್ನೋ ದಿವ್ಯಸ್ಯ ನೋ ದೇಹೀಶಾನೋ ವಿಸ್ರಜಾ ದೃತಿಮ್ । ಯೇ ದೇವಾ ದಿವಿಭಾಗಾ ಯೇऽಂತರಿಕ್ಷಭಾಗಾ ಯೇ ಪೃಥಿವಿಭಾಗಾಃ । ತ ಇಮಂ ಯಜ್ಞಮುವಂತು ತ ಇದಂ ಕ್ಷೇತ್ರಮಾವಿಶಂತು ತ ಇದಂ ಕ್ಷೇತ್ರಮನು ವಿವಿಶಂತು ॥೨೨ - 8॥

**[ಯಂತಿ ದೇವಾ ಏಗ್ಂಶತಿಶ್ಚ ।]**

ಮಾರುತಮಸಿ ಮರುತಾಮೋಜ ಇತಿ ಕೃಷ್ಣಂ ವಾಸಃ ಕೃಷ್ಣತೂಷಂ ಪರಿಧತ್ತ ಏತದ್ವೈ ವೃಷ್ಟ್ಯೈ ರೂಪಗ್ಂ ಸರೂಪ ಏವ ಭೂತ್ವಾ ಪರ್ಜನ್ಯಂ ವರ್ಷಯತಿ ರಮಯತ ಮರುತಃ ಶ್ಯೇನಮಾಯಿನಮಿತಿ ಪಶ್ಚಾದ್ವಾತಂ ಪ್ರತಿಮೀವತಿ ಪುರೋವಾತಮೇವ ಜನಯತಿ ವರ್ಷಸ್ಯಾವರುದ್ಧ್ಯೈ ವಾತನಾಮಾನಿ ಜುಹೋತಿ ವಾಯುರ್ವೈ ವೃಷ್ಟ್ಯಾ ಈಶೇ ವಾಯುಮೇವ ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮೈ ಪರ್ಜನ್ಯಂ ವರ್ಷಯತ್ಯಷ್ಟೌ [(೧)ಜುಹೋತಿ] ಜುಹೋತಿ ಚತಸ್ರೋ ವೈ ದಿಶಶ್ಚತಸ್ರೋऽವಾಂತರದಿಶಾ ದಿಗ್ಭ್ಯ ಏವ ವೃಷ್ಟಿಗ್ಂ ಸಂ ಪ್ರಚ್ಯಾವಯತಿ ಕೃಷ್ಣಾಜಿನೇ

ಸಂಯೌತಿ ಹವಿರೇವಾಕರಂತರ್ವೇದಿ ಸಂಯೌತ್ಯವರುದ್ಧ್ಯೈ ಯತೀನಾ ಮದ್ಯಮಾನಾನಾಗ್ಂ ಶೀರ್ಷಾಣಿ ಪರಾಪತನ್ತೇ ಖರ್ಜೂರಾ ಆಭವನ್ತೇ ಷಾಗ್ಂ ರಸ ಊರ್ಧ್ವೋಽಪತತ್ತಾನಿ ಕರೀರಾಣ್ಯಭವನ್ಥ್ಸೌಮ್ಯಾನಿ ವೈ ಕರೀರಾಣಿ ಸೌಮ್ಯಾ ಖಲು ವಾ ಆಹುತಿರ್ದಿವೋ ವೃಷ್ಟಿಂ ಚ್ಯಾವಯತಿ ಯತ್ಕರೀರಾಣಿ ಭವಂತಿ (೨) ಸೌಮ್ಯಯೈವಾಽಽಹುತ್ಯಾ ದಿವೋ ವೃಷ್ಟಿಮವ ರುಂಧೇ ಮಧುಷಾ ಸಂಯೌತ್ಯಪಾಂ ವಾ ಏಷ ಓಷಧೀನಾಗ್ಂ ರಸೋ ಯನ್ಮಧ್ವದ್ಭ್ಯ ಏವೌಷಧೀಭ್ಯೋ ವರ್ಷತ್ಯಥೋ ಅದ್ಭ್ಯ ಏವೌಷಧೀಭ್ಯೋ ವೃಷ್ಟಿಂ ನಿನಯತಿ ಮಾಂದಾ ವಾಶಾ ಇತಿ ಸಂಯೌತಿ ನಾಮಧೇಯ್ಯೈರೇವೈನಾ ಅಚ್ಛೈತ್ಯಥೋ ಯಥಾ ಬ್ರೂಯಾದಸಾವೇಹೀತ್ಯೇವಮೇವೈನಾ ನಾಮಧೇಯ್ಯೈರಾ [ನಾಮಧೇಯ್ಯೈರಾ (೩) ಚ್ಯಾವಯತಿ] ಚ್ಯಾವಯತಿ ವೃಷ್ಣೋ ಅಶ್ವಸ್ಯ ಸಂದಾನಮಸಿ ವೃಷ್ಟ್ಯೈ ತ್ವೋಪನಹ್ಯಾಮೀತ್ಯಾಹ ವೃಷಾ ವಾ ಅಶ್ವೋ ವೃಷಾ ಪರ್ಜನ್ಯಃ ಕೃಷ್ಣ ಇವ ಖಲು ವೈ ಭೂತ್ವಾ ವರ್ಷತಿ ರೂಪೇಣೈವೈನಗ್ಂ ಸಮರ್ಧಯತಿ ವರ್ಷಸ್ಯಾವರುದ್ಧ್ಯೈ ॥೨೬ – 9॥

**[ಅಷ್ಟಾ ಭವಂತಿ ನಾಮಧೇಯ್ಯೈರೇಕಾನ್ನತ್ರಿಗ್ಂಶಚ್ಚ]**

ದೇವಾ ವಸವ್ಯಾ ದೇವಾಃ ಶರ್ಮಣ್ಯಾ ದೇವಾಃ ಸಪೀತಯ ಇತ್ಯಾಬಧ್ನಾತಿ ದೇವತಾಭಿರೇವಾನ್ವಹಂ ವೃಷ್ಟಿಮಿಚ್ಛತಿ ಯದಿ ವರ್ಷೇತ್ತಾವತ್ಯೇವ

ಹೋತವ್ಯಂ ಯದಿ ನ ವರ್ಷೇಚ್ಛ್ವೋ ಭೂತೇ ಹವಿರ್ನಿರ್ವಪೇದಹೋ
ರಾತ್ರೇ ವೈ ಮಿತ್ರಾವರುಣಾವಹೋರಾತ್ರಾಭ್ಯಾಂ ಖಲು ವೈ ಪರ್ಜನ್ಯೋ
ವರ್ಷತಿ ನಕ್ತಂ ವಾ ಹಿ ದಿವಾ ವಾ ವರ್ಷತಿ ಮಿತ್ರಾವರುಣಾವೇವ ಸ್ವೇನ
ಭಾಗಧೇಯೇನೋಪಧಾವತಿ ತಾವೇವಾಸ್ಮಾ [ತಾವೇವಾಸ್ಮೈ (೧)ಅಹೋ...]
ಅಹೋರಾತ್ರಾಭ್ಯಾಂ ಪರ್ಜನ್ಯಂ ವರ್ಷಯತೋಽಗ್ನಯೇ ಧಾಮಚ್ಛದೇ
ಪುರೋಡಾಶಮಷ್ಟಾಕಪಾಲಂ ನಿರ್ವಪೇನ್ಮಾರುತಗ್ಂ ಸಪ್ತಕಪಾಲಗ್ಂ
ಸೌರ್ಯಮೇಕಕಪಾಲಮಗ್ನಿರ್ವಾ ಇತೋ ವೃಷ್ಟಿಮುದೀರಯತಿ ಮರುತಃ
ಸೃಷ್ಟಾಂ ನಯಂತಿ ಯದಾ ಖಲು ವಾ ಅಸಾವಾದಿತ್ಯೋ ನ್ಯಙ್ರಶ್ಮಿಭಿಃ
ಪರ್ಯಾವರ್ತತೇಽಥ ವರ್ಷತಿ ಧಾಮಚ್ಛದಿವ ಖಲು ವೈ ಭೂತ್ವಾ
ವರ್ಷತ್ಯೇತಾ ವೈ ದೇವತಾ ವೃಷ್ಟ್ಯಾ ಈಶತೇ ತಾ ಏವ ಸ್ವೇನ ಭಾಗ
ಧೇಯೇನೋಪಧಾವತಿ ತಾ [ತಾಃ (೨)] ಏವಾಸ್ಮೈ ಪರ್ಜನ್ಯಂ ವರ್ಷಯನ್ತ್ಯು
ತಾವರ್ಷಿಷ್ಯನ್ವರ್ಷತ್ಯೇವ ಸೃಜಾ ವೃಷ್ಟಿಂ ದಿವ ಆಽದ್ಭಿಃ ಸಮುದ್ರಂ
ಪೃಣೇತ್ಯಾಹೇಮಾಶ್ಚೈವಾಮೂಶ್ಚಾಪಃ ಸಮರ್ಧಯತ್ಯಥೋ
ಆಭಿರೇವಾಮೂರಚ್ಛೈತ್ಯಬ್ಜಾ ಅಸಿ ಪ್ರಥಮಜಾ ಬಲಮಸಿ ಸಮುದ್ರಿಯ
ಮಿತ್ಯಾಹ ಯಥಾಯಜುರೇವೈತದುನ್ನಂಭಯ ಪೃಥಿವೀಮಿತಿ ವರ್ಷಾಹ್ವಾಂ
ಜುಹೋತ್ಯೇಷಾ ವಾ ಓಷಧೀನಾಂ ವೃಷ್ಟಿವನಿಸ್ತ್ಯಯೈವ ವೃಷ್ಟಿಮಾಚ್ಯಾವಯತಿ

ಯೇ ದೇವಾ ದಿವಿಭಾಗಾ ಇತಿ ಕೃಷ್ಣಾಜಿನಮವ ಧೂನೋತೀಮ ಏವಾಸ್ಮೈ ಲೋಕಾಃ ಪ್ರೀತಾ ಅಭೀಷ್ಟಾ ಭವಂತಿ ॥೨೯-10॥

[ಅಸ್ಮೈ ಧಾವತಿ ತಾ ವಾ ಏಕವಿಗ್‌ಂಶತಿಶ್ಚ ॥]

ಸರ್ವಾಣಿ ಛಂದಾಗ್‌ಂಸ್ಯೇತಸ್ಯಾಮಿಷ್ಟ್ಯಮನೂಚ್ಯಾನೀತ್ಯಾಹುಸ್ತ್ರಿಷ್ಟುಭೋ ವಾ ಏತದ್ವೀರ್ಯಂ ಯತ್ಕಕುದುಷ್ಣಿಹಾ ಜಗತ್ಯೈ ಯದುಷ್ಣಿಹಕಕುಭಾವನ್ವಾಹ ತೇನೈವ ಸರ್ವಾಣಿ ಛಂದಾಗ್‌ಂ ಸ್ಯವರುಂಧೇ ಗಾಯತ್ರೀ ವಾ ಏಷಾ ಯದುಷ್ಣಿಹಾ ಯಾನಿ ಚತ್ವಾರ್ಯಧ್ಯಕ್ಷರಾಣಿ ಚತುಷ್ಪಾದ ಏವ ತೇ ಪಶವೋ ಯಥಾ ಪುರೋಡಾಶೇ ಪುರೋಡಾಶೋಽಧ್ಯೇವಮೇವ ತದ್ಯದೃಚ್ಯಧ್ಯಕ್ಷರಾಣಿ ಯಜ್ಞಗತ್ಯಾ [(೧)ಪರಿದಧ್ಯಾದಂತಂ] ಪರಿದಧ್ಯಾದಂತಂ ಯಜ್ಞಂ ಗಮಯೇತ್ತ್ರಿಷ್ಟುಭಾ ಪರಿದಧಾತೀಂದ್ರಿಯಂ ವೈ ವೀರ್ಯಂ ತ್ರಿಷ್ಟುಗಿಂದ್ರಿಯ ಏವ ವೀರ್ಯೇ ಯಜ್ಞಂ ಪ್ರತಿಷ್ಠಾಪಯತಿ ನಾಂತಂ ಗಮಯತ್ಯಗ್ನೇ ತ್ರೀ ತೇ ವಾಜಿನಾ ತ್ರೀ ಷಧಸ್ಥೇತಿ ತ್ರಿವತ್ಯಾ ಪರಿದಧಾತಿ ಸರೂಪತ್ವಾಯ ಸರ್ವೋ ವಾ ಏಷ ಯಜ್ಞೋ ಯತ್ತ್ರೈಧಾತವೀಯಂ ಕಾಮಾಯಕಾಮಾಯ ಪ್ರಯುಜ್ಯತೇ ಸರ್ವೇಭ್ಯೋ ಹಿ ಕಾಮೇಭ್ಯೋ ಯಜ್ಞಃ ಪ್ರಯುಜ್ಯತೇ ತ್ರೈಧಾತವೀಯೇನ ಯಜೇತಾಭಿಚರನ್ತ್ಸರ್ವೋ ವಾ ಏಷ [ವೈ (೨) ಏಷ] ಯಜ್ಞೋ ಯತ್ತ್ರೈಧಾತವೀಯಗ್‌ಂ ಸರ್ವೇಣೈವೈನಂ ಯಜ್ಞೇನಾಭಿ ಚರತಿ ಸ್ತೃಣುತ

ಏವೈನಮೇತಯೈವ ಯಜೇತಾಭಿಚರ್ಯಮಾಣಸ್ಸರ್ವೋ ವಾ ಏಷ ಯಜ್ಞೋ
ಯತ್ತ್ರೈಧಾತವೀಯಗ್ಂ ಸರ್ವೇಣೈವ ಯಜ್ಞೇನ ಯಜತೇ ನೈನಮಭಿ
ಚರನ್ತ್ಸ್ತೃಣುತ ಏತಯೈವ ಯಜೇತ ಸಹಸ್ರೇಣ ಯಕ್ಷ್ಯಮಾಣಃ
ಪ್ರಜಾತಮೇವೈನದ್ದದಾತ್ಯೇತಯೈವ ಯಜೇತ ಸಹಸ್ರೇಣೇಜಾನೋಽನ್ತಂ
ವಾ ಏಷ ಪಶೂನಾಂ ಗಚ್ಛತಿ [ಗಚ್ಛತಿ (೩)] ಯಃ ಸಹಸ್ರೇಣ ಯಜತೇ
ಪ್ರಜಾಪತಿಃ ಖಲು ವೈ ಪಶೂನಸೃಜತ ತಾಗ್ಂಸ್ತ್ರೈಧಾತವೀಯೇನೈವಾಸೃಜತ
ಯ ಏವಂ ವಿದ್ವಾಗ್ಂಸ್ತ್ರೈಧಾತವೀಯೇನ ಪಶುಕಾಮೋ ಯಜತೇ
ಯಸ್ಮಾದೇವ ಯೋನೇಃ ಪ್ರಜಾಪತಿಃ ಪಶೂನಸೃಜತ ತಸ್ಮಾದೇವೈನಾನ್ತ್ಸೃಜತ
ಉಪೈನಮುತ್ತರಗ್ಂ ಸಹಸ್ರಂ ನಮತಿ ದೇವತಾಭ್ಯೋ ವಾ ಏಷ ಆವೃಶ್ಚ್ಯತೇ
ಯೋ ಯಕ್ಷ್ಯ ಇತ್ಯುಕ್ತ್ವಾ ನ ಯಜತೇ ತ್ರೈಧಾತವೀಯೇನ ಯಜೇತ
ಸರ್ವೋ ವಾ ಏಷ ಯಜ್ಞೋ [ಯಜ್ಞಃ (೪)] ಯತ್ತ್ರೈಧಾತವೀಯಗ್ಂ
ಸರ್ವೇಣೈವ ಯಜ್ಞೇನ ಯಜತೇ ನ ದೇವತಾಭ್ಯ ಆವೃಶ್ಚ್ಯತೇ ದ್ವಾದಶ
ಕಪಾಲಃ ಪುರೋಡಾಶೋ ಭವತಿ ತೇ ತ್ರಯಶ್ಚತುಷ್ಕಪಾಲಾಸ್ತ್ರಿಷಮೃದ್ಧತ್ವಾಯ
ತ್ರಯಃ ಪುರೋಡಾಶಾ ಭವಂತಿ ತ್ರಯ ಇಮೇ ಲೋಕಾ ಏಷಾಂ
ಲೋಕಾನಾಮಾಪ್ತ್ಯಾ ಉತ್ತರಉತ್ತರೋ ಜ್ಯಾಯಾನ್ಭವತ್ಯೇವಮಿವ ಹೀ ಮೇ
ಲೋಕಾ ಯವಮಯೋ ಮಧ್ಯ ಏತದ್ವಾ ಅಂತರಿಕ್ಷಸ್ಯ ರೂಪಗ್ಂ ಸಮೃದ್ಧ್ಯೈ

ಸರ್ವೇಷಾಮಭಿಗಮಯನ್ನ ವದ್ಯತ್ಯಥಂಬಟ್ಕಾರಗ್ಂ ಹಿರಣ್ಯಂ ದದಾತಿ
ತೇಜ ಏವಾವರುಂಧೇ [ಏವ (೫) ಅವರುಂಧೇ] ತಾರ್ಪ್ಯಂ ದದಾತಿ
ಪಶೂನೇವಾವರುಂಧೇ ಧೇನುಂ ದದಾತ್ಯಾಶಿಷ ಏವಾವರುಂಧೇ ಸಾಮ್ನೋ
ವಾ ಏಷ ವರ್ಣೋ ಯದ್ಧಿರಣ್ಯಂ ಯಜುಷಾಂ ತಾರ್ಪ್ಯಮುಕ್ಥಾಮದಾನಾಂ
ಧೇನುರೇತಾನೇವ ಸರ್ವಾನ್ ವರ್ಣಾನವರುಂಧೇ ॥೩೫–11॥

**[ಜಗತ್ಯಾಽಭಿಚರನ್ಥ್ಸರ್ವೋ ವೈ ಗಚ್ಛತಿ ಯಜ್ಞಸ್ತೇಜ ಏವ ತ್ರಿಗ್ಂಶಚ್ಚ]**

ತ್ವಷ್ಟಾ ಹತಪುತ್ರೋ ವೀಂದ್ರಗ್ಂ ಸೋಮಮಾಹರ ತ್ತಸ್ಮಿನ್ನಿಂದ್ರ ಉಪಹವ
ಮೈಚ್ಛತ ತಂ ನೋಪಾಹ್ವಯತ ಪುತ್ರಂ ಮೇಽವಧೀರಿತಿ ಸ ಯಜ್ಞವೇಶಸಂ
ಕೃತ್ವಾ ಪ್ರಾಸಹಾ ಸೋಮಮಪಿಬತ್ತಸ್ಯ ಯದತ್ಯಶಿಷ್ಯತ ತತ್ತ್ವಷ್ಟಾಽಹವ
ನೀಯಮುಪ ಪ್ರಾವರ್ತಯತ್ಸ್ವಾಹೇಂದ್ರಶತ್ರುರ್ವರ್ಧಸ್ವೇತಿ ಸ
ಯಾವದೂರ್ಧ್ವಃ ಪರಾವಿಧ್ಯತಿ ತಾವತಿ ಸ್ವಯಮೇವ ವ್ಯರಮತ ಯದಿ ವಾ
[ತಾವತ್ಪ್ರವಣಮ್ (೧) ಆಸೀದ್ಯದಿ] ತಾವತ್ಪ್ರವಣಮಾಸೀದ್ಯದಿ ವಾ
ತಾವದಧ್ಯಗ್ನೇರಾಸೀತ್ಸಂಭವನ್ನಗ್ನೀಷೋಮಾವಭಿ ಸಮಭವತ್ಸ ಇಷುಮಾತ್ರ
ಮಿಷುಮಾತ್ರಂ ವಿಷ್ವಙ್ಙವರ್ಧತ ಸ ಇಮಾನ್ಲೋಕಾನವೃಣೋದ್ಯದಿ
ಮಾನ್ಲೋಕಾನವೃಣೋತ್ತದ್ವೃತ್ರಸ್ಯ ವೃತ್ರತ್ವಂ ತಸ್ಮಾದಿಂದ್ರೋಽಬಿಭೇದಪಿ
ತ್ವಷ್ಟಾ ತಸ್ಮೈ ತ್ವಷ್ಟಾ ವಜ್ರಮಸಿಂಚತ್ತಪೋ ವೈ ಸ ವಜ್ರ ಆಸೀತ್ತಮುದ್ಯಂತುಂ

ನಾಶಕ್ನೋದಥ ವೈ ತರ್ಹಿ ವಿಷ್ಣುರನ್ಯಾ [ವಿಷ್ಣುಃ (೨) ಅನ್ಯಾ] ದೇವತಾऽऽ
ಸೀತ್ಸೋऽಬ್ರವೀದ್ವಿಷ್ಣವೇಹೀದಮಾಹರಿಷ್ಯಾವೋ ಯೇನಾಯಮಿದಮಿತಿ ಸ
ವಿಷ್ಣುಸ್ತ್ರೇಧಾऽऽತ್ಮಾನಂ ವಿನ್ಯಧತ್ತ ಪೃಥಿವ್ಯಾಂ ತೃತೀಯಮಂತರಿಕ್ಷೇ ತೃತೀಯಂ
ದಿವಿ ತೃತೀಯಮಭಿಪರ್ಯಾವರ್ತಾದ್ಧ್ಯಬಿಭೇದ್ಯತ್ಪೃಥಿವ್ಯಾಂ ತೃತೀಯ
ಮಾಸೀತ್ತೇನೇಂದ್ರೋ ವಜ್ರಮುದಯಚ್ಛದ್ವಿಷ್ಣ್ವನುಸ್ಥಿತಸ್ಸೋऽಬ್ರವೀನ್ಮಾ ಮೇ
ಪ್ರ ಹಾರಸ್ತಿ ವಾ ಇದಮ್ (೩) ಮಯಿ ವೀರ್ಯಂ ತತ್ತೇ ಪ್ರದಾಸ್ಯಾಮೀತಿ
ತದಸ್ಮೈ ಪ್ರಾಯಚ್ಛತ್ತತ್ಪ್ರತ್ಯಗೃಹ್ಣಾದಧಾಮೇತಿ ತದ್ವಿಷ್ಣ ವೇऽತಿ ಪ್ರಾಯಚ್ಛತ್ತ
ದ್ವಿಷ್ಣುಃ ಪ್ರತ್ಯಗೃಹ್ಣಾದಸ್ಮಾಸ್ವಿಂದ್ರ ಇಂದ್ರಿಯಂ ದಧಾತ್ವಿತಿ ಯದಂತರಿಕ್ಷೇ
ತೃತೀಯಮಾಸೀತ್ತೇನೇಂದ್ರೋ ವಜ್ರಮುದಯಚ್ಛದ್ವಿಷ್ಣ್ವನುಸ್ಥಿತಃ
ಸೋऽಬ್ರವೀನ್ಮಾ ಮೇ ಪ್ರ ಹಾರಸ್ತಿ ವಾ ಇದಂ (೪) ಮಯಿ ವೀರ್ಯಂ ತತ್ತೇ
ಪ್ರದಾಸ್ಯಾಮಿತಿ ತದಸ್ಮೈ ಪ್ರಾಯಚ್ಛತ್ತತ್ಪ್ರತ್ಯಗೃಹ್ಣಾದ್ದ್ವಿರ್ಮಾऽಧಾ ಇತಿ
ತದ್ವಿಷ್ಣವೇऽತಿ ಪ್ರಾಯಚ್ಛತ್ತದ್ವಿಷ್ಣುಃ ಪ್ರತ್ಯಗೃಹ್ಣಾದಸ್ಮಾಸ್ವಿಂದ್ರ ಇಂದ್ರಿಯಂ
ದಧಾತ್ವಿತಿ ಯದ್ದಿವಿ ತೃತೀಯಮಾಸೀತ್ತೇನೇಂದ್ರೋ ವಜ್ರಮುದಯ
ಚ್ಛದ್ವಿಷ್ಣ್ವನುಸ್ಥಿತಸ್ಸೋऽಬ್ರವೀನ್ಮಾ ಮೇ ಪ್ರ ಹಾರ್ಯೇನಾಹಮಿದಮಸ್ಮಿ
[ಯೇನಾಹಮ್ (೫) ಇದಮಸ್ಮಿ] ತತ್ತೇ ಪ್ರದಾಸ್ಯಾಮೀತಿ ತ್ವೀ 3
ಇತ್ಯಬ್ರವೀತ್ಸಂಧಾಂ ತು ಸಂದಧಾವಹೈ ತ್ವಾಮೇವ ಪ್ರವಿಶಾನೀತಿ ಯನ್ಮಾಂ

ಪ್ರವಿಶೇಃ ಕಿಂ ಮಾ ಭುಂಜ್ಯಾ ಇತ್ಯಬ್ರವೀತ್ತ್ವಾಮೇವೇಂಧೀಯ ತವ ಭೋಗಾಯ ತ್ವಾಂ ಪ್ರವಿಶೇಯಮಿತ್ಯಬ್ರವೀತ್ತಂ ವೃತ್ರಃ ಪ್ರಾವಿಶದುದರಂ ವೈ ವೃತ್ರಃ ಕ್ಷುತ್ಖಲು ವೈ ಮನುಷ್ಯಸ್ಯ ಭ್ರಾತೃವ್ಯೋ ಯ [ಯಃ (೬) ಏವಂ] ಏವಂ ವೇದ ಹಂತಿ ಕ್ಷುಧಂ ಭ್ರಾತೃವ್ಯಂ ತದಸ್ಮೈ ಪ್ರಾಯಚ್ಛತ್ತತ್ಪ್ರತ್ಯಗೃಹ್ಣಾತ್ತ್ರಿರ್ಮಾಽಧಾ ಇತಿ ತದ್ವಿಷ್ಣವೇಽತಿ ಪ್ರಾಯಚ್ಛತ್ತದ್ವಿಷ್ಣುಃ ಪ್ರತ್ಯಗೃಹ್ಣಾದಸ್ಮಾಸ್ವಿಂದ್ರ ಇಂದ್ರಿಯಂ ದಧಾತ್ವಿತಿ ಯತ್ತ್ರಿಃ ಪ್ರಾಯಚ್ಛತ್ತ್ರಿಃ ಪ್ರತ್ಯಗೃಹ್ಣಾತ್ತತ್ತ್ರಿಧಾತೋಸ್ತ್ರಿ ಧಾತುತ್ವಂ ಯದ್ವಿಷ್ಣುರನ್ವತಿಷ್ಠತ ವಿಷ್ಣವೇಽತಿ ಪ್ರಾಯಚ್ಛತ್ತಸ್ಮಾದೈಂದ್ರಾವೈಷ್ಣವಗ್ಂ ಹವಿರ್ಭವತಿ ಯದ್ವಾ ಇದಂ ಕಿಂ ಚ ತದಸ್ಮೈ ತತ್ಪ್ರಾಯಚ್ಛದೃಚಃ ಸಾಮಾನಿ ಯಜೂಗ್ಂಷಿ ಸಹಸ್ರಂ ವಾ ಅಸ್ಮೈ ತತ್ಪ್ರಾಯಚ್ಛತ್ತಸ್ಮಾತ್ಸಹಸ್ರದಕ್ಷಿಣಮ್ ॥೪೨-12॥

**[ಪ್ರವಣಂ ವಿಷ್ಣುರ್ವಾ ಇದಮಿದಮಹಂ ಯೋ ಭವತ್ಯೇಕವಿಗ್ಂಶತಿಶ್ಚ ॥]**

ದೇವಾ ವೈ ರಾಜನ್ಯಾಜ್ಜಾಯಮಾನಾದಬಿಭಯುಸ್ತಮಂತರೇವ ಸಂತಂ ದಾಮ್ನಾಽಪೌಂಭನ್ಸ್ಸ ವಾ ಏಷೋಽಪೋಬ್ಧೋ ಜಾಯತೇ ಯದ್ರಾಜನ್ಯೋ ಯದ್ವಾ ಏಷೋಽನಪೋಬ್ಧೋ ಜಾಯೇತ ವೃತ್ರಾನ್ಘ್ನಗ್ಗ್ಂಶ್ಚರೇದ್ಯಂ ಕಾಮಯೇತ ರಾಜನ್ಯಮನಪೋಬ್ಧೋ ಜಾಯೇತ ವೃತ್ರಾನ್ಘ್ನಗ್ಗ್ಂಶ್ಚರೇದಿತಿ ತಸ್ಮಾ ಏತಮೈಂದ್ರಾಬಾರ್ಹಸ್ಪತ್ಯಂ ಚರುಂ ನಿರ್ವಪೇದೈಂದ್ರೋ ವೈ

ರಾಜನ್ಯೋ ಬ್ರಹ್ಮ ಬೃಹಸ್ಪತಿರ್ಬ್ರಹ್ಮಣ್ಯೈವೈನಂ ದಾಮ್ನೋಽಪೋಂಭನಾನ್ಮುಂಚತಿ ಹಿರಣ್ಮಯಂ ದಾಮ ದಕ್ಷಿಣಾ ಸಾಕ್ಷಾದೇವೈನಂ ದಾಮ್ನೋಽಪೋಂಭನಾನ್ಮುಂಚತಿ ॥೪೩-13॥

[ಏನಂ ದ್ವಾದಶ ಚ ।]

ನವೋನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರೇ । ಭಾಗಂ ದೇವೇಭ್ಯೋ ವಿದಧಾತ್ಯಾಯನ್ಪ್ರ ಚಂದ್ರಮಾಸ್ತಿರತಿ ದೀರ್ಘ ಮಾಯುಃ । ಯಮಾದಿತ್ಯಾ ಅಗ್ಂಶುಮಾಪ್ಯಾಯಯಂತಿ ಯಮಕ್ಷಿತ ಮಕ್ಷಿತಯಃ ಪಿಬಂತಿ । ತೇನ ನೋ ರಾಜಾ ವರುಣೋ ಬೃಹಸ್ಪತಿರಾಪ್ಯಾಯ ಯಂತು ಭುವನಸ್ಯ ಗೋಪಾಃ । ಪ್ರಾಚ್ಯಾಂ ದಿಶಿ ತ್ವಮಿಂದ್ರಾಸಿ ರಾಜೋತೋದೀಚ್ಯಾಂ ವೃತ್ರಹನ್ವೃತ್ರಹಾಽಸಿ । ಯತ್ರ ಯಂತಿ ಸ್ರೋತ್ಯಾಸ್ತಜ್ಜಿತಂ [ಸ್ರೋತ್ಯಾಸ್ತತ್ (೧) ಜಿತಂ] ತೇ ದಕ್ಷಿಣತೋ ವೃಷಭ ಏಧಿ ಹವ್ಯಃ । ಇಂದ್ರೋ ಜಯಾತಿ ನ ಪರಾಜಯಾತಾ ಅಧಿರಾಜೋ ರಾಜಸು ರಾಜಯಾತಿ । ವಿಶ್ವಾ ಹಿ ಭೂಯಾಃ ಪೃತನಾ ಅಭಿಷ್ಟೀರುಪಸದ್ಯೋ ನಮಸ್ಯೋ ಯಥಾಽಸತ್ । ಅಸ್ಯೇದೇವ ಪ್ರರಿರಿಚೇ ಮಹಿತ್ವಂ ದಿವಃ ಪೃಥಿವ್ಯಾಃ ಪರ್ಯಂತರಿಕ್ಷಾತ್ । ಸ್ವರಾಡಿಂದ್ರೋ ದಮ ಆ ವಿಶ್ವಗೂರ್ತಃ ಸ್ವರಿರಮತ್ರೋ ವವಕ್ಷೇ ರಣಾಯ । ಅಭಿ ತ್ವಾ ಶೂರ ನೋನುಮೋಽದುಗ್ಧಾ

ಇವ ಧೇನವಃ । ಈಶಾನಮಸ್ಯ [ಈಶಾನವ್ (೨) ಅಸ್ಯ] ಜಗತಃ ಸುವರ್ದೃಶಮೀಶಾನಮಿಂದ್ರ ತಸ್ಥುಷಃ । ತ್ವಾಮಿದ್ಧಿ ಹವಾಮಹೇ ಸಾತಾ ವಾಜಸ್ಯ ಕಾರವಃ । ತ್ವಾಂ ವೃತ್ರೇಷ್ವಿಂದ್ರ ಸತ್ಪತಿಂ ನರಸ್ತ್ವಾಂ ಕಾಷ್ಠಾಸ್ವರ್ವತಃ । ಯದ್ದ್ಯಾವ ಇಂದ್ರ ತೇ ಶತಗ್ಂ ಶತಂ ಭೂಮೀರುತ ಸ್ಯುಃ । ನ ತ್ವಾ ವಜ್ರಿನ್ಥ್ಸಹಸ್ರಗ್ಂ ಸೂರ್ಯಾ ಅನು ನ ಜಾತಮಷ್ಟ ರೋದಸೀ । ಪಿಬಾ ಸೋಮಮಿಂದ್ರ ಮಂದತು ತ್ವಾ ಯಂ ತೇ ಸುಷಾವ ಹರ್ಯಶ್ವಾದ್ರಿಃ (೨) । ಸೋತು ರ್ಬಾಹುಭ್ಯಾಗ್ಂ ಸುಯತೋ ನಾರ್ವಾ । ರೇವತೀರ್ನಸ್ಸಧಮಾದ ಇಂದ್ರೇ ಸಂತು ತುವಿವಾಜಾಃ । ಕ್ಷುಮಂತೋ ಯಾಭಿರ್ಮದೇಮ । ಉದಗ್ನೇ ಶುಚಯಸ್ತವ ವಿ ಜ್ಯೋತಿಷೋದು ತ್ಯಂ ಜಾತವೇದಸಗ್ಂ ಸಪ್ತ ತ್ವಾ ಹರಿತೋ ರಥೇ ವಹಂತಿ ದೇವ ಸೂರ್ಯ । ಶೋಚಿಷ್ಕೇಶಂ ವಿಚಕ್ಷಣ । ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಆಽಪ್ರಾ ದ್ಯಾವಾಪೃಥಿವೀ ಅಂತರಿಕ್ಷಗ್ಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ [ತಸ್ಥುಷಃ (೪)ಚ] । ವಿಶ್ವೇ ದೇವಾ ಋತಾವೃಧ ಋತುಭಿರ್ ಹವನಶ್ರುತಃ । ಜುಷಂತಾಂ ಯುಜ್ಯಂ ಪಯಃ ॥ ವಿಶ್ವೇ ದೇವಾಃ ಶೃಣುತೇಮಗ್ಂ ಹವಂ ಮೇ ಯೇ ಅಂತರಿಕ್ಷೇ ಯ ಉಪ ದ್ಯವಿ ಷ್ಠ । ಯೇ ಅಗ್ನಿಜಿಹ್ವಾ ಉತ ವಾ ಯಜತ್ರಾ ಆಸದ್ಯಾಸ್ಮಿನ್ಬರ್ಹಿಷಿ ಮಾದಯಧ್ವಮ್ ॥೪೮-14॥

**[ತದೀಶಾನಮದ್ರಿಸ್ತಸ್ಥುಷಸ್ತ್ರಿಗ್ಂಶಚ್ಚ ॥]**

ದೇವಾ ಮನುಷ್ಯಾ ದೇವಾಸುರಾ ಅಬ್ರುವನ್ದೇವಾಸುರಾಸ್ತೇಷಾಂ
ಗಾಯತ್ರೀ ಪ್ರಜಾಪತಿಸ್ತಾ ಯತ್ರಾಗ್ನೇ ಗೋಭಿಶ್ಚಿತ್ರಯಾ ಮಾರುತಂ
ದೇವಾ ವಸವ್ಯಾ ಅಗ್ನೇ ಮಾರುತಮಿತಿ ದೇವಾ ವಸವ್ಯಾ ದೇವಾಃ
ಶರ್ಮಣ್ಯಾಃ ಸರ್ವಾಣಿ ತ್ವಷ್ಟಾ ಹತಪುತ್ರೋ ದೇವಾ ವೈ ರಾಜನ್ಯಾ
ನ್ನವೋನವಶ್ಚತುರ್ದಶ ॥೧೪॥

**ದೇವಾ ಮನುಷ್ಯಾಃ ಪ್ರಜಾಂ ಪಶೂನ್ದೇವಾ ವಸವ್ಯಾಃ**
**ಪರಿದಧ್ಯಾದಿದಮಸ್ತ್ವೃಷ್ಟಾ ಚತ್ವಾರಿಗ್ಂಶತ್ ॥೪೮॥**

ದೇವಾ ಮನುಷ್ಯಾ ಮಾದಯಧ್ವಮ್ ॥

**ಹರಿಃ ಓಂ**

**॥ಶ್ರೀ ಕೃಷ್ಣಾರ್ಪಣಮಸ್ತು॥**
**ಇತಿ ದ್ವಿತೀಯಕಾಂಡೇ ಚತುರ್ಥಃ ಪ್ರಶ್ನಃ**



# ತೈತ್ತಿರೀಯ ಸಂಹಿತಾ

## ದ್ವಿತೀಯಕಾಂಡಃ ತೃತೀಯಃ ಪ್ರಶ್ನಃ

**ಹರಿಃ ಓಮ್ ।**

ಆದಿತ್ಯೇಭ್ಯೋ ಭುವದ್ವದ್ಭ್ಯಶ್ಚರುಂ ನಿರ್ವಪೇದ್ಭೂತಿಕಾಮ

---

**ಆದಿತ್ಯೇಭ್ಯಃ ।** ಭುವದ್ವದ್ಭ್ಯ ಇತಿ ಭುವದ್ವತ್–ಭ್ಯಃ । ಚರುಮ್ । ನಿರಿತಿ । ವಪೇತ್ । ಭೂತಿ ಕಾಮ ಇತಿ ಭೂತಿ–ಕಾಮಃ ।

---

### ಉಪೋದ್ಘಾತ

**ಎರಡನೆಯ ಪ್ರಪಾಠಕದಲ್ಲಿ ಕೆಲವು ಕಾಮ್ಯೇಷ್ಟಿಗಳು ವಿಹಿತವಾಗಿವೆ. ಹಲವು ಕಾಮ್ಯೇಷ್ಟಿಗಳು ಈ ಮೂರು ಮತ್ತು ನಾಲ್ಕನೆಯ ಪ್ರಪಾಠಕಗಳಲ್ಲಿಯೂ ಹೇಳಲ್ಪಟ್ಟಿವೆ. ಮೂರು ಪ್ರಪಾಠಕಗಳಲ್ಲಿಯೂ ಕಾಮ್ಯೇಷ್ಟಿಗಳೇ ಹೇಳಲ್ಪಟ್ಟಿದ್ದರೂ ಈ ಪ್ರಪಾಠಕಭೇದವು ಉಂಟಾಗಲು ವೈದಿಕಸಂಪ್ರದಾಯವೇ ಕಾರಣವಾಗಿದೆ. ಈ ಮೂರನೆಯ ಪ್ರಪಾಠಕದಲ್ಲಿ ಹದಿನಾಲ್ಕು ಅನುವಾಕಗಳಿವೆ.**

| | |
|---|---|
| ಭೂತಿಕಾಮಃ | ಐಶ್ವರ್ಯವನ್ನು ಬಯಸುವವನು |
| ಭುವದ್ವದ್ಭ್ಯಃ ಆದಿತ್ಯೇಭ್ಯಃ | *ಭುವದ್ವಂತರಾದ ಆದಿತ್ಯರಿಗಾಗಿ |
| ಚರುಮ್ ನಿರ್ವಪೇತ್ | ಚರುಯಾಗವನ್ನು ಅನುಷ್ಠಿಸಬೇಕು. |

---

ಐಶ್ವರ್ಯವನ್ನು ಬಯಸುವವನು ಭುವದ್ವಂತರಾದ ಆದಿತ್ಯರನ್ನು ಉದ್ದೇಶಿಸಿ, ಚರುಯಾಗವನ್ನು ಮಾಡಬೇಕು.

---

* ಯಾಜ್ಯಾನುವಾಕ್ಯೆಯ ಮಂತ್ರಗಳಲ್ಲಿ '**ಭವತಾ ಮೃಡಯಂತಃ**' '**ಆದಿತ್ಯಾನಾಂ ಭವತಿ ಪ್ರಣೀತೌ**' ಎಂಬುದಾಗಿ ಇದೆ. ಈ ಮಂತ್ರದಿಂದ ಪ್ರತಿಪಾದ್ಯರಾದ ದೇವತೆಗಳು ಭುವದ್ವಂತರು. ಹೀಗೆಯೇ '**ಧಾರಯತ್**' ಎಂಬ ಶಬ್ದವುಳ್ಳ ಯಾಜ್ಯೆಯಿಂದ ಪ್ರತಿಪಾದ್ಯರಾದ ದೇವತೆಗಳು ಧಾರಯದ್ವಂತರು.

ಆದಿತ್ಯಾ ವಾ ಏತಂ ಭೂತ್ಯೈ ಪ್ರತಿನುದಂತೇ ಯೋಽಲಂ

ಭೂತ್ಯೈ ಸನ್ಭೂತಿಂ ನ ಪ್ರಾಪ್ನೋತ್ಯಾದಿತ್ಯಾನೇವ

ಭುವದ್ವತಃ ಸ್ವೇನ ಭಾಗಧೇಯೇನೋಪಧಾವತಿ

---

ಆದಿತ್ಯಾಃ । ವೈ । ಏತಮ್ । ಭೂತ್ಯೈ । ಪ್ರತೀತಿ । ನುದಂತೇ । ಯಃ । ಅಲಮ್ । ಭೂತ್ಯೈ । ಸನ್ । ಭೂತಿಮ್ । ನ । ಪ್ರಾಪ್ನೋತೀತಿ ಪ್ರ–ಆಪ್ನೋತಿ । ಆದಿತ್ಯಾನ್ । ಏವ । ಭುವದ್ವತ ಇತಿ ಭುವತ್ – ವತಃ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಯಃ ಭೂತ್ಯೈ ಅಲಮ್ ಸನ್ ಭೂತಿಮ್ ನ ಪ್ರಾಪ್ನೋತಿ | ಯಾವನು ಐಶ್ವರ್ಯವನ್ನು ಹೊಂದಲು ಸಮರ್ಥನಾಗಿದ್ದರೂ ಐಶ್ವರ್ಯವನ್ನು ಹೊಂದದಿರುವನೋ |
| ಏತಮ್ ಆದಿತ್ಯಾಃ ಭೂತ್ಯೈ ಪ್ರತಿನುದಂತೇ ವೈ | ಇವನನ್ನು ಆದಿತ್ಯದೇವತೆಗಳು ಐಶ್ವರ್ಯಕ್ಕಾಗಿ ಪ್ರೇರಿಸುತ್ತಾರಷ್ಟೆ. |
| ಆದಿತ್ಯಾನ್ ಭುವದ್ವತಃ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದಿಂದ ಭುವದ್ವಂತರಾದ ಆದಿತ್ಯರನ್ನು ಅವರ ಭಾಗಗಳನ್ನು ಕೊಟ್ಟು ಸೇವಿಸುತ್ತಾನೆ. |

---

ಯಾರು ಐಶ್ವರ್ಯವನ್ನು ಹೊಂದಲು ಸಮರ್ಥರಾದರೂ ಐಶ್ವರ್ಯವನ್ನು ಪಡೆಯಲಾರರೋ ಅವರಿಗೆ ಐಶ್ವರ್ಯವು ದೊರೆಯುವಂತೆ ಆದಿತ್ಯರೇ ಪ್ರೇರಿಸುತ್ತಾರೆ. ಅವರನ್ನು ಐಶ್ವರ್ಯವನ್ನು ಹೊಂದುವಂತೆಯೂ ಪ್ರೇರಿಸುತ್ತಾರೆ. ಈ ಯಾಗವನ್ನು ಮಾಡುವುದರಿಂದ ಯಜಮಾನನು ಐಶ್ವರ್ಯವನ್ನು ನೀಡಬಲ್ಲ ಆದಿತ್ಯರಿಗೆ ಸಲ್ಲಬೇಕಾದ ಭಾಗವನ್ನು ಸಮರ್ಪಿಸಿ ಸೇವಿಸುತ್ತಾನೆ.

ತ ಏವೈನಂ ಭೂತಿಂ ಗಮಯಂತಿ ಭವತ್ಯೇವಾಽಽದಿತ್ಯೇಭ್ಯೋ

ಧಾರಯದ್ವದ್ಭ್ಯಶ್ಚರುಂ ನಿರ್ವಪೇದಪರುದ್ಧೋ

ವಾಽಪರುಧ್ಯಮಾನೋ ವಾಽದಿತ್ಯಾ ವಾ ಅಪರೋದ್ಧಾರ

ತೇ । ಏವ । ಏನಮ್ । ಭೂತಿಮ್ । ಗಮಯಂತಿ । ಭವತಿ । ಏವ । ಆದಿತ್ಯೇಭ್ಯಃ ।
ಧಾರಯದ್ವದ್ಭ್ಯ ಇತಿ ಧಾರಯದ್ವತ್-ಭ್ಯಃ । ಚರುಮ್ । ನಿರಿತಿ । ವಪೇತ್ । ಅಪರುದ್ಧ
ಇತ್ಯಪ – ರುದ್ಧಃ । ವಾ । ಅಪರುಧ್ಯಮಾನ ಇತ್ಯಪ-ರುಧ್ಯಮಾನಃ । ವಾ । ಆದಿತ್ಯಾಃ ।
ವೈ । ಅಪರೋದ್ಧಾರ ಇತ್ಯಪ-ರೋದ್ಧಾರಃ ।

| | |
|---|---|
| ತೇ ಏವ ಏನಮ್ ಭೂತಿಮ್ ಗಮಯಂತಿ | ತೃಪ್ತರಾದ ಆ ಆದಿತ್ಯದೇವತೆಗಳೇ ಈ ಯಜಮಾನನು ಐಶ್ವರ್ಯವನ್ನು ಪಡೆಯುವಂತೆ ಮಾಡುತ್ತಾರೆ. |
| ಭವತಿ ಏವ | ಯಜಮಾನನು ಐಶ್ವರ್ಯವಂತನೇ ಆಗುತ್ತಾನೆ. |

**ರಾಜ್ಯಭ್ರಷ್ಟನಿಗೆ, ರಾಜ್ಯಭ್ರಂಶವಾಗಬಹುದಾದವನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| ಅಪರುದ್ಧಃ ವಾ | ರಾಜ್ಯಭ್ರಷ್ಟನಾದವನಾಗಲೀ |
| ಅಪರುಧ್ಯಮಾನಃ ವಾ | ರಾಜ್ಯಭ್ರಂಶವಾಗಬಹುದಾದವನಾಗಲೀ |
| ಆದಿತ್ಯೇಭ್ಯಃ ಧಾರಯದ್ವದ್ಭ್ಯಃ ಚರುಮ್ ನಿರ್ವಪೇತ್ | ಧಾರಯದ್ವಂತರಾದ ಆದಿತ್ಯರಿಗಾಗಿ ಚರುಯಾಗವನ್ನು ಮಾಡಬೇಕು. |
| ಆದಿತ್ಯಾಃ ವೈ ಅಪರೋದ್ಧಾರಃ | ಆದಿತ್ಯರೇ ರಾಜ್ಯಭ್ರಂಶ ಮಾಡುವರಷ್ಟೆ. |

ಇದರಿಂದ ತೃಪ್ತರಾದ ಆ ಭುವದ್ವಂತರಾದ ಆದಿತ್ಯರು ಈ ಯಜಮಾನನಿಗೆ ಐಶ್ವರ್ಯವನ್ನು ಕೊಡುತ್ತಾರೆ. ಯಜಮಾನನು ಐಶ್ವರ್ಯವಂತನೇ ಆಗುತ್ತಾನೆ.

ರಾಜ್ಯಭ್ರಷ್ಟನಾಗಲೀ, ಶತ್ರುಗಳ ಆಕ್ರಮಣದಿಂದ ರಾಜ್ಯಭ್ರಂಶಕ್ಕೆ ಗುರಿಯಾಗಬಹುದಾದವನಾಗಲೀ ಧಾರಯದ್ವಂತರಾದ ಆದಿತ್ಯರಿಗಾಗಿ ಚರುಯಾಗವನ್ನು ಮಾಡಬೇಕು. ಆದಿತ್ಯರೇ ರಾಜ್ಯಭ್ರಂಶಕ್ಕೆ ಕಾರಣರು.

ಆದಿತ್ಯಾ ಅವಗಮಯಿತಾರ ಆದಿತ್ಯಾನೇವ ಧಾರಯದ್ವತಃ

[ಧಾರಯದ್ವತಃ (೧)] ಸ್ವೇನ ಭಾಗಧೇಯೇನೋಪ

ಧಾವತಿ ತ ಏವೈನಂ ವಿಶಿ ದಾಧೃತ್ಯನಪರುಧ್ಯೋ

---

ಆದಿತ್ಯಾಃ । ಅವಗಮಯಿತಾರ ಇತ್ಯವ – ಗಮಯಿತಾರಃ । ಆದಿತ್ಯಾನ್ । ಏವ । ಧಾರಯದ್ವತ ಇತಿ ಧಾರಯತ್–ವತಃ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ತೇ । ಏವ । ಏನಮ್ । ವಿಶಿ । ದಾಧೃತಿ । ಅನಪರುಧ್ಯ ಇತ್ಯನಪ–ರುಧ್ಯಃ ।

---

| | |
|---|---|
| ಆದಿತ್ಯಾಃ ಅವಗಮಯಿತಾರಃ | ಆದಿತ್ಯರೇ ಮತ್ತೆ ರಾಜ್ಯವನ್ನು ಕೊಡತಕ್ಕವರು. |
| ಧಾರಯದ್ವತಃ ಆದಿತ್ಯಾನ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದಿಂದ ಧಾರಯದ್ವಂತರಾದ ಆದಿತ್ಯರಿಗೆ ಅವರ ಹವಿರ್ಭಾಗವನ್ನಿತ್ತು ಸೇವಿಸುತ್ತಾನೆ. |
| ತೇ ಏವ ಏನಮ್ ವಿಶಿ ದಾಧೃತಿ | ಆದಿತ್ಯರೇ ಈ ಯಜಮಾನನನ್ನು ಪ್ರಜೆಗಳಲ್ಲಿ ಪ್ರತಿಷ್ಠೆ ಮಾಡುತ್ತಾರೆ. |
| ಅನಪರುಧ್ಯಃ ಭವತಿ | ಯಜಮಾನನು ರಾಜ್ಯಭ್ರಷ್ಟನಾಗುವುದಿಲ್ಲ. |

---

ಅವರೇ ಮತ್ತೆ ರಾಜ್ಯವನ್ನು ಕೊಡಬಲ್ಲವರು. ಅವರು ಯಜಮಾನನ ಯಾಗದಿಂದ ತೃಪ್ತರಾಗಿ – ಯಜಮಾನನು ಪ್ರಜೆಗಳ ಅನುರಾಗವನ್ನು ಪಡೆದು – ರಾಜ್ಯದಲ್ಲಿ ನೆಲೆಗೊಳ್ಳುವಂತೆ ಮಾಡುತ್ತಾರೆ.

ಭವತ್ಯದಿತೇಽನುಮನ್ಯಸ್ವೇತ್ಯಪರುಧ್ಯಮಾನೋಽಸ್ಯ

ಪದಮಾದದಿತೇಯಂ ವಾ ಅದಿತಿರಿಯಮೇವಾಸ್ಮೈ

ರಾಜ್ಯಮನುಮನ್ಯತೇ ಸತ್ಯಾಶೀರಿತ್ಯಾಹ

---

ಭವತಿ । **ಅದಿತೇ** । ಅನ್ವಿತಿ । ಮನ್ಯಸ್ವ । ಇತಿ । ಅಪರುಧ್ಯಮಾನ ಇತ್ಯಪ–ರುಧ್ಯಮಾನಃ ।

ಅಸ್ಯ । ಪದಮ್ । ಏತಿ । ದದೀತ । ಇಯಮ್ । ವೈ । ಅದಿತಿಃ । ಇಯಮ್ । ಏವ । ಅಸ್ಮೈ ।

ರಾಜ್ಯಮ್ । ಅನ್ವಿತಿ । ಮನ್ಯತೇ । **ಸತ್ಯಾ** । ಆಶೀರಿತ್ಯಾ – ಶೀಃ । ಇತಿ । ಆಹ ।

---

| **ಮಂತ್ರ** | **ವಿನಿಯೋಗ** |
|---|---|
| **ಅದಿತೇಽನುಮನ್ಯಸ್ವ ॥** | ಕಾಲಿನ ಧೂಳನ್ನು ಸಂಗ್ರಹಿಸಲು |
| **ಸತ್ಯಾಶೀಃ ॥** | ಯಜಮಾನನ ಬೊಗಸೆಯಲ್ಲಿ ಹಾಕಲು **ಭ.ಭಾ.** |

---

❖ **ಅದಿತೇ !** = ಅದಿತಿದೇವಿಯೇ ! **ಅನುಮನ್ಯಸ್ವ** = [ರಾಜ್ಯವನ್ನು ಪಡೆಯಲು] ಅನುಮತಿಸು. ❖ **ಆಶೀಃ** = [ನಮ್ಮ ರಾಜ್ಯವನ್ನು ಮತ್ತೆ ಹೊಂದಬೇಕೆಂಬ] ಶುಭಾಶಂಸನೆಯು; **ಸತ್ಯಾ** = ಸತ್ಯವಾಗಲಿ ಎಂದು [ಯಜಮಾನನು ಹೇಳುತ್ತಾನೆ].

---

**ಈ ಯಾಗದಲ್ಲಿನ ಪ್ರಯೋಗವಿಶೇಷ; ಪ್ರಶಂಸೆ**

| | |
|---|---|
| **[ಅದಿತೇ ಅನುಮನ್ಯಸ್ವ]** ಇತಿ ಅಪರುಧ್ಯಮಾನಃ ಅಸ್ಯ ಪದಮ್ ಆದದೀತ | ಮೇಲಿನ ಮಂತ್ರದಿಂದ ಆಕ್ರಮಣಕ್ಕೆ ಗುರಿಯಾದವನು ಆಕ್ರಮಣ ಮಾಡುವವನ ಕಾಲಿನ ಧೂಳನ್ನು ಸಂಗ್ರಹಿಸಬೇಕು. |
| ಇಯಮ್ ವೈ ಅದಿತಿಃ | ಈ ಪೃಥಿವಿಯೇ ಅಖಂಡಿತಳಾದ ಅದಿತಿ ದೇವಿಯಾಗಿದ್ದಾಳೆ. |
| ಇಯಮ್ ಏವ ಅಸ್ಮೈ ರಾಜ್ಯಮ್ ಅನುಮನ್ಯತೇ | ಈ ಪೃಥಿವೀದೇವಿಯೇ ಈ ರಾಜನಿಗೆ ಮತ್ತೆ ರಾಜ್ಯವನ್ನು ಪಡೆಯಲು, ರಾಜ್ಯಭ್ರಂಶವಾಗದಿರಲು ಅನುಮತಿಸುತ್ತಾಳೆ. |
| **[ಸತ್ಯಾಶೀಃ]** ಇತಿ ಆಹ | **'ಸತ್ಯಾಶೀಃ'** ಎಂಬ ಮಂತ್ರವನ್ನು ಯಜಮಾನನು ಹೇಳುತ್ತಾನೆ. |

# ಸತ್ಯಾಮೇವಾಽಽಶಿಷಂ ಕುರುತ ಇಹ ಮನ ಇತ್ಯಾಹ
# ಪ್ರಜಾ ಏವಾಸ್ಮೈ ಸಮನಸಃ ಕರೋತ್ಯುಪ ಪ್ರೇತ ಮರುತಃ
# [ಮರುತಃ (೨) ಸುದಾನವ] ಸುದಾನವ ಏನಾ
# ವಿಶ್ಪತಿನಾಽಭ್ಯಮುಗ್ಂ ರಾಜಾನಮಿತ್ಯಾಹ

---

ಸತ್ಯಾಮ್ । ಏವ । ಆಶಿಷಮಿತ್ಯಾ–ಶಿಷಮ್ । ಕುರುತೇ । ಇಹ । ಮನಃ । ಇತಿ । ಆಹ । ಪ್ರಜಾ ಇತಿ ಪ್ರ–ಜಾಃ । ಏವ । ಅಸ್ಮೈ । ಸಮನಸ ಇತಿ ಸ–ಮನಸಃ । ಕರೋತಿ । ಉಪ । ಪ್ರೇತಿ । ಇತ । ಮರುತಃ । ಸುದಾನವ ಇತಿ ಸು–ದಾನವಃ । ಏನಾ । ವಿಶ್ಪತಿನಾ । ಅಭೀತಿ । ಅಮುಮ್ । ರಾಜಾನಮ್ । ಇತಿ । ಆಹ ।

---

| | |
|---|---|
| ಸತ್ಯಾಮ್ ಏವ ಆಶಿಷಮ್ ಕುರುತೇ | [ಈ ಮಂತ್ರವು] ಯಜಮಾನನ ಶುಭಾಶಂಸನೆಯನ್ನು ದಿಟಗೊಳಿಸುತ್ತದೆ. |

| ಮಂತ್ರ | ವಿನಿಯೋಗ |
|---|---|
| **ಇಹ ಮನಃ ॥** | ಧೂಳನ್ನು ಪುಡಿಗೊಳಿಸಲು **ಭ.ಭಾ.** |
| **ಉಪ.......... ರಾಜಾನಮ್ ॥** | ಧೂಳನ್ನು ಕೊಂಡೊಯ್ಯಲು **ಭ.ಭಾ.** |

---

❖ **ಇಹ** = ಈ ಯಜಮಾನನಲ್ಲಿಯೇ; **ಮನಃ** = [ಪ್ರಜೆಗಳ] ಮನಸ್ಸು ಅನುರಕ್ತವಾಗಲಿ.
❖ **ಸುದಾನವಃ** = ಇಷ್ಟಾರ್ಥವನ್ನೀಯುವ; **ಮರುತಃ** = ಮರುದ್ದೇವತೆಗಳೇ ! **ಏನಾ ವಿಶ್ಪತಿನಾ** = ಆಕ್ರಮಣವನ್ನೆಸಗುವ ಈ ರಾಜನೊಡನೆ [ಬಂದು]; **ಅಮುಮ್ ರಾಜಾನಮ್ ಅಭಿ** = ಆಕ್ರಮಣಕ್ಕೆ ಗುರಿಯಾದ ರಾಜನಿಗೆ [ಪ್ರಜೆಗಳ ಹಿಮ್ಮುಖವಾದ ಮನಸ್ಸು] ಅಭಿಮುಖವಾಗುವಂತೆ [ಮಾಡಲು] **ಉಪ ಪ್ರ ಇತ** = ಸಮೀಪಕ್ಕೆ ಬೇಗ ಬನ್ನಿರಿ.

---

| | |
|---|---|
| **[ಇಹ ಮನಃ]** ಇತಿ ಆಹ | **'ಇಹ ಮನಃ'** ಎಂಬ ಮಂತ್ರವನ್ನು ಹೇಳುತ್ತಾನೆ. |

# ಮಾರುತೀ ವೈ ವಿಡ್ಜ್ಯೇಷ್ಠೋ ವಿಶ್ಪತಿರ್ವಿಶೈವೈನಗ್ಂ ರಾಷ್ಟ್ರೇಣ ಸಮರ್ಧಯತಿ

ಮಾರುತೀ । ವೈ । ವಿಟ್ । ಜ್ಯೇಷ್ಠಃ । ವಿಶ್ಪತಿಃ । ವಿಶಾ । ಏವ । ಏನಮ್ । ರಾಷ್ಟ್ರೇಣ । ಸಮಿತಿ । ಅರ್ಧಯತಿ ।

| | |
|---|---|
| ಅಸ್ಮೈ ಪ್ರಜಾಃ ಸಮನಸಃ ಕರೋತಿ ಏವ | ಪ್ರಜೆಗಳು ರಾಜನೊಡನೆ ಸಮಾನ ಮತ್ತು ಒಳ್ಳೆಯ ಮನಸ್ಸುಳ್ಳವರನ್ನಾಗಿಸುವಂತೆ ಈ ಮಂತ್ರಪಾಠವು ಮಾಡುತ್ತದೆ. |
| [ಉಪ.... ರಾಜಾನವ್] ಇತಿ ಆಹ | **'ಉಪ.... ರಾಜಾನವ್'** ಎಂಬ ಮಂತ್ರವನ್ನು ಹೇಳುತ್ತಾನೆ. |
| ಮಾರುತೀ ವೈ ವಿಟ್ | ಪ್ರಜೆಯು ಮರುದ್ದೇವತೆಯಾಗಿದೆ. |
| ಜ್ಯೇಷ್ಠಃ ವಿಶ್ಪತಿಃ | ಜ್ಯೇಷ್ಠನಾದ ಯಜಮಾನನು ಪ್ರಜೆಗಳಿಗೆ ಒಡೆಯನಾಗಿರುತ್ತಾನೆ. |
| ವಿಶಾ ಏವ ಏನವ್ ರಾಷ್ಟ್ರೇಣ ಸಮರ್ಧಯತಿ | [ಈ ಮೇಲಿನ] ಮಂತ್ರಪಾಠವು ಈ ಯಜಮಾನನು ಪ್ರಜೆಗಳಿಂದಲೂ, ಅಮಾತ್ಯಾದಿ ಸಪ್ತರಾಜ್ಯಾಂಗಗಳಿಂದಲೂ ಸಮೃದ್ಧನಾಗುವಂತೆ ಮಾಡುತ್ತದೆ. |

ಈ ಯಾಗಕ್ಕೆ ಸಂಬಂಧಿಸಿದಂತೆ ಕೆಲವು ವಿಶೇಷವಿಧಿಗಳಿವೆ. **'ಅದಿತೇऽನುಮನ್ಯಸ್ವ'** ಎಂಬ ಮಂತ್ರವನ್ನು ಹೇಳಿ ಆಕ್ರಮಣಕಾರನ ಹೆಜ್ಜೆಯ ಧೂಳನ್ನು ಸಂಗ್ರಹಿಸಬೇಕು. ಇದರಿಂದ ಭೂಸ್ವರೂಪಳಾದ ಅದಿತಿಯು ಈತನಿಗೆ ವುತ್ತೆ ರಾಜ್ಯವು ಸಿಕ್ಕುವಂತೆ ಅನುಮತಿಯನ್ನೀಯುತ್ತಾಳೆ.

**'ಸತ್ಯಾऽऽಶೀಃ'** ಎಂಬ ಮಂತ್ರಪಾಠದಿಂದ ಇವನ ಪ್ರಾರ್ಥನೆಯು ಸತ್ಯವಾಗಿ ಸಫಲವಾಗುತ್ತದೆ.

**'ಇಹ ಮನಃ'** ಎಂಬ ಮಂತ್ರಪಾಠದಿಂದ ಪ್ರಜೆಗಳು ಈ ಯಜಮಾನನಲ್ಲಿ ಅನುರಕ್ತವಾದ ಮನಸ್ಸುಳ್ಳವರಾಗುತ್ತಾರೆ. **'ಉಪ ಪ್ರೇತ..'** ಮೊದಲಾದ ಮಂತ್ರಪಾಠದಿಂದ ಮರುತ್ತುಗಳ ಅನುಗ್ರಹದಿಂದ ಮರುದ್ದೇವತಾಸಂಬಂಧಿಗಳಾದ ಪ್ರಜೆಗಳು ಜ್ಯೇಷ್ಠನಾದ ಯಜಮಾನನ ಅಧೀನರಾಗುತ್ತಾರೆ. ಹೀಗೆ ಯಜಮಾನನು ಪ್ರಜೆಗಳಿಂದಲೂ ಅಮಾತ್ಯಾದಿ ಸಪ್ತ ರಾಜ್ಯಾಂಗಗಳಿಂದಲೂ ಪರಿಪೂರ್ಣನಾಗಿ ರಾಜ್ಯದಲ್ಲಿ ಸ್ಥಿರನಾಗಿರುತ್ತಾನೆ.

ಯಃ ಪರಸ್ತಾದ್ಗ್ರಾಮ್ಯವಾದೀ ಸ್ಯಾತ್ತಸ್ಯ ಗೃಹಾದ್ವ್ರೀಹೀನಾಹರೇ

ಚ್ಛುಕ್ಲಾಗ್‌ಂಶ್ಚ ಕೃಷ್ಣಾಗ್‌ಂಶ್ಚ ವಿ ಚಿನುಯಾದ್ಯೇ ಶುಕ್ಲಾಃ

ಸ್ಯುಸ್ತಮಾದಿತ್ಯಂ ಚರುಂ ನಿರ್ವಪೇದಾದಿತ್ಯಾ ವೈ

---

ಯಃ । ಪರಸ್ತಾತ್ । ಗ್ರಾಮ್ಯವಾದೀತಿ ಗ್ರಾಮ್ಯ–ವಾದೀ । ಸ್ಯಾತ್ । ತಸ್ಯ । ಗೃಹಾತ್ । ವ್ರೀಹೀನ್ । ಏತಿ । ಹರೇತ್ । ಶುಕ್ಲಾನ್ । ಚ । ಕೃಷ್ಣಾನ್ । ಚ । ವೀತಿ । ಚಿನುಯಾತ್ । ಯೇ । ಶುಕ್ಲಾಃ । ಸ್ಯುಃ । ತಮ್ । ಆದಿತ್ಯಮ್ । ಚರುಮ್ । ನಿರಿತಿ । ವಪೇತ್ । ಆದಿತ್ಯಾ । ವೈ ।

---

**ಆದಿತ್ಯಚರುವಿಧಿ; ಅರ್ಥವಾದ**

| | |
|---|---|
| **ಯಃ ಪರಸ್ತಾತ್ ಗ್ರಾಮ್ಯವಾದೀ ಸ್ಯಾತ್** | ಯಾವನು ಪ್ರಜೆಗಳ ಅಭಿಪ್ರಾಯವನ್ನು ತಿಳಿದು ಪ್ರಜಾಹಿತವನ್ನು ರಹಸ್ಯವಾಗಿ ರಾಜನಿಗೆ ತಿಳಿಸುತ್ತಾನೆಯೋ |
| **ತಸ್ಯ ಗೃಹಾತ್ ವ್ರೀಹೀನ್ ಆಹರೇತ್** | ಅವನ ಮನೆಯಿಂದ ಬತ್ತಗಳನ್ನು ತರಬೇಕು. |
| **ಶುಕ್ಲಾನ್ ಚ ಕೃಷ್ಣಾನ್ ಚ ವಿಚಿನುಯಾತ್** | ಬಿಳಿಯ ಬತ್ತವನ್ನೂ ಕರಿಯ ಬತ್ತವನ್ನೂ ಆರಿಸಬೇಕು. |
| **ಯೇ ಶುಕ್ಲಾಃ ಸ್ಯುಃ ತಮ್ ಆದಿತ್ಯಮ್ ಚರುಮ್ ನಿರ್ವಪೇತ್** | ಬೆಳ್ಳಗಿರುವ ಬತ್ತದ ಅಕ್ಕಿಯನ್ನು ಹವಿಸ್ಸನ್ನಾಗಿ ಮಾಡಿ ಆದಿತ್ಯದೇವರಿಗಾಗಿ ಯಾಗ ಮಾಡಬೇಕು. |

---

ಈ ಯಾಗದಲ್ಲಿನ ಪ್ರಯೋಗವಿಶೇಷವಿಧಿಯು ಹೀಗಿದೆ; ಯಾವನು ಗ್ರಾಮಗಳಲ್ಲಿ ತಿರುಗಾಡಿ ಅವರಿಗೆ ಹಿತವಾದುದನ್ನು ಗುಟ್ಟಾಗಿ ರಾಜನಿಗೆ ತಿಳಿಸುತ್ತಾನೆಯೋ ಅವನ ಮನೆಯಿಂದ ಬತ್ತಗಳನ್ನು ತಂದು ಬಿಳುಪಾದ ಬತ್ತಗಳನ್ನೂ ಮತ್ತು ಕಪ್ಪಾದ ಬತ್ತಗಳನ್ನೂ ಬೇರ್ಪಡಿಸಬೇಕು. ಬಿಳಿಯ ಬತ್ತದ ಅಕ್ಕಿಯಂದ ಚರುವನ್ನು ಮಾಡಿ ಆದಿತ್ಯ ದೇವತೆಗಳಿಗಾಗಿ ಯಾಗವನ್ನು ಅನುಷ್ಠಿಸಬೇಕು. ಪ್ರಜೆಗಳಿಗೆ ಆದಿತ್ಯರು ದೇವತೆಗಳು.

ದೇವತಯಾ ವಿಡ್ವಿಶಮೇವಾವಗಚ್ಛತ್ಯವಗತಾಽಸ್ಯ

[ಗಚ್ಛತಿ (೩) ಅವಗತಾಽಸ್ಯ] ವಿಡನವಗತಗ್ಂ

ರಾಷ್ಟ್ರಮಿತ್ಯಾಹುರ್ಯೇ ಕೃಷ್ಣಾಃ

---

ದೇವತಯಾ । ವಿಟ್ । ವಿಶಮ್ । ಏವ । ಅವೇತಿ । ಗಚ್ಛತಿ । ಅವಗತೇತ್ಯವ-ಗತಾ । ಅಸ್ಯ । ವಿಟ್ । ಅನವಗತಮಿತ್ಯನವ-ಗತಮ್ । ರಾಷ್ಟ್ರಮ್ । ಇತಿ । ಆಹುಃ । ಯೇ । ಕೃಷ್ಣಾಃ ।

---

| | |
|---|---|
| ವಿಟ್ ದೇವತಯಾ ಆದಿತ್ಯಾ ವೈ | ಪ್ರಜೆಯು ಆದಿತ್ಯದೇವತಾಕವಾದದ್ದು. |
| ವಿಶಮ್ ಏವ ಅವಗಚ್ಛತಿ | [ಯಜಮಾನನು ಅನುಯಾಯಿಗಳಾದ ವಿಧೇಯರಾದ] ಪ್ರಜೆಗಳನ್ನು ಹೊಂದುತ್ತಾನೆ. |

**ವಾರುಣಯಾಗವಿಧಾನ; ಅರ್ಥವಾದ**

| | |
|---|---|
| ಅಸ್ಯ ವಿಟ್ ಅವಗತಾ | ಪ್ರಜೆಯು ಈ ಯಜಮಾನನಿಗೆ ಅಧೀನವಾಯಿತು. |
| ರಾಷ್ಟ್ರಮ್ ಅನವಗತಮ್ ಇತಿ ಆಹುಃ | ಆದರೆ ರಾಷ್ಟ್ರವು ಪ್ರಾಪ್ತವಾಗಲಿಲ್ಲವೆಂದು ತಿಳಿದವರು ಹೇಳುತ್ತಾರೆ. |
| ಯೇ ಕೃಷ್ಣಾಃ ಸ್ಯುಃ | [ಅದಕ್ಕಾಗಿ] ಯಾವ ಕಪ್ಪಾದ ಬತ್ತಗಳಿವೆಯೋ |

---

ಅವರು ದೇವತೆಯಿಂದ ಆದಿತ್ಯಸಂಬಂಧಿಗಳೆನಿಸಿದ್ದಾರೆ. ಅವರ ಅನುಗ್ರಹದಿಂದ ಯಜಮಾನನು ಅನುಕೂಲರಾದ ಪ್ರಜೆಗಳನ್ನು ಪಡೆದು ರಾಜ್ಯದಲ್ಲಿ ಸ್ಥಿರನಾಗಿರುತ್ತಾನೆ.

ತಿಳಿದವರು 'ಆದಿತ್ಯಯಾಗದಿಂದ ಪ್ರಜೆಗಳು ಅನುರಕ್ತರಾಗಬಹುದು. ಆದರೆ ಅಮಾತ್ಯಾದಿಸಪ್ತಾಂಗಸಹಿತವಾದ ರಾಷ್ಟ್ರವು ಅಷ್ಟರಿಂದ ವಶವಾಗುವುದಿಲ್ಲ' ಎಂದು ಹೇಳುವರು. ಅದಕ್ಕಾಗಿ ಹಿಂದೆ ಬೇರ್ಪಡಿಸಿದ ಕಪ್ಪು ಬತ್ತದ ಅಕ್ಕಿಯ ಚರುವನ್ನು ವರುಣದೇವನಿಗಾಗಿ ಯಾಗ ಮಾಡಬೇಕು. ರಾಷ್ಟ್ರವು ವರುಣದೇವತಾಕವಾದುದು.

ಸ್ಯ್ಯಸ್ತಂ ವಾರುಣಂ ಚರುಂ ನಿರ್ವಪೇದ್ವಾರುಣಂ ವೈ

ರಾಷ್ಟ್ರಮುಭೇ ಏವ ವಿಶಂ ಚ ರಾಷ್ಟ್ರಂ ಚಾವಗಚ್ಛತಿ

ಯದಿ ನಾವಗಚ್ಛೇದಿಮಮಹಮಾದಿತ್ಯೇಭ್ಯೋ

---

ಸ್ಯಃ । ತಮ್ । ವಾರುಣಮ್ । ಚರುಮ್ । ನಿರಿತಿ । ವಪೇತ್ । ವಾರುಣಮ್ । ವೈ ।

ರಾಷ್ಟ್ರಮ್ । ಉಭೇ ಇತಿ । ಏವ । ವಿಶಮ್ । ಚ । ರಾಷ್ಟ್ರಮ್ । ಚ । ಅವೇತಿ । ಗಚ್ಛತಿ ।

ಯದಿ । ನ । ಅವಗಚ್ಛೇದಿತ್ಯವ – ಗಚ್ಛೇತ್ । ಇಮಮ್ । ಅಹಮ್ । ಆದಿತ್ಯೇಭ್ಯಃ ।

---

| ಮಂತ್ರ | ವಿನಿಯೋಗ |
|---|---|
| ಇಮಮ್.... ಅವಗಂತೋಃ । | ಧಾನ್ಯವನ್ನು ನಿರ್ವಾಪ ಮಾಡಲು |

---

❖ **ಅಮುಷ್ಮಾತ್** = ಈ ಹೆಸರಿನ ಶತ್ರುರಾಜನಿಂದ; **ಅಮುಷ್ಮೈ ವಿಶಃ ಆ ಅವ–**

---

| | |
|---|---|
| ತಮ್ ವಾರುಣಮ್ ಚರುಮ್ ನಿರ್ವಪೇತ್ | ಅದರ ಅಕ್ಕಿಯಿಂದ ಚರುಹವಿಸ್ಸನ್ನು ಮಾಡಿ, ವರುಣ ದೇವತಾಕವಾಗಿ ಯಾಗವನ್ನು ಅನುಷ್ಠಿಸಬೇಕು. |
| ರಾಷ್ಟ್ರಮ್ ವಾರುಣಮ್ ವೈ | ರಾಷ್ಟ್ರವು ವರುಣದೇವತಾಕವಾದುದು. |
| ವಿಶಮ್ ಚ ರಾಷ್ಟ್ರಮ್ ಚ | [ಹೀಗೆ ಆದಿತ್ಯ, ವಾರುಣಯಾಗಗಳಿಂದ] |
| ಉಭೇ ಏವ ಅವಗಚ್ಛತಿ | ಯಜಮಾನನು ರಾಷ್ಟ್ರ, ಪ್ರಜೆ ಇವೆರಡನ್ನೂ ಹೊಂದುತ್ತಾನೆ. |

**ಆದಿತ್ಯೇಷ್ಟಿಯ ಮತ್ತೊಂದು ವಿಧಾನ; ಅರ್ಥವಾದ**

| | |
|---|---|
| ಯದಿ ನ ಅವಗಚ್ಛೇತ್ | ಹೀಗೆ ಎರಡು ಯಾಗಗಳನ್ನು ಮಾಡಿಯೂ ಇಷ್ಟವು ಕೈಗೂಡದಿದ್ದರೆ |
| [ಇಮಮ್..... ಗಂತೋಃ] ಇತಿ ನಿರ್ವಪೇತ್ । | [ಇಮಮ್..... ಗಂತೋಃ] ಎಂಬ ಮಂತ್ರದಿಂದ ನಿರ್ವಾಪ ಮಾಡಬೇಕು. |

---

ಆದುದರಿಂದ ಯಜಮಾನನು ಆದಿತ್ಯಚರುವಿನಿಂದ ಪ್ರಜೆಗಳನ್ನೂ, ವಾರುಣಚರುವಿನಿಂದ ರಾಷ್ಟ್ರವನ್ನೂ ಅಧೀನವನ್ನಾಗಿ ಮಾಡಿಕೊಳ್ಳುತ್ತಾನೆ.

ಭಾಗಂ ನಿರ್ವಪಾಮ್ಯಾಮುಷ್ಮಾದಮುಷ್ಯೈ

ವಿಶೋಽವಗಂತೋರಿತಿ ನಿರ್ವಪೇದಾದಿತ್ಯಾ ಏವೈನಂ

ಭಾಗಧೇಯಂ ಪ್ರೇಪ್ಸಂತೋ ವಿಶಮವಗಮಯಂತಿ

---

ಭಾಗಮ್ । ನಿರಿತಿ । ವಪಾಮಿ । ಏತಿ । ಅಮುಷ್ಮಾತ್ । ಅಮುಷ್ಯೈ । ವಿಶಃ । ಅವಗಂತೋರಿತ್ಯವ–ಗಂತೋಃ । ಇತಿ । ನಿರಿತಿ । ವಪೇತ್ । ಆದಿತ್ಯಾಃ । ಏವ । ಏನಮ್ । ಭಾಗಧೇಯಮಿತಿ ಭಾಗ–ಧೇಯಮ್ । ಪ್ರೇಪ್ಸಂತ ಇತಿ ಪ್ರ–ಈಪ್ಸಂತಃ । ವಿಶಮ್ । ಅವೇತಿ । ಗಮಯಂತಿ ।

---

**ಗಂತೋಃ** = ಈ ದೇಶದ ಪ್ರಜೆಗಳನ್ನು ವಶಪಡಿಸಿಕೊಳ್ಳಲು; **ಅಹವ್** = ನಾನು; **ಇಮಮ್** = ಈ ಧಾನ್ಯವನ್ನು; **ಆದಿತ್ಯೇಭ್ಯಃ** = ಆದಿತ್ಯದೇವತೆಗಳಿಗಾಗಿ; **ಭಾಗವ್ ನಿರ್ವಪಾಮಿ** = ಭಾಗವನ್ನಾಗಿ ಬೇರೆ ಮಾಡುತ್ತೇನೆ [ನಿರ್ವಾಪ ಮಾಡುತ್ತೇನೆ].

---

| | |
|---|---|
| **ಆದಿತ್ಯಾಃ ಏವ ಭಾಗಧೇಯವ್ ಪ್ರೇಪ್ಸಂತಃ ವಿಶಮ್ ಏನಮ್ ಅವಗಮಯಂತಿ** | ತಮಗೆ ಬೇಕಾದ ಭಾಗವನ್ನು ಅಪೇಕ್ಷಿಸುವ ಆದಿತ್ಯರು ಪ್ರಜೆಗಳನ್ನು ಯಜಮಾನನ ವಶವರ್ತಿಗಳನ್ನಾಗಿ ಮಾಡುತ್ತಾರೆ. |

---

ಒಂದು ವೇಳೆ ಅಧಿಕವಾದ ಪ್ರತಿಬಂಧದಿಂದ ಆದಿತ್ಯ – ವಾರುಣಯಾಗಗಳಿಂದಲೂ ರಾಜ್ಯಪ್ರಾಪ್ತಿಯಾಗದಿದ್ದರೆ ಆದಿತ್ಯರಿಗಾಗಿ ನಿರ್ವಾಪ ಮಾಡಬೇಕು. ಈ ನಿರ್ವಾಪ ಮಾಡುವಾಗ 'ಈ ಶತ್ರುರಾಜನಿಂದ ಪ್ರಜೆಗಳನ್ನು ಬೇರ್ಪಡಿಸಿ ನನ್ನ ಅಧೀನರನ್ನಾಗಿ ಪಡೆಯುವುದಕ್ಕಾಗಿ ಈ ಧಾನ್ಯನಿರ್ವಾಪವನ್ನು ಮಾಡುತ್ತೇನೆ' ಎಂದು ತಿಳಿಸುವ ಮಂತ್ರದಿಂದ ನಿರ್ವಾಪವನ್ನು ಮಾಡಬೇಕು. ಪ್ರಜೆಗಳು ಅಧೀನರಾಗಿ ಇಷ್ಟಸಿದ್ಧಿಯಾದ ನಂತರ ಈ ಯಾಗವನ್ನು ಮಾಡಬೇಕು. ಇದರಿಂದ ಆದಿತ್ಯರು ತಮ್ಮ ಭಾಗವನ್ನು ಪಡೆಯಲು ಉತ್ಸುಕರಾಗಿ ಯಜಮಾನನಿಗೆ ಪ್ರಜೆಗಳು ಅಧೀನರಾಗುವಂತೆ ಮಾಡುತ್ತಾರೆ.

[ವಿಶಮವ (೪) ಗಮಯಂತಿ] ಯದಿ ನಾವಗಚ್ಛೇದಾ

ಶ್ವತ್ಥಾನ್ಮಯೂಖಾನ್ಸಪ್ತ ಮಧ್ಯಮೇಷಾಯಾಮುಪಹನ್ಯಾ

ದಿದಮಹಮಾದಿತ್ಯಾನ್ಬಧ್ನಾಮ್ಯಾss ಮುಷ್ಮಾದಮುಷ್ಯೈ ॥

---

**ಯದಿ** । ನ । ಅವಗಚ್ಛೇದಿತ್ಯವ – ಗಚ್ಛೇತ್ । ಆಶ್ವತ್ಥಾನ್ । ಮಯೂಖಾನ್ । ಸಪ್ತ । ಮಧ್ಯಮೇಷಾಯಾಮಿತಿ ಮಧ್ಯಮ–ಈಷಾಯಾಮ್ । ಉಪೇತಿ । ಹನ್ಯಾತ್ । **ಇದಮ್** । ಅಹಮ್ । ಆದಿತ್ಯಾನ್ । ಬಧ್ನಾಮಿ । ಏತಿ । ಅಮುಷ್ಮಾತ್ । ಅಮುಷ್ಯೈ ॥

---

| **ಮಂತ್ರ** | **ವಿನಿಯೋಗ** |
|---|---|
| **ಇದಮ್.... ಗಂತೋಃ** । | ಅಶ್ವತ್ಥದ ಗೂಟಗಳನ್ನು ಜೋಡಿಸಲು |

---

✤ **ಅಮುಷ್ಮಾತ್** = ಈ ಹೆಸರಿನ ಶತ್ರುರಾಜನಿಂದ; **ಅಮುಷ್ಯೈ ವಿಶಃ ಆ ಅವಗಂತೋಃ** = ಈ ದೇಶದ ಪ್ರಜೆಗಳನ್ನು ವಶಪಡಿಸಿಕೊಳ್ಳಲು; **ಅಹಮ್** = ನಾನು; **ಇದಮ್** = ಇದೋ! **ಆದಿತ್ಯಾನ್ ಬಧ್ನಾಮಿ** = ಆದಿತ್ಯರನ್ನು ಬಂಧಿಸುತ್ತೇನೆ.

---

**ಈ ಕಾಮನೆಗಾಗಿಯೇ ಪ್ರಯೋಗವಿಶೇಷವಿಧಾನ; ಸ್ತುತಿ**

| | |
|---|---|
| ಯದಿ ನ ಅವಗಚ್ಛೇತ್ | ಹೀಗೆ ಮಾಡಿದರೂ ಇಷ್ಟಾರ್ಥಸಿದ್ಧಿಯು ಆಗದಿದ್ದರೆ |
| **[ಇದಮ್... ಗಂತೋಃ]** ಇತಿ ಸಪ್ತ ಆಶ್ವತ್ಥಾನ್ ಮಯೂಖಾನ್ *ಮಧ್ಯಮೇಷಾಯಾಮ್ ಉಪಹನ್ಯಾತ್ | **[ಇದಮ್..... ಗಂತೋಃ]** ಎಂಬ ಮಂತ್ರದಿಂದ ಅಶ್ವತ್ಥ ಮರದ ಏಳು ಗೂಟಗಳನ್ನು ಯಜ್ಞಶಕಟದ ಮಧ್ಯದಂಡದಲ್ಲಿ ಜೋಡಿಸಬೇಕು. |

---

ಹೀಗೆ ಆದಿತ್ಯಯಾಗವನ್ನು ಮಾಡಿದರೂ ಪ್ರಜೆಗಳು ಅಧೀನರಾಗದಿದ್ದರೆ ಏಳು

---

* ಹವಿರ್ಧಾನಶಕಟದಲ್ಲಿ [ಬಂಡಿ] ಬಂಡಿಗೂ ನೊಗಕ್ಕೂ ಸಂಬಂಧವನ್ನು ಕಲ್ಪಿಸುವ ಮೂರು ಈಷಾದಂಡ [ಈಚು, ಈಚು ಕೋಲು] ಗಳಿರುತ್ತವೆ. ಅದರಲ್ಲಿ ಮಧ್ಯದ ದಂಡ **ಮಧ್ಯಮೇಷಾ.**

ವಿಶೋಽವಗಂತೋರಿತ್ಯಾದಿತ್ಯಾ ಏವೈನಂ ಬದ್ಧವೀರಾ

ವಿಶಮವಗಮಯಂತಿ ಯದಿ ನಾವಗಚ್ಛೇದೇತ

ಮೇವಾದಿತ್ಯಂ ಚರುಂ ನಿರ್ವಪೇದಿಧ್ಮೇಽಪಿ

---

ವಿಶಃ । ಅವಗಂತೋರಿತ್ಯವ–ಗಂತೋಃ । ಇತಿ । ಆದಿತ್ಯಾಃ । ಏವ । ಏನಮ್ । ಬದ್ಧವೀರಾ ಇತಿ ಬದ್ಧ–ವೀರಾಃ । ವಿಶಮ್ । ಅವೇತಿ । ಗಮಯಂತಿ । ಯದಿ । ನ । ಅವಗಚ್ಛೇದಿತ್ಯವ–ಗಚ್ಛೇತ್ । ಏತಮ್ । ಏವ । ಆದಿತ್ಯಮ್ । ಚರುಮ್ । ನಿರಿತಿ । ವಪೇತ್ । ಇಧ್ಮೇ । ಅಪೀತಿ ।

---

| | |
|---|---|
| ಬದ್ಧವೀರಾಃ ಆದಿತ್ಯಾಃ ಏವ ಏನವ್ ವಿಶವ್ ಅವಗಮಯಂತಿ | ಬಂಧನಕ್ಕೆ ಸಿಲುಕಿದ ಮಕ್ಕಳನ್ನುಹೊಂದಿದವರಂತಾಗಿರುವ ಆದಿತ್ಯರೇ ಈ ಯಜಮಾನನಿಗೆ ಪ್ರಜೆಗಳನ್ನು ವಶರನ್ನಾಗಿ ಮಾಡುತ್ತಾರೆ. |

**ಆದಿತ್ಯೇಷ್ಟಿಯಲ್ಲಿ ಪ್ರಯೋಗವಿಶೇಷವಿಧಿ; ಪ್ರಶಂಸೆ**

| | |
|---|---|
| ಯದಿ ನ ಅವಗಚ್ಛೇತ್ | ಹೀಗೆ ಮಾಡಿದರೂ ಪ್ರಜೆಗಳು ವಶವರ್ತಿಗಳಾಗದಿದ್ದರೆ, |
| ಏತಮ್ ಏವ ಆದಿತ್ಯಮ್ ಚರುಮ್ ನಿರ್ವಪೇತ್ | ಆದಿತ್ಯರಿಗಾಗಿ ಚರುಯಾಗವನ್ನು ಅನುಷ್ಠಿಸಬೇಕು. |

---

ಅಶ್ವತ್ಥವೃಕ್ಷದ ಗೂಟಗಳನ್ನು ಹವಿರ್ಧಾನಶಕಟದ ಮಧ್ಯದ ಈಚುಗೋಲಿನಲ್ಲಿ **'ಇದಮಹವ್...'** ಎಂಬ ಮಂತ್ರದಿಂದ ಬಂಧಿಸಬೇಕು. 'ನಾನು ಈ ಶತ್ರುರಾಜನಿಂದ ಪ್ರಜೆಗಳನ್ನು ಬೇರ್ಪಡಿಸಿ, ರಾಜ್ಯಭ್ರಂಶಕ್ಕೆ ಗುರಿಯಾಗಲಿರುವ ಈ ಯಜಮಾನನಿಗೆ ಅಧೀನರನ್ನಾಗಿ ಮಾಡಲು ಆದಿತ್ಯರನ್ನು ಬಂಧಿಸುತ್ತೇನೆ' ಎಂದು ಮಂತ್ರಾರ್ಥ. ಇದರಿಂದ ಆದಿತ್ಯರ ಪುತ್ರರನ್ನೇ ಬಂಧಿಸಿದಂತಾಗುತ್ತದೆ. ಅವರನ್ನು ಬಿಡಿಸುವುದಕ್ಕಾಗಿ ಆದಿತ್ಯರು ಯಜಮಾನನಿಗೆ ಪ್ರಜೆಗಳು ವಶವರ್ತಿಗಳಾಗುವಂತೆ ಮಾಡಿ, ರಾಜ್ಯವನ್ನೂ ಕೊಡುತ್ತಾರೆ.

ಮೇಲೆ ಹೇಳಿದ ಇಷ್ಟಿಗಳಿಂದ ಫಲಸಿದ್ಧಿಯಾಗದಿದ್ದರೆ ಆದಿತ್ಯರಿಗಾಗಿ ಚರುಯಾಗ

ಮಯೂಖಾನ್ಥ್ಸಂನಹ್ಯೇದನಪರುಧ್ಯಮೇವಾ

ವಗಚ್ಛತ್ಯಾಶ್ವತ್ಥಾ ಭವಂತಿ ಮರುತಾಂ ವಾ

ಏತದೋಜೋ ಯದಶ್ವತ್ಥ ಓಜಸೈವ ವಿಶಮವಗಚ್ಛತಿ

---

ಮಯೂಖಾನ್ । ಸಮಿತಿ । ನಹ್ಯೇತ್ । ಅನಪರುಧ್ಯಮಿತ್ಯನಪ–ರುಧ್ಯಮ್ । ಏವ । ಅವೇತಿ । ಗಚ್ಛತಿ । ಆಶ್ವತ್ಥಾಃ । ಭವಂತಿ । ಮರುತಾಮ್ । ವೈ । ಏತತ್ । ಓಜಃ । ಯತ್ । ಅಶ್ವತ್ಥಃ । ಓಜಸಾ । ಏವ । ವಿಶಮ್ । ಅವೇತಿ । ಗಚ್ಛತಿ ॥

---

| | |
|---|---|
| ಇಧ್ಮೇ ಅಪಿ ಮಯೂಖಾನ್ ಸಂನಹ್ಯೇತ್ | ಇಧ್ಮದಲ್ಲಿಯೂ ಅಶ್ವತ್ಥ ವೃಕ್ಷದ ಕೀಲುಗಳನ್ನು [ಗೂಟ] ಸೇರಿಸಿ ಕಟ್ಟಬೇಕು. |
| ಅನಪರುಧ್ಯಮ್ ಏವ ಅವಗಚ್ಛತಿ | ರಾಜ್ಯಭ್ರಂಶವಿಲ್ಲದೆ ಸ್ಥಿರವಾದ ರಾಜ್ಯವನ್ನು ಪಡೆಯುತ್ತಾನೆ. |
| ಆಶ್ವತ್ಥಾಃ ಭವಂತಿ | ಆ ಗೂಟಗಳು ಅಶ್ವತ್ಥವೃಕ್ಷದವುಗಳಾಗಿವೆ. |
| ಯತ್ ಮರುತಾಮ್ ಓಜಃ ವೈ ಏತತ್ | ಅಶ್ವತ್ಥವೃಕ್ಷವೆಂಬುದು ಯಾವುದುಂಟೋ ಅದು ಮರುದ್ದೇವತೆಗಳ ಓಜಸ್ಸೇ ಆಗಿದೆ. |
| ಓಜಸಾ ಏವ ವಿಶಮ್ ಅವಗಚ್ಛತಿ | ಅಶ್ವತ್ಥರೂಪವಾದ ಓಜಸ್ಸಿನಿಂದಲೇ ಯಜಮಾನನು ಅನುಕೂಲಪ್ರಜೆಗಳನ್ನು ಪಡೆಯುತ್ತಾನೆ. |

---

ವನ್ನು ಅನುಷ್ಠಿಸಬೇಕು. ಹಿಂದೆ ಈಷಾದಂಡದಲ್ಲಿ ಅಶ್ವತ್ಥದ ಗೂಟಗಳನ್ನು ಹೊಡೆದಂತೆ ಇಧ್ಮದಲ್ಲಿಯೂ ಅಶ್ವತ್ಥದ ಗೂಟಗಳನ್ನು ಕಟ್ಟಬೇಕು. ಇದರಿಂದ ಶತ್ರುಗಳ ಆಕ್ರಮಣಕ್ಕೆ ಗುರಿಯಾಗುವುದರಲ್ಲಿರುವವನು ತನ್ನ ರಾಜ್ಯವನ್ನು ಹೊಂದುತ್ತಾನೆ. ಅಶ್ವತ್ಥವು ಮರುದ್ದೇವತೆಗಳ ಓಜೋರೂಪವಾಗಿರುವುದರಿಂದ ಯಜಮಾನನು ಮರುತ್ತರ ಅನುಗ್ರಹರೂಪವಾದ ಓಜೋರೂಪವಾದ ಅಶ್ವತ್ಥದಿಂದ ಅನುಯಾಯಿಗಳಾದ ಪ್ರಜೆಗಳನ್ನು ಪಡೆಯುತ್ತಾನೆ. ರಾಷ್ಟ್ರವನ್ನೂ ಹೊಂದುತ್ತಾನೆ.

ಸಪ್ತ ಭವಂತಿ ಸಪ್ತಗಣಾ ವೈ ಮರುತೋ ಗಣಶ ಏವ

ವಿಶಮವಗಚ್ಛತಿ ||೫–1||

[ಧಾರಯದ್ವತೋ ಮರುತೋ ಗಚ್ಛತಿ ವಿಶಮವೈತದಷ್ಟಾದಶ ಚ |]

---

ಸಪ್ತ | ಭವಂತಿ | ಸಪ್ತಗಣಾ ಇತಿ ಸಪ್ತ–ಗಣಾಃ | ವೈ | ಮರುತಃ | ಗಣಶ ಇತಿ ಗಣ–ಶಃ |

ಏವ | ವಿಶಮ್ | ಅವೇತಿ | ಗಚ್ಛತಿ ||1||

---

**ಸಂಖ್ಯಾಪ್ರಶಂಸೆ;**

| | |
|---|---|
| ಸಪ್ತ ಭವಂತಿ | ಆ ಅಶ್ವತ್ಥದ ಕೀಲುಗಳು ಏಳಾಗಿವೆ. |
| ಮರುತಃ ಸಪ್ತಗಣಾಃ ವೈ | ಮರುದ್ದೇವತೆಗಳೂ ಏಳು ಗುಂಪಾಗಿದ್ದಾರೆ. |
| ಗಣಶಃ ಏವ ವಿಶಮ್ ಅವಗಚ್ಛತಿ | ಯಜಮಾನನು ಪ್ರಜೆಗಳನ್ನು ಗುಂಪು ಗುಂಪಾಗಿಯೇ ಅಧೀನರನ್ನಾಗಿ ಪಡೆಯುತ್ತಾನೆ. |

---

ಅಶ್ವತ್ಥದ ಕೀಲುಗಳು ಏಳು ಸಂಖ್ಯೆಯಲ್ಲಿವೆ. ಅಂತೆಯೇ ಮರುತರೂ ಏಳು ಗುಂಪುಗಳಲ್ಲಿರುವವರು. ಹೀಗಾಗಿ ಈ ಅನುಷ್ಠಾನದಿಂದ ಯಜಮಾನನು ಪ್ರಜೆಗಳನ್ನು ಗುಂಪುಗುಂಪಾಗಿಯೇ ಸ್ವಾಧೀನ ಮಾಡಿಕೊಳ್ಳುವನು.

* * *

# ಅನುವಾಕದ ವಿಶೇಷ ವಿಷಯಗಳು

## 1. ಪ್ರಥಮಾನುವಾಕವಿನಿಯೋಗಸಂಗ್ರಹ

**ಭೂತಿಕಾಮೋ ಭುವದ್ವದ್ಭ್ಯ ಆದಿತ್ಯೇಭ್ಯಶ್ಚರುಂ ಚರೇತ್ ।**
**ರುದ್ಧೋಽವರುಧ್ಯಮಾನೋ ವಾ ಧಾರಯದ್ವದ್ಭ್ಯ ಆಚರೇತ್ ॥**

**ಶುಕ್ಲೈರ್ವ್ರೀಹಿಭಿರಾದಿತ್ಯಂ ಚರುಂ ಕೃಷ್ಣೈಸ್ತು ವಾರುಣಮ್ ।**
**ರುಧ್ಯಮಾನಃ ಪ್ರಕುರ್ವೀತ ಮಯೂಖಾನಾಂ ಚ ಕೀಲನಮ್ ॥**

**ತದ್ಬಂಧನಂ ತಥಾಽಽದಿತ್ಯಂ ಚರುಮೇವ ಸಮಾಚರೇತ್ ।**
**ಆದ್ಯಾನುವಾಕೇ ಕಥಿತಮೇತತ್ಸರ್ವಂ ವಿವೇಕತಃ ॥**

**ಇಂದ್ರಂ ವೋ ವಿಶ್ವ ಇತ್ಯತ್ರಾಕ್ಷರಾರ್ಥಸ್ತೂಪವರ್ಣಿತಃ ॥**

ಈ ಕಾಮ್ಯೇಷ್ಟಿಯನ್ನು ತಿಳಿಸುವ ಅನುವಾಕದಲ್ಲಿ ಐಶ್ವರ್ಯಕಾಮನಿಗೂ, ರಾಜ್ಯಭ್ರಷ್ಟನಿಗೂ, ರಾಜ್ಯಭ್ರಂಶವಾಗಬಹುದಾದವನಿಗೂ ವಾರುಣ ಆದಿತ್ಯಯಾಗಗಳೂ ಫಲಸಿದ್ಧಿಗಾಗಿ ಪ್ರಯೋಗವಿಶೇಷಗಳೂ ಹೇಳಲ್ಪಟ್ಟವೆ. **'ಇಂದ್ರಂ ವೋ...'** ಅನುವಾಕದಲ್ಲಿ ಮಂತ್ರಾರ್ಥವು ವರ್ಣಿಸಲ್ಪಟ್ಟಿದೆ.

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ : 6**

## 2. ಛಂದಸ್ಸು

ಉಪ ಪ್ರೇತ...... ರಾಜಾನಮ್ । **ದ್ವಿಪದಾ ಜಗತೀ**

ಉಳಿದವು **ಯಜುಸ್ಸುಗಳು.**

## ॥ ದ್ವಿತೀಯೋಽನುವಾಕಃ ॥

ದೇವಾ ವೈ ಮೃತ್ಯೋರಬಿಭಯುಸ್ತೇ ಪ್ರಜಾಪತಿಮುಪಾ

ಧಾವನ್ತೇಭ್ಯ ಏತಾಂ ಪ್ರಾಜಾಪತ್ಯಾಗ್ಂ ಶತಕೃಷ್ಣಲಾಂ

---

ದೇವಾಃ । ವೈ । ಮೃತ್ಯೋಃ । ಅಬಿಭಯುಃ । ತೇ । ಪ್ರಜಾಪತಿಮಿತಿ ಪ್ರಜಾ – ಪತಿಮ್ । ಉಪೇತಿ । ಅಧಾವನ್ನ್ । ತೇಭ್ಯಃ । ಏತಾಮ್ । ಪ್ರಾಜಾಪತ್ಯಾಮಿತಿ ಪ್ರಾಜಾ–ಪತ್ಯಾಮ್ । ಶತಕೃಷ್ಣಲಾಮಿತಿ ಶತ–ಕೃಷ್ಣಲಾಮ್ ।

---

**ಮೊದಲನೆಯ ಅನುವಾಕದಲ್ಲಿ ಭೂತಿಕಾಮನೇ ಮೊದಲಾದವರಿಗೆ ಇಷ್ಟಿಗಳು ಹೇಳಲ್ಪಟ್ಟಿವೆ. ಈ ಎರಡನೆಯ ಅನುವಾಕದಲ್ಲಿ ಕೃಷ್ಣಲೇಷ್ಟ್ಯಾದಿಗಳು ಹೇಳಲ್ಪಟ್ಟಿವೆ.**

---

| | |
|---|---|
| ದೇವಾಃ ವೈ ಮೃತ್ಯೋಃ ಅಬಿಭಯುಃ | ದೇವತೆಗಳು ಅಪಮೃತ್ಯುವಿನಿಂದ ಭಯ ಪಟ್ಟರು. |
| ತೇ ಪ್ರಜಾಪತಿಮ್ ಉಪಾಧಾವನ್ | ಅವರು ಪರಿಹಾರೋಪಾಯಕ್ಕಾಗಿ ಪ್ರಜಾಪತಿಯನ್ನು ಆಶ್ರಯಿಸಿದರು. |
| ತೇಭ್ಯಃ ಏತಾಮ್ ಪ್ರಾಜಾಪತ್ಯಾಮ್ ಶತಕೃಷ್ಣಲಾಮ್ | ಪ್ರಜಾಪತಿಯು ಆ ದೇವತೆಗಳಿಗಾಗಿ ನೂರು ಗುಲಗಂಜಿ ತೂಕದ ಸುವರ್ಣವ್ರೀಹಿಗಳುಳ್ಳ ಚರುಯಾಗವನ್ನು ಪ್ರಜಾಪತಿದೇವನಿಗಾಗಿ |

---

ಪೂರ್ವಕಾಲದಲ್ಲಿ ದೇವತೆಗಳು ಮೃತ್ಯುವಿಗೆ ಭಯಪಟ್ಟರು. ಪರಿಹಾರೋಪಾಯವನ್ನು ತಿಳಿಯುವುದಕ್ಕಾಗಿ ಅವರು ಪ್ರಜಾಪತಿದೇವನನ್ನು ಆಶ್ರಯಿಸಿದರು. ಪ್ರಜಾಪತಿ ದೇವನು ಆ ದೇವತೆಗಳಿಗೋಸ್ಕರ ಪ್ರಜಾಪತಿದೇವತಾಕವಾದ *ನೂರು ಚಿನ್ನದ ಬತ್ತಗಳ ಚರುಯಾಗವನ್ನು ಮಾಡಿಸಿದನು.

---

* ನೂರು ಗುಲಗುಂಜಿಗಳ ತೂಕದ ನೂರು ಚಿನ್ನದ ಬತ್ತಗಳು.

ನಿರವಪತ್ತಯೈವೈಷ್ವಮೃತಮದಧಾದ್ಯೋ ಮೃತ್ಯೋರ್ಬಿಭೀಯಾ

ತ್ತಸ್ಮಾ ಏತಾಂ ಪ್ರಾಜಾಪತ್ಯಾಗ್ಂ ಶತಕೃಷ್ಣಲಾಂ

ನಿರ್ವಪೇತ್ಪ್ರಜಾಪತಿಮೇವ ಸ್ವೇನ ಭಾಗಧೇಯೇನೋಪಧಾವತಿ

---

ನಿರಿತಿ । ಅವಪತ್ । ತಯಾ । ಏವ । ಏಷು । ಅಮೃತಮ್ । ಅದಧಾತ್ । ಯಃ । ಮೃತ್ಯೋಃ । ಬಿಭೀಯಾತ್ । ತಸ್ಮೈ । ಏತಾಮ್ । ಪ್ರಾಜಾಪತ್ಯಾಮಿತಿ ಪ್ರಾಜಾ–ಪತ್ಯಾಮ್ । ಶತಕೃಷ್ಣಲಾಮಿತಿ ಶತ–ಕೃಷ್ಣಲಾಮ್ । ನಿರಿತಿ । ವಪೇತ್ । ಪ್ರಜಾಪತಿಮಿತಿ ಪ್ರಜಾ–ಪತಿಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

| | |
|---|---|
| ನಿರವಪತ್ | ಮಾಡಿದನು |
| ತಯಾ ಏವ ಏಷು ಅಮೃತಮ್ ಅದಧಾತ್ | ಈ ಯಾಗದಿಂದ ಈ ದೇವತೆಗಳಲ್ಲಿ ಮರಣ ರಾಹಿತ್ಯವನ್ನುಂಟುಮಾಡಿದನು. |

**ಶತಕೃಷ್ಣಲೇಷ್ಟಿವಿಧಿ; ಪ್ರಶಂಸೆ**

| | |
|---|---|
| ಯಃ ಮೃತ್ಯೋಃ ಬಿಭೀಯಾತ್ | ಯಾವನು ಮೃತ್ಯುವಿನ ದೆಸೆಯಿಂದ ಭಯ ಪಡುತ್ತಾನೆಯೋ |
| ತಸ್ಮೈ ಏತಾಮ್ ಪ್ರಾಜಾಪತ್ಯಾಮ್ ಶತಕೃಷ್ಣಲಾಮ್ ನಿರ್ವಪೇತ್ | ಅವನಿಗಾಗಿ ಪ್ರಜಾಪತಿದೇವತಾಕವಾದ ಶತಕೃಷ್ಣಲೇಷ್ಟಿಚರುದ್ರವ್ಯಕವಾದ ಯಾಗ ವನ್ನು ಅನುಷ್ಠಿಸಬೇಕು. |
| ಪ್ರಜಾಪತಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಪ್ರಜಾಪತಿಗೆ ಸಲ್ಲುವ ಈ ಯಾಗದ ಹವಿಃಪ್ರದಾನದಿಂದ ಪ್ರಜಾಪತಿ ಯನ್ನು ಸೇವಿಸುತ್ತಾನೆ. |

---

ಈ ಇಷ್ಟಿಯ ಪ್ರಭಾವದಿಂದ ದೇವತೆಗಳನ್ನು ಅಮರರನ್ನಾಗಿ ಮಾಡಿದನು.

ಮೃತ್ಯುವಿನಿಂದ ಹೆದರುವವನು ಪ್ರಜಾಪತಿದೇವನಿಗಾಗಿ ಈ ಶತಕೃಷ್ಣಲೇಷ್ಟಿಯನ್ನು ಅನುಷ್ಠಿಸಬೇಕು. ಇದರಿಂದ ಪ್ರಜಾಪತಿಯು ತನ್ನ ಭಾಗವನ್ನು ಪಡೆದು ಸುಪ್ರೀತನಾಗುತ್ತಾನೆ.

## ಸ ಏವಾಸ್ಮಿನ್ನಾಯುರ್ದಧಾತಿ ಸರ್ವಮಾಯುರೇತಿ ಶತಕೃಷ್ಣಲಾ ಭವತಿ ಶತಾಯುಃ ಪುರುಷಃ ಶತೇಂದ್ರಿಯ ಆಯುಷ್ಯೇವೇಂದ್ರಿಯೇ [೧] ಪ್ರತಿತಿಷ್ಠತಿ

---

ಸಃ । ಏವ । ಅಸ್ಮಿನ್ನ್ । ಆಯುಃ । ದಧಾತಿ । ಸರ್ವಮ್ । ಆಯುಃ । ಏತಿ । ಶತಕೃಷ್ಣಲೇತಿ ಶತ–ಕೃಷ್ಣಲಾ । ಭವತಿ । ಶತಾಯುರಿತಿ ಶತ–ಆಯುಃ । ಪುರುಷಃ । ಶತೇಂದ್ರಿಯ ಇತಿ ಶತ–ಇಂದ್ರಿಯಃ । ಆಯುಷಿ । ಏವ । ಇಂದ್ರಿಯೇ । ಪ್ರತೀತಿ । ತಿಷ್ಠತಿ ।

---

| | |
|---|---|
| ಸಃ ಏವ ಅಸ್ಮಿನ್ ಆಯುಃ ದಧಾತಿ | ಆ ಪ್ರಜಾಪತಿದೇವನೇ ಈ ಯಜಮಾನನಿಗೆ ದೀರ್ಘಾಯುಸ್ಸನ್ನು ಉಂಟು ಮಾಡುತ್ತಾನೆ. |
| ಸರ್ವಮ್ ಆಯುಃ ಏತಿ | [ಈ ಯಾಗದ ಪ್ರಭಾವದಿಂದ] ಯಜಮಾನನು ಸಂಪೂರ್ಣವಾದ ಆಯುಸ್ಸನ್ನು ಹೊಂದುತ್ತಾನೆ. |

**ಸಂಖ್ಯೆಯ ಪ್ರಶಂಸೆ; ದ್ರವ್ಯದ ಪ್ರಶಂಸೆ**

| | |
|---|---|
| ಶತಕೃಷ್ಣಲಾ ಭವತಿ | ಈ ಇಷ್ಟಿಯು ನೂರು ಸಂಖ್ಯೆಯ ಕೃಷ್ಣಲದ್ರವ್ಯವುಳ್ಳದ್ದಾಗಿದೆ. |
| ಶತಾಯುಃ ಪುರುಷಃ | ಮಾನವನು ನೂರು ವರ್ಷಗಳ ಆಯುಸ್ಸುಳ್ಳವನು. |
| ಶತೇಂದ್ರಿಯಃ | *ನೂರು ಇಂದ್ರಿಯಗಳುಳ್ಳವನು. |
| ಆಯುಷಿ ಇಂದ್ರಿಯೇ ಏವ ಪ್ರತಿತಿಷ್ಠತಿ | [ಈ ಇಷ್ಟಿಯ ಪ್ರಭಾವದಿಂದ] ಯಜಮಾನನು ಆಯುಸ್ಸಿನಲ್ಲಿಯೂ ಇಂದ್ರಿಯದಲ್ಲಿಯೂ ದೃಢನಾಗಿರುತ್ತಾನೆ. |

---

ಶತಸಂವತ್ಸರಪರಿಮಿತವಾದ ದೀರ್ಘಾಯುಸ್ಸನ್ನು ಅನುಗ್ರಹಿಸುತ್ತಾನೆ. ಯಜಮಾನನು ಅಪಮೃತ್ಯುವಿನ ಭಯವಿಲ್ಲದೆ ಪೂರ್ಣಾಯುಸ್ಸನ್ನು ಪಡೆಯುತ್ತಾನೆ.

ಈ ಯಾಗದ ದ್ರವ್ಯವಾಗಿರುವ ಕೃಷ್ಣಲಗಳ ಸಂಖ್ಯೆಯು ನೂರು. ಮಾನವನ

---

* ಕರ್ಮೇಂದ್ರಿಯಗಳು ಐದು ಮತ್ತು ಜ್ಞಾನೇಂದ್ರಿಯಗಳು ಐದು. ಈ ಹತ್ತು ಇಂದ್ರಿಯಗಳು ಹತ್ತು ನಾಡಿಗಳಲ್ಲಿ ಪ್ರತ್ಯೇಕವಾಗಿ ಸಂಚರಿಸುತ್ತವೆ. ಆದುದರಿಂದ ಪುರುಷನು '**ಶತೇಂದ್ರಿಯ**'ನಾಗಿದ್ದಾನೆ.

ಘೃತೇ ಭವತ್ಯಾಯುರ್ವೈ ಘೃತಮಮೃತಗ್ಂ ಹಿರಣ್ಯಾ

ಮಾಯುಶ್ಚೈವಾಸ್ಮಾ ಅಮೃತಂ ಚ ಸಮೀಚೀ ದಧಾತಿ

ಚತ್ವಾರಿಚತ್ವಾರಿ ಕೃಷ್ಣಲಾನ್ಯವದ್ಯತಿ

---

ಘೃತೇ । ಭವತಿ । ಆಯುಃ । ವೈ । ಘೃತಮ್ । ಅಮೃತಮ್ । ಹಿರಣ್ಯಮ್ । ಆಯುಃ । ಚ । ಏವ । ಅಸ್ಮೈ । ಅಮೃತಮ್ । ಚ । ಸಮೀಚೀ ಇತಿ । ದಧಾತಿ । **ಚತ್ವಾರಿಚತ್ವಾರೀತಿ ಚತ್ವಾರಿ – ಚತ್ವಾರಿ** । ಕೃಷ್ಣಲಾನಿ । ಅವೇತಿ । ದ್ಯತಿ ।

---

| | |
|---|---|
| **ಘೃತೇ ಭವತಿ** | ಚರುವಿನ ಪಾಕವು ತುಪ್ಪದಲ್ಲಾಗುತ್ತದೆ. |
| **ಆಯುಃ ವೈ ಘೃತಮ್** | [ಆಯುಸ್ಸನ್ನು ಹೆಚ್ಚಿಸುವುದರಿಂದ] ತುಪ್ಪವೇ ಆಯುಸ್ಸಾಗಿದೆ. |
| **ಅಮೃತಮ್ ಹಿರಣ್ಯಮ್** | ಹಿರಣ್ಯವು ನಾಶರಹಿತವಾಗಿದೆ. |
| **ಅಸ್ಮೈ** | ಈ ಯಜಮಾನನಿಗೆ |
| **ಆಯುಃ ಚ ಏವ ಅಮೃತಮ್ ಚ ಸಮೀಚೀ ದಧಾತಿ** | ಆಯುಸ್ಸನ್ನೂ , ನಾಶವಿಲ್ಲದೆ ದೃಢವಾಗಿರುವಿಕೆಯನ್ನೂ ಅನುಕೂಲವಾಗಿ ಮಾಡುತ್ತಾನೆ. |

**ಪ್ರಯೋಗವಿಶೇಷವಿಧಿ; ಫಲ**

| | |
|---|---|
| **ಕೃಷ್ಣಲಾನಿ ಚತ್ವಾರಿ ಚತ್ವಾರಿ ಅವದ್ಯತಿ** | ಕೃಷ್ಣಲಗಳನ್ನು ಅವದಾನ ಮಾಡುವಾಗ *ನಾಲ್ಕು ನಾಲ್ಕಾಗಿ ಅವದಾನ ಮಾಡಬೇಕು. |

---

ಆಯುಸ್ಸೂ ನೂರು ವರ್ಷಗಳು. ಅವನ ಹತ್ತು ಇಂದ್ರಿಯಗಳು ಹತ್ತು ನಾಡಿಗಳಲ್ಲಿ ಪ್ರತ್ಯೇಕವಾಗಿ ಸಂಚರಿಸುವುದರಿಂದ ಅವನ ಇಂದ್ರಿಯಗಳೂ ನೂರು. ಈ ಯಾಗದಿಂದ ಯಜಮಾನನು ಇಂದ್ರಿಯಶಕ್ತಿಯನ್ನು ಹೊಂದಿ ಆಯುಸ್ಸನ್ನು ಪಡೆಯುತ್ತಾನೆ.

---

* ಕೃಷ್ಣಲಗಳ ನೂರು ಸಂಖ್ಯೆಯ ವಿಭಾಗವನ್ನು ಹೀಗೆ ಹೇಳಿರುತ್ತಾರೆ.

**ಬೋಧಾಯನ — ಶ್ರೌತಸೂತ್ರ – 13–23.**

ಪ್ರಧಾನಹೋಮಕ್ಕೆ — 8, ಸ್ವಿಷ್ಟಕೃದ್ಯಾಗಕ್ಕೆ — 4, ಇಡಾಭಕ್ಷಣಕ್ಕೆ — 8, ಅವಾಂತರೇಡೆಗೆ—4, ಪ್ರಾಶಿತ್ರಹರಣಕ್ಕೆ—1, ಯಜಮಾನ ಭಾಗಕ್ಕೆ — 1

26. ಚತುರ್ಧಾಕರಣಕಾಲದಲ್ಲಿ ಉಳಿದೆಲ್ಲವನ್ನೂ [74] ಒಟ್ಟಾಗಿ ಒಂದೇ ಸಲ ಬ್ರಹ್ಮನಿಗೆ ಕೊಡಬೇಕು.

# ಚತುರವತ್ತಸ್ಯಾಪ್ತ್ಯಾ ಏಕಧಾ ಬ್ರಹ್ಮಣ ಉಪಹರತ್ಯೇಕಧೈವ

# ಯಜಮಾನ ಆಯುರ್ದಧಾತ್ಯಸಾವಾದಿತ್ಯೋ

---

ಚತುರವತ್ತಸ್ಯೇತಿ ಚತುಃ – ಅವತ್ತಸ್ಯ । ಆಪ್ತ್ಯೈ । ಏಕಧೇತ್ಯೇಕ–ಧಾ । ಬ್ರಹ್ಮಣೇ । ಉಪೇತಿ । ಹರತಿ । ಏಕಧೇತ್ಯೇಕ–ಧಾ । ಏವ । ಯಜಮಾನೇ । ಆಯುಃ । ದಧಾತಿ । ಅಸೌ । ಆದಿತ್ಯಃ ।

---

| | |
|---|---|
| **ಚತುರವತ್ತಸ್ಯ ಆಪ್ತ್ಯೈ** | ಇದರಿಂದ *ಚತುರವದಾನಸಂಪತ್ತಿಯಾಗುತ್ತದೆ. |
| ಏಕಧಾ ಬ್ರಹ್ಮಣೇ ಉಪಹರತಿ | ಬ್ರಹ್ಮನಿಗೆ ಹವಿರ್ಭಾಗವನ್ನು ಒಂದು ಬಾರಿಯಲ್ಲಿಯೇ ಎಲ್ಲವನ್ನೂ ಕೊಡಬೇಕು. |
| **ಏಕಧಾ** ಏವ ಯಜಮಾನೇ **ಆಯುಃ** ದಧಾತಿ | ಇದರಿಂದ ಅಧ್ವರ್ಯುವು ಏಕಕಾಲದಲ್ಲಿಯೇ ಯಜಮಾನನಲ್ಲಿ ಆಯುಸ್ಸನ್ನು ಉಂಟು ಮಾಡಿದವನಾಗುತ್ತಾನೆ. |

---

ಕೃಷ್ಣಲಗಳನ್ನು ಘೃತದಲ್ಲಿ ಬಿಸಿ ಮಾಡಬೇಕು. ಆಜ್ಯವು ಆಯುಸ್ಸೇ ಆಗಿದೆ. ಹಿರಣ್ಯವು ನಾಶವಿಲ್ಲದ್ದಾಗಿ ಅಮೃತದಂತಿದೆ. ಇವುಗಳ ಪರಸ್ಪರಸಂಬಂಧದಿಂದ ಯಜಮಾನನಲ್ಲಿ ಆಯುಸ್ಸೂ, ಇಂದ್ರಿಯಪಾಟವವೂ ಹೊಂದಿಕೊಂಡಿರುವಂತಾಗುತ್ತದೆ.

ಹೋಮಭಕ್ಷಣಾದಿಗಳಿಗಾಗಿ ಅವದಾನ ಮಾಡುವಾಗ ನಾಲ್ಕು ನಾಲ್ಕು ಕೃಷ್ಣಲಗಳನ್ನು ಚತುರವತ್ತಸಂಪಾದನೆಗಾಗಿ ಅವದಾನ ಮಾಡಬೇಕು. ಋತ್ವಿಜರಿಗೆ ಹವಿರ್ಭಾಗವನ್ನು ಕೊಡುವ ಸಮಯದಲ್ಲಿ ಒಂದೇ ಬಾರಿ ಬ್ರಹ್ಮನಿಗೆ ಉಳಿದ ಕೃಷ್ಣಲಗಳನ್ನು ಕೊಡಬೇಕು. ಇದರಿಂದ ಅಧ್ವರ್ಯುವು ಯಜಮಾನನಲ್ಲಿ ಒಂದೇ ಬಾರಿ ಆಯುಸ್ಸನ್ನು ಉಂಟುಮಾಡಿದಂತೆ ಆಗುತ್ತದೆ.

---

* ಇಲ್ಲಿ ವಿಭಾಗದಲ್ಲಿ ಮತಭೇದವಿದೆ. ಪ್ರಕೃತಿಯಾಗದಲ್ಲಿ ಮೊದಲು ಒಂದು ಬಾರಿ ಉಪಸ್ತರಣ, ಎರಡು ಬಾರಿ ಹವಿರವದಾನ, ಒಂದು ಬಾರಿ ಅಭಿಘಾರಣ — ಹೀಗೆ ಚತುರವತ್ತ ಸಂಪತ್ತಿಯನ್ನು ಹೇಳಿದೆ.

ನ ವ್ಯರೋಚತ ತಸ್ಮೈ ದೇವಾಃ ಪ್ರಾಯಶ್ಚಿತ್ತಿಮೈಚ್ಛನ್ತಸ್ಮಾ ಏತಗ್ಂ ಸೌರ್ಯಂ ಚರುಂ ನಿರವಪನ್ತೇನೈವಾಸ್ಮಿನ್ರುಚಮದ ಧುರ್ಯೋ೯ [..ತೇನೈವಾಸ್ಮಿನ್ (೨) ರುಚಮದಧುರ್ಯೋ೯]

---

ನ । ವೀತಿ । ಅರೋಚತ । ತಸ್ಮೈ । ದೇವಾಃ । ಪ್ರಾಯಶ್ಚಿತ್ತಿಮ್ । ಐಚ್ಛನ್ । ತಸ್ಮೈ । ಏತಮ್ । ಸೌರ್ಯಮ್ । ಚರುಮ್ । ನಿರಿತಿ । ಅವಪನ್ । ತೇನ । ಏವ । ಅಸ್ಮಿನ್ । ರುಚಮ್ । ಅದಧುಃ । ಯಃ ।

---

**ಬ್ರಹ್ಮವರ್ಚಸಕಾಮನಿಗೆ ವಿಹಿತವಾದ ಸೌರ್ಯೇಷ್ಟಿ; ಅರ್ಥವಾದ**

| | |
|---|---|
| ಅಸೌ ಆದಿತ್ಯಃ ನ ವಿ ಅರೋಚತ | ಈ ಸೂರ್ಯನು ಒಂದಾನೊಂದು ಕಾಲದಲ್ಲಿ ಕಾಂತಿಹೀನನಾದನು.* |
| ತಸ್ಮೈ ದೇವಾಃ ಪ್ರಾಯಶ್ಚಿತ್ತಿಮ್ ಐಚ್ಛನ್ | ಆ ಸೂರ್ಯನ ಕಾಂತಿಹೀನತೆಗಾಗಿ ದೇವತೆಗಳು ಪರಿಹಾರೋಪಾಯವನ್ನು ಬಯಸಿದರು. |
| ತಸ್ಮೈ ಏತಮ್ ಸೌರ್ಯಂ ಚರುಮ್ | ಆ ಸೂರ್ಯನಿಗಾಗಿ ಸೂರ್ಯದೇವತಾಕವಾದ ಚರುದ್ರವ್ಯಕವಾದ ಯಾಗವನ್ನು |
| ನಿರವಪನ್ | ಮಾಡಿದರು. |
| ತೇನ ಏವ ಅಸ್ಮಿನ್ ರುಚಮ್ ಅದಧುಃ | ಆ ಚರುಯಾಗದಿಂದಲೇ ಈ ಸೂರ್ಯನಲ್ಲಿ ಪ್ರಕಾಶವನ್ನು ಮತ್ತೆ ನೆಲೆಗೊಳಿಸಿದರು. |

---

ಒಂದು ಕಾಲದಲ್ಲಿ ಸೂರ್ಯನು ಪ್ರಕಾಶವಿಲ್ಲದವನಾದನು. ದೇವತೆಗಳು ಆ ಕಾಂತಿಹೀನತೆಗೆ ಪರಿಹಾರವನ್ನು ಅಪೇಕ್ಷಿಸಿದರು. ಅವನ ಪ್ರಕಾಶಪ್ರಾಪ್ತಿಗಾಗಿ ಸೂರ್ಯ ದೇವತಾಕವಾದ ಚರುದ್ರವ್ಯಕವಾದ ಯಾಗವನ್ನು ಅನುಷ್ಠಿಸಿದರು. ಆ ಯಾಗದ ಪ್ರಭಾವದಿಂದ ಸೂರ್ಯನಲ್ಲಿ ಮತ್ತೊಮ್ಮೆ ಕಾಂತಿಯನ್ನು ಉಂಟು ಮಾಡಿದರು.

---

* ಪುನರುಕ್ತಿಗಳಿಗೆ ಕಲ್ಪಭೇದದಿಂದ ವ್ಯವಸ್ಥೆ.

ಬ್ರಹ್ಮವರ್ಚಸಕಾಮಃ ಸ್ಯಾತ್ತಸ್ಮಾ ಏತಗ್ಂ ಸೌರ್ಯಂ ಚರುಂ ನಿರ್ವಪೇದಮುಮೇವಾದಿತ್ಯಗ್ಗ್ಂ ಸ್ವೇನ ಭಾಗಧೇಯೇ ಸೋಪಧಾವತಿ ಸ ಏವಾಸ್ಮಿನ್ಬ್ರಹ್ಮವರ್ಚಸಂ ದಧಾತಿ

---

ಬ್ರಹ್ಮವರ್ಚಸಕಾಮ ಇತಿ ಬ್ರಹ್ಮವರ್ಚಸ-ಕಾಮಃ । ಸ್ಯಾತ್ । ತಸ್ಮೈ । ಏತಮ್ । ಸೌರ್ಯಮ್ । ಚರುಮ್ । ನಿರಿತಿ । ವಪೇತ್ । ಅಮುಮ್ । ಏವ । ಆದಿತ್ಯಮ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮಿನ್ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ದಧಾತಿ ।

---

**ಯಾಗವಿಧಿ; ಅದರ ಪ್ರಶಂಸೆ**

| | |
|---|---|
| ಯಃ ಬ್ರಹ್ಮವರ್ಚಸಕಾಮಃ ಸ್ಯಾತ್ | ಯಾವ ಯಜಮಾನನು ಬ್ರಹ್ಮವರ್ಚಸವನ್ನು ಬಯಸುತ್ತಾನೆಯೋ |
| ತಸ್ಮೈ ಏತಮ್ ಸೌರ್ಯಮ್ ಚರುಮ್ ನಿರ್ವಪೇತ್ | ಅವನಿಗಾಗಿ ಋತ್ವಿಜರು ಈ ಸೌರ್ಯ ಚರುಯಾಗವನ್ನು ಮಾಡಬೇಕು/ ಅವನು ಈ ಸೌರ್ಯಚರುಯಾಗವನ್ನು ಮಾಡಬೇಕು. |
| ಅಮುಮ್ ಆದಿತ್ಯಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಈ ಯಾಗದಿಂದ ಯಜಮಾನನು] ಆದಿತ್ಯನಿಗೆ ಸಲ್ಲಬೇಕಾದ ಹವಿಸ್ಸನ್ನು ಅರ್ಪಿಸಿ ಸೇವಿಸುತ್ತಾನೆ. |
| ಸಃ ಏವ ಅಸ್ಮಿನ್ ಬ್ರಹ್ಮವರ್ಚಸಮ್ ದಧಾತಿ | ಆ ಸೂರ್ಯನೇ ಈ ಯಜಮಾನನಲ್ಲಿ ಬ್ರಹ್ಮವರ್ಚಸವನ್ನುಂಟುಮಾಡುತ್ತಾನೆ. |

---

ಬ್ರಹ್ಮವರ್ಚಸಿಯಾಗಬೇಕೆನ್ನುವವನು ಈ ಸೌರ್ಯಚರುಯಾಗವನ್ನು ಅನುಷ್ಠಿಸಬೇಕು. ಇದರಿಂದ ಆದಿತ್ಯನಿಗೆ ತಕ್ಕ ಭಾಗವು ಸಿಕ್ಕಿದಂತಾಗಿ ಆತನು ಸುಪ್ರೀತನಾಗುತ್ತಾನೆ. ಯಜಮಾನನಿಗೆ ಬ್ರಹ್ಮವರ್ಚಸವನ್ನು ಕರುಣಿಸುತ್ತಾನೆ. ಯಜಮಾನನು ಬ್ರಹ್ಮವರ್ಚಸಿಯಾಗುತ್ತಾನೆ.

ಬ್ರಹ್ಮವರ್ಚಸ್ಯೇವ ಭವತ್ಯುಭಯತೋ ರುಕ್ಮೌ ಭವತ

ಉಭಯತ ಏವಾಸ್ಮಿನ್ರುಚಂ ದಧಾತಿ ಪ್ರಯಾಜೇಪ್ರಯಾಜೇ

ಕೃಷ್ಣಲಂ ಜುಹೋತಿ

---

ಬ್ರಹ್ಮವರ್ಚಸೀತಿ ಬ್ರಹ್ಮ-ವರ್ಚಸೀ । ಏವ । ಭವತಿ । ಉಭಯತಃ । ರುಕ್ಮೌ । ಭವತಃ । ಉಭಯತಃ । ಏವ । ಅಸ್ಮಿನ್ನ್ । ರುಚಮ್ । ದಧಾತಿ । ಪ್ರಯಾಜೇಪ್ರಯಾಜ ಇತಿ ಪ್ರಯಾಜೇ – ಪ್ರಯಾಜೇ । ಕೃಷ್ಣಲಮ್ । ಜುಹೋತಿ ।

---

| | |
|---|---|
| ಬ್ರಹ್ಮವರ್ಚಸೀ ಏವ ಭವತಿ | ಯಜಮಾನನು ಬ್ರಹ್ಮವರ್ಚಸವುಳ್ಳವನೇ ಆಗುತ್ತಾನೆ. |

**ಪ್ರಯೋಗವಿಶೇಷವಿಧಿ; ಅದರ ಪ್ರಶಂಸೆ**

| | |
|---|---|
| ಉಭಯತಃ ರುಕ್ಮೌ ಭವತಃ | ಚರುವಿನ ಮೇಲ್ಭಾಗ ಮತ್ತು ಕೆಳಭಾಗದಲ್ಲಿ ಬೆಳ್ಳಿ ಅಥವಾ ಚಿನ್ನದ ನಾಣ್ಯಗಳನ್ನು ಹಾಕಿ ಚರುವಿನ ಪಾಕವನ್ನು ಮಾಡಬೇಕು. |
| ಉಭಯತಃ ಏವ ಅಸ್ಮಿನ್ ರುಚಮ್ ದಧಾತಿ | ಯಜಮಾನನಿಗೆ ಎರಡು ಕಡೆಗಳಿಂದಲೂ ಕಾಂತಿಯು ಪ್ರಾಪ್ತವಾಗುತ್ತದೆ. |
| ಪ್ರಯಾಜೇಪ್ರಯಾಜೇ ಕೃಷ್ಣಲಮ್ ಜುಹೋತಿ | *ಪ್ರತಿಯೊಂದು ಪ್ರಯಾಜದಲ್ಲಿಯೂ ಕೃಷ್ಣಲವನ್ನು ಹೋಮ ಮಾಡಬೇಕು. |

---

ಸೌರ್ಯಚರುಪಾಕವನ್ನು ಮಾಡುವಾಗ ಮೇಲೆ ಮತ್ತು ಕೆಳಗೆ ಎರಡು ಕಡೆಗಳಲ್ಲಿಯೂ ಚಿನ್ನದ ಅಥವಾ ಬೆಳ್ಳಿಯ ನಾಣ್ಯಗಳಿರಬೇಕು. ಹೀಗೆ ಎರಡು ಕಡೆಗಳಲ್ಲಿಯೂ ಚಿನ್ನದ ಚೂರುಗಳಿರುವುದರಿಂದ ಯಜಮಾನನಿಗೆ ಎರಡು ಕಡೆಗಳಿಂದಲೂ ಬ್ರಹ್ಮವರ್ಚಸವು ಪ್ರಾಪ್ತವಾಗುತ್ತದೆ.

ಪ್ರತಿಯೊಂದು ಪ್ರಯಾಜದಲ್ಲಿಯೂ ಕೃಷ್ಣಲ (ಚಿನ್ನದ ಬತ್ತ)ವನ್ನು ಸೇರಿಸಿಕೊಂಡು

---

* ಪ್ರಯಾಜಗಳು ಐದು.

ದಿಗ್ಭ್ಯ ಏವಾಸ್ಮೈ ಬ್ರಹ್ಮವರ್ಚಸಮವರುಂಧ ಆಗ್ನೇಯ

ಮಷ್ಟಾಕಪಾಲಂ ನಿರ್ವಪೇತ್ಸಾವಿತ್ರಂ ದ್ವಾದಶಕಪಾಲಂ

ಭೂಮ್ಯೈ ಚರುಂ [ಭೂಮ್ಯೈ (೩) ಚರುಂ] ಯಃ ಕಾಮಯೇತ

ಹಿರಣ್ಯಂ ವಿಂದೇಯ ಹಿರಣ್ಯಂ ಮೋಪನಮೇದಿತಿ

---

ದಿಗ್ಭ್ಯ ಇತಿ ದಿಕ್–ಭ್ಯಃ । ಏವ । ಅಸ್ಮೈ । ಬ್ರಹ್ಮವರ್ಚಸಮಿತಿ ಬ್ರಹ್ಮ–ವರ್ಚಸಮ್ । ಅವೇತಿ । ರುಂಧೇ । **ಆಗ್ನೇಯಮ್** । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ । ನಿರಿತಿ । ವಪೇತ್ । ಸಾವಿತ್ರಮ್ । ದ್ವಾದಶಕಪಾಲಮಿತಿ ದ್ವಾದಶ–ಕಪಾಲಮ್ । ಭೂಮ್ಯೈ । ಚರುಮ್ । ಯಃ । ಕಾಮಯೇತ । ಹಿರಣ್ಯಮ್ । ವಿಂದೇಯ । ಹಿರಣ್ಯಮ್ । ಮಾ । ಉಪೇತಿ । ನಮೇತ್ । ಇತಿ ।

---

| | |
|---|---|
| ದಿಗ್ಭ್ಯಃ ಏವ ಅಸ್ಮೈ ಬ್ರಹ್ಮವರ್ಚಸಮ್ ಅವರುಂಧೇ | ಇದರಿಂದ ಯಜಮಾನನು ಎಲ್ಲ ಐದು ದಿಕ್ಕುಗಳಿಂದಲೂ ಬ್ರಹ್ಮವರ್ಚಸವನ್ನು ಹೊಂದುತ್ತಾನೆ. |

**ಹಿರಣ್ಯಕಾಮನಿಗೆ ವಿಹಿತವಾದ ಇಷ್ಟಿತ್ರಯ; ಅರ್ಥವಾದ**

| | |
|---|---|
| ಹಿರಣ್ಯಮ್ ವಿಂದೇಯ | [ನಾನು] 'ಸುವರ್ಣವನ್ನು ಹೊಂದುವೆನು' |
| ಹಿರಣ್ಯಮ್ ಮಾ ಉಪನಮೇತ್ | 'ಆ ಸುವರ್ಣಾದಿಧನವು ವೃದ್ಧಿ ಹೊಂದಿ ನನ್ನನ್ನು ಆಶ್ರಯಿಸಲಿ' |
| ಇತಿ ಯಃ ಕಾಮಯೇತ | ಹೀಗೆ ಯಾವ ಯಜಮಾನನು ಬಯಸುವನೋ [ಅವನು] |
| ಆಗ್ನೇಯಮ್ ಅಷ್ಟಾಕಪಾಲಮ್ ನಿರ್ವಪೇತ್ | ಅಗ್ನಿ ದೇವತೆಗಾಗಿ ಅಷ್ಟಾಕಪಾಲಪುರೋಡಾಶ ದ್ರವ್ಯದ ಯಾಗವನ್ನು ಅನುಷ್ಠಿಸಬೇಕು. |
| ಸಾವಿತ್ರಮ್ ದ್ವಾದಶ ಕಪಾಲಮ್ [ನಿರ್ವಪೇತ್] | ಸವಿತೃದೇವನಿಗಾಗಿ ದ್ವಾದಶಕಪಾಲ ಪುರೋಡಾಶದ್ರವ್ಯದ ಯಾಗವನ್ನು ಮಾಡಬೇಕು. |

ಯದಾಗ್ನೇಯೋ ಭವತ್ಯಾಗ್ನೇಯಂ ವೈ ಹಿರಣ್ಯಂ ಯಸ್ಯೈವ

ಹಿರಣ್ಯಂ ತೇನೈವೈನದ್ವಿಂದತೇ ಸಾವಿತ್ರೋ ಭವತಿ

ಸವಿತೃಪ್ರಸೂತ ಏವೈನದ್ವಿಂದತೇ

---

**ಯತ್** । ಆಗ್ನೇಯಃ । ಭವತಿ । ಆಗ್ನೇಯಮ್ । ವೈ । ಹಿರಣ್ಯಮ್ । ಯಸ್ಯ । ಏವ । ಹಿರಣ್ಯಮ್ । ತೇನ । ಏವ । ಏನತ್ । ವಿಂದತೇ । ಸಾವಿತ್ರಃ । ಭವತಿ । ಸವಿತೃಪ್ರಸೂತ ಇತಿ ಸವಿತೃ–ಪ್ರಸೂತಃ । ಏವ । ಏನತ್ । ವಿಂದತೇ ।

---

| | |
|---|---|
| ಭೂಮ್ಯೈ ಚರುಮ್ [ನಿರ್ವಪೇತ್] | ಭೂದೇವತೆಗಾಗಿ ಚರುಯಾಗವನ್ನು ಅನುಷ್ಠಿಸಬೇಕು. |

**ಯಾಗದೇವತೆಗಳ ಪ್ರಶಂಸೆ**

| | |
|---|---|
| ಯತ್ ಆಗ್ನೇಯಃ ಭವತಿ | ಯಾಗವು ಅಗ್ನಿದೇವತಾಕವಾಗಿದೆಯೆಂಬುದು ಯಾವುದುಂಟೋ [ಅದರ ಫಲವು ಹೀಗಾಗುತ್ತದೆ] |
| ಹಿರಣ್ಯಮ್ ಆಗ್ನೇಯಮ್ ವೈ | ಚಿನ್ನವು ಅಗ್ನಿಸಂಬಂಧಿಯಾದುದು. |
| ಯಸ್ಯ ಏವ ಹಿರಣ್ಯಮ್ ತೇನ ಏವ ಏನತ್ ವಿಂದತೇ | ಚಿನ್ನವು ಯಾವ ಅಗ್ನಿಯದಾಗಿದೆಯೋ ಆ ಅಗ್ನಿದೇವನ ಅನುಗ್ರಹದಿಂದಲೇ ಈ ಚಿನ್ನವನ್ನು ಯಜಮಾನನು ಪಡೆಯುವನು. |
| ಸಾವಿತ್ರಃ ಭವತಿ | ಮತ್ತೊಂದು ಯಾಗವು ಸವಿತೃದೇವತಾಕವಾಗಿದೆ. [ಅದರ ಫಲವು ಹೀಗಿದೆ]. |
| ಸವಿತೃಪ್ರಸೂತಃ ಏವ ಏನತ್ ವಿಂದತೇ | ಸವಿತೃದೇವನ ಅನುಗ್ರಹವನ್ನು ಹೊಂದಿಯೇ ಯಜಮಾನನು ಈ ಕನಕಾದಿಧನವನ್ನು ಹೊಂದುವನು. |

---

ಹೋಮವನ್ನು ಮಾಡಬೇಕು. ಇದರಿಂದ ಯಜಮಾನನು ಎಲ್ಲ ದಿಕ್ಕುಗಳಿಂದಲೂ ಬ್ರಹ್ಮವರ್ಚಸವನ್ನು ಹೊಂದುವನು.

ಅಧಿಕವಾಗಿ ಚಿನ್ನವನ್ನು ಪಡೆಯಬೇಕೆಂದು ಬಯಸುವವನೂ, ತಾನು ಚಿನ್ನವನ್ನು ಪಡೆದು ಅದು ವೃದ್ಧಿಯನ್ನು ಹೊಂದಿ ತನ್ನನ್ನು ಆಶ್ರಯಿಸಲಿ ಎಂದು ಬಯಸುವವನೂ

# ಭೂಮ್ಯೈ ಚರುರ್ಭವತ್ಯಸ್ಯಾಮೇವೈನದ್ವಿಂದತ

# ಉಪೈನಗ್ಂ ಹಿರಣ್ಯಂ ನಮತಿ

---

ಭೂಮ್ಯೈ । ಚರುಃ । ಭವತಿ । ಅಸ್ಯಾಮ್ । ಏವ । ಏನತ್ । ವಿಂದತೇ । ಉಪೇತಿ ।

ಏನಮ್ । ಹಿರಣ್ಯಮ್ । ನಮತಿ ।

---

| | |
|---|---|
| ಭೂಮ್ಯೈ ಚರುಃ ಭವತಿ | ಮತ್ತೊಂದು ಯಾಗವು ಭೂದೇವತಾಕವಾಗಿದೆ. |
| ಅಸ್ಯಾಮ್ ಏವ ಏನತ್ ವಿಂದತೇ ಹಿರಣ್ಯಮ್ ಏನಮ್ ಉಪನಮತಿ | ಈ ಭೂಮಿಯಲ್ಲಿಯೇ ಚಿನ್ನವನ್ನು ಪಡೆಯುತ್ತಾನೆ. ಹೀಗೆ ಚಿನ್ನವು ಯಜಮಾನನನ್ನು ಹೊಂದುತ್ತದೆ. ಮತ್ತೆ ಮತ್ತೆ ವೃದ್ಧಿಯನ್ನು ಹೊಂದುತ್ತದೆ. |

---

ಮೂರು ಹವಿರ್ಯಾಗಗಳನ್ನು ಮಾಡಬೇಕು. ಅವುಗಳೆಂದರೆ ಅಗ್ನಿದೇವತೆಗಾಗಿ ಅಷ್ಟಾಕಪಾಲ ಪುರೋಡಾಶದ್ರವ್ಯದ ಯಾಗವು ಒಂದು; ಸವಿತೃದೇವತೆಗಾಗಿ ದ್ವಾದಶಕಪಾಲ ಪುರೋಡಾಶದ್ರವ್ಯದ ಯಾಗವು ಇನ್ನೊಂದು; ಭೂದೇವತೆಗಾಗಿ ಚರುದ್ರವ್ಯದ ಯಾಗವು ಮತ್ತೊಂದು.

ಚಿನ್ನವು ಅಗ್ನಿಗೆ ಸಂಬಂಧಿಸಿದುದು. ಯಜ್ಞವು ಅಗ್ನಿದೇವತಾಕವಾದುದರಿಂದ ಅಗ್ನಿಯ ಅನುಗ್ರಹದಿಂದ ಯಜಮಾನನು ಆಗ್ನೇಯವಾದ ಹಿರಣ್ಯವನ್ನು ಪಡೆಯುವನು. ಸರ್ವಕ್ಕೂ ಅನುಮತಿಯನ್ನು ಸವಿತೃದೇವನು ಕೊಡುತ್ತಾನಷ್ಟೆ. ಮತ್ತೊಂದು ಯಾಗವು ಸವಿತೃದೇವತಾಕವಾದುದರಿಂದ ಸವಿತೃದೇವನ ಅನುಗ್ರಹವನ್ನು ಹೊಂದಿದವನಾಗಿಯೇ ಯಜಮಾನನು ಹಿರಣ್ಯವನ್ನು ಪಡೆಯುತ್ತಾನೆ. ಇನ್ನೊಂದು ಚರುಯಾಗವು ಭೂಮಿ ದೇವತಾಕವಾದುದು. ಆ ಭೂಮಿದೇವಿಯ ಅನುಗ್ರಹದಿಂದ ಈ ಭೂಮಿಯಲ್ಲಿಯೇ ಸುವರ್ಣಾದಿಗಳನ್ನು ಹೊಂದುತ್ತಾನೆ. ಹೀಗೆ ಈ ಮೂರು ಯಾಗಗಳಿಂದ ಯಜಮಾನನು ಹಿರಣ್ಯಸಮೃದ್ಧಿಯನ್ನು ಹೊಂದುತ್ತಾನೆ. ಆ ಧನವೂ ಮತ್ತೆ ಮತ್ತೆ ವೃದ್ಧಿಯನ್ನು ಹೊಂದುತ್ತದೆ.

ವಿ ವಾ ಏಷ ಇಂದ್ರಿಯೇಣ ವೀರ್ಯೇಣರ್ಧ್ಯತೇ ಯೋ

ಹಿರಣ್ಯಂ ವಿಂದತ ಏತಾಮೇವ [ಏತಾಮ್ (೪) ಏವ]

ನಿರ್ವಪೇದ್ಧಿರಣ್ಯಂ ವಿತ್ತ್ವಾ ನೇಂದ್ರಿಯೇಣ ವೀರ್ಯೇಣ ವ್ಯೃಧ್ಯತ

---

**ವೀತಿ** । ವೈ । ಏಷಃ । ಇಂದ್ರಿಯೇಣ । ವೀರ್ಯೇಣ । ಋಧ್ಯತೇ । ಯಃ । ಹಿರಣ್ಯಮ್ । ವಿಂದತೇ । ಏತಾಮ್ । ಏವ । ನಿರಿತಿ । ವಪೇತ್ । ಹಿರಣ್ಯಮ್ । ವಿತ್ತ್ವಾ । ನ । ಇಂದ್ರಿಯೇಣ । ವೀರ್ಯೇಣ । ವೀತಿ । ಋಧ್ಯತೇ ।

---

**ಮತ್ತೊಂದು ಕಾಮನೆಗಾಗಿ ಯಾಗತ್ರಯವಿಧಾನ; ಪ್ರಶಂಸೆ.**

| | |
|---|---|
| ಯಃ ಹಿರಣ್ಯಮ್ ವಿಂದತೇ | ಯಾವನು ಹಿರಣ್ಯವನ್ನು ಪಡೆಯುವನೋ |
| ಏಷಃ ಇಂದ್ರಿಯೇಣ ವೀರ್ಯೇಣ ವಿ ಋಧ್ಯತೇ | ಈತನು ಇಂದ್ರಿಯಶಕ್ತಿಹೀನನೂ, ಸ್ವಾಭಾವಿಕಬಲಹೀನನೂ ಆಗುತ್ತಾನೆ. |
| ಹಿರಣ್ಯಮ್ ವಿತ್ತ್ವಾ ಏತಾಮ್ | ಸ್ವರ್ಣಸಮೃದ್ಧಿಯನ್ನು ಹೊಂದಿ |
| ಏವ ನಿರ್ವಪೇತ್ | ಈ ಯಾಗತ್ರಯವನ್ನೇ ಅನುಷ್ಠಿಸಬೇಕು. |
| ಇಂದ್ರಿಯೇಣ ವೀರ್ಯೇಣ ನ ವಿ ಋಧ್ಯತೇ | ಇಂದ್ರಿಯಸಾಮರ್ಥ್ಯಬಲಗಳಿಂದ ಹೀನನಾಗುವುದಿಲ್ಲ. |

---

ಹಿರಣ್ಯವನ್ನು ಅಧಿಕವಾಗಿ ಹೊಂದಿದವನು ತನ್ನ ಧನವು ನಷ್ಟವಾಗಬಹುದೆಂಬ ಭೀತಿಯಿಂದ ಇಂದ್ರಿಯಬಲಹೀನನಾಗುತ್ತಾನೆ. ಅಂತಹ ಯಜಮಾನನು ಈ ಇಷ್ಟಿಯನ್ನೇ ಮಾಡಬೇಕು. ಈ ಯಾಗಪ್ರಭಾವ ದಿಂದ ಅವನ ಇಂದ್ರಿಯಬಲಗಳ ಹಾನಿಯಾಗದೇ ಯಜಮಾನನು ಕ್ಷೇಮವಾಗಿರುತ್ತಾನೆ. ದೇವತಾನುಗ್ರಹದಿಂದ ಧನಹಾನಿಯೂ ಆಗುವುದಿಲ್ಲ.

ಏತಾಮೇವ ನಿರ್ವಪೇದ್ಯಸ್ಯ ಹಿರಣ್ಯಂ ನಶ್ಯೇದ್ಯದಾಗ್ನೇಯೋ

ಭವತ್ಯಾಗ್ನೇಯಂ ವೈ ಹಿರಣ್ಯಂ ಯಸ್ಯೈವ ಹಿರಣ್ಯಂ

ತೇನೈವೈನದ್ವಿಂದತಿ ಸಾವಿತ್ರೋ ಭವತಿ ಸವಿತೃಪ್ರಸೂತ

ಏವೈನದ್ವಿಂದತಿ

---

**ಏತಾವ್** । ಏವ । ನಿರಿತಿ । ವಪೇತ್ । ಯಸ್ಯ । ಹಿರಣ್ಯಮ್ । ನಶ್ಯೇತ್ । ಯತ್ । ಆಗ್ನೇಯಃ । ಭವತಿ । ಆಗ್ನೇಯಮ್ । ವೈ । ಹಿರಣ್ಯಮ್ । ಯಸ್ಯ । ಏವ । ಹಿರಣ್ಯಮ್ । ತೇನ । ಏವ । ಏನತ್ । ವಿಂದತಿ । ಸಾವಿತ್ರಃ । ಭವತಿ । ಸವಿತೃಪ್ರಸೂತ ಇತಿ ಸವಿತೃ–ಪ್ರಸೂತಃ । ಏವ । ಏನತ್ । ವಿಂದತಿ ।

---

**ಮತ್ತೊಂದು ಫಲಕ್ಕಾಗಿ ಈ ಇಷ್ಟಿವಿಧಾನ; ಪ್ರಶಂಸೆ.**

| | |
|---|---|
| ಯಸ್ಯ ಹಿರಣ್ಯಮ್ ನಶ್ಯೇತ್ | ಯಾವನ ಚಿನ್ನವು ನಾಶವಾಗುತ್ತದೆಯೋ [ಅವನು] |
| ಏತಾಮ್ ಏವ ನಿರ್ವಪೇತ್ | ಈ ಯಾಗವನ್ನೇ ಮಾಡಬೇಕು. |
| ಯತ್ ಆಗ್ನೇಯಃ ಭವತಿ | ಆಗ್ನೇಯಪುರೋಡಾಶಯಾಗವೆಂಬುದು ಯಾವುದುಂಟೋ [ಅದರ ಫಲವು ಹೀಗಿದೆ]. |
| ಹಿರಣ್ಯಮ್ ಆಗ್ನೇಯಮ್ ವೈ ಯಸ್ಯ ಏವ ಹಿರಣ್ಯಮ್ ತೇನ ಏವ ಏನತ್ ವಿಂದತಿ | ಚಿನ್ನವು ತೈಜಸವಾದುದಷ್ಟೆ. ಅದು ಅಗ್ನಿ ಸಂಬಂಧಿಯಾದುದರಿಂದ ಅಗ್ನಿಯ ಅನುಗ್ರಹ ದಿಂದಲೇ ಅದನ್ನು ಪಡೆಯುತ್ತಾನೆ. |
| ಸಾವಿತ್ರಃ ಭವತಿ, ಸವಿತೃಪ್ರಸೂತಃ ಏವ ಏನತ್ ವಿಂದತಿ | ಸವಿತೃದೇವತಾಕವಾದ ಯಾಗದ ಫಲವೆಂದರೆ ಸವಿತೃದೇವನ ಅನುಗ್ರಹದಿಂದಲೇ ಯಜಮಾನನು ಹಿರಣ್ಯವನ್ನು ಹೊಂದುವನು. |

---

ಚಿನ್ನವು ಕಳೆದುಹೋದರೆ ಆ ಯಜಮಾನನು ಈ ಯಾಗವನ್ನೇ ಮಾಡಬೇಕು. ಆಗ್ನೇಯಯಾಗದಿಂದ ಅಗ್ನಿಸಂಬಂಧಿಯಾದ ಸುವರ್ಣವನ್ನು ಪಡೆಯುತ್ತಾನೆ. ಸಾವಿತ್ರ

ಭೂಮ್ಯೈ ಚರುರ್ಭವತ್ಯಸ್ಯಾಂ ವಾ ಏತನ್ನಶ್ಯತಿ

ಯನ್ನಶ್ಯತ್ಯಸ್ಯಾಮೇವೈನದ್ವಿಂದತೀಂದ್ರಸ್ತ್ವಷ್ಟುಃ

[ವಿಂದತೀಂದ್ರಃ (೫) ತ್ವಷ್ಟುಃ] ಸೋಮಮಭೀಷಹಾಽಪಿಬತ್ಸ

---

ಭೂಮ್ಯೈ । ಚರುಃ । ಭವತಿ । ಅಸ್ಯಾಮ್ । ವೈ । ಏತತ್ । ನಶ್ಯತಿ । ಯತ್ । ನಶ್ಯತಿ । ಅಸ್ಯಾಮ್ । ಏವ । ಏನತ್ । ವಿಂದತಿ । **ಇಂದ್ರಃ** । ತ್ವಷ್ಟುಃ । ಸೋಮಮ್ । ಅಭೀಷ-ಹೇತ್ಯಭಿ–ಸಹಾ । ಅಪಿಬತ್ । ಸಃ ।

---

| | |
|---|---|
| **ಭೂಮ್ಯೈ ಚರುಃ ಭವತಿ** | ಮತ್ತೊಂದು ಹವಿಸ್ಸು ಭೂಮಿದೇವತಾಕವಾದುದು. [ಅದರ ಫಲವು ಹೀಗಿದೆ]. |
| **ಅಸ್ಯಾಮ್ ವೈ ಏತತ್ ನಶ್ಯತಿ** | ಈ ಭೂಮಿಯಲ್ಲಿಯೇ ಎಲ್ಲಿಯೋ ಬಿದ್ದು ಹಿರಣ್ಯವು ಕಾಣದೇ ಹೋಗಿದೆ. |
| **ಯತ್ ನಶ್ಯತಿ ಅಸ್ಯಾಮ್ ಏವ ಏನತ್ ವಿಂದತಿ** | ಈ ಚರುಯಾಗದಿಂದ ಕಳೆದುಹೋಗಿರುವ ಭೂಮಿಯಲ್ಲಿಯೇ ಕಳೆದುಹೋಗಿರುವ ಈ ಹಿರಣ್ಯವನ್ನು ಮತ್ತೆ ಪಡೆಯುತ್ತಾನೆ. |

**ಸೋಮೇಂದ್ರಯಾಗವಿಧಿಗಾಗಿ ಉಪಾಖ್ಯಾನಕಥನ; ಫಲ**

| | |
|---|---|
| **ಇಂದ್ರಃ ತ್ವಷ್ಟುಃ ಸೋಮಮ್ ಅಭೀಷಹಾ ಅಪಿಬತ್** | ಇಂದ್ರನು ತ್ವಷ್ಟೃವಿನ ಯಾಗದ ಸೋಮರಸವನ್ನು ಬಲಾತ್ಕಾರವಾಗಿ ಎಲ್ಲವನ್ನೂ ಕುಡಿದುಬಿಟ್ಟನು. |
| **ಸಃ** | ಆ ಇಂದ್ರನು |

---

ಯಾಗದಿಂದ ಎಲ್ಲಕ್ಕೂ ಅನುಮತಿಯನ್ನು ಕೊಡುವ ಸವಿತೃದೇವನ ಅನುಗ್ರಹವನ್ನು ಹೊಂದಿ ಮತ್ತೆ ಈ ಚಿನ್ನವನ್ನು ಹೊಂದುತ್ತಾನೆ. ಭೂಮಿಚರುಯಾಗದಿಂದ ಕಳೆದುಹೋದ ಭೂಮಿಯಲ್ಲಿಯೇ ಮತ್ತೆ ಈ ಚಿನ್ನವನ್ನು ಹೊಂದುತ್ತಾನೆ.

ಇಂದ್ರನು ತ್ವಷ್ಟೃವಿನ ಮಗನಾದ ವಿಶ್ವರೂಪನನ್ನು ಕೊಂದನು. ಇದರಿಂದ ತ್ವಷ್ಟೃವು ಕೋಪಗೊಂಡನು. ಅವನು ಇಂದ್ರನನ್ನು ಜಯಿಸುವ ಪುತ್ರನನ್ನು ಪಡೆಯಬೇಕೆಂದು

ವಿಷ್ವಙ್ ವ್ಯಾರ್ಛತ್ಸ ಇಂದ್ರಿಯೇಣ ಸೋಮಪೀಥೇನ

ವ್ಯಾರ್ಧ್ಯತ ಸ ಯದೂರ್ಧ್ವಮುದವಮೀತ್ತೇ ಶ್ಯಾಮಾಕಾ

ಅಭವನ್ಥ್ಸ ಪ್ರಜಾಪತಿಮುಪಾಧಾವತ್ತಸ್ಮಾ ಏತಗ್ಂ

ಸೋಮೇಂದ್ರಗ್ಗ್ಂ ಶ್ಯಾಮಾಕಂ ಚರುಂ

---

ವಿಷ್ವಙ್ । ವೀತಿ । ಆರ್ಛತ್ । ಸಃ । ಇಂದ್ರಿಯೇಣ । ಸೋಮಪೀಥೇನೇತಿ ಸೋಮ– ಪೀಥೇನ । ವೀತಿ । ಆರ್ಧ್ಯತ । ಸಃ । ಯತ್ । ಊರ್ಧ್ವಮ್ । ಉದವಮೀದಿತ್ಯುತ್ – ಅವಮೀತ್ । ತೇ । ಶ್ಯಾಮಾಕಾಃ । ಅಭವನ್ । ಸಃ । ಪ್ರಜಾಪತಿಮಿತಿ ಪ್ರಜಾ–ಪತಿಮ್ । ಉಪೇತಿ । ಅಧಾವತ್ । ತಸ್ಮೈ । ಏತಮ್ । ಸೋಮೇಂದ್ರಮ್ । ಶ್ಯಾಮಾಕಮ್ । ಚರುಮ್ ।

---

| | |
|---|---|
| ವಿಷ್ವಙ್ ವ್ಯಾರ್ಛತ್ | [ಅನಂತರ ಭೀತನಾಗಿ] ಎಲ್ಲ ಕಡೆಗಳಿಗೂ ಓಡಿದನು/ಆ ಸೋಮವು ಎಲ್ಲೆಡೆ ಹೋಯಿತು. |
| ಸಃ ಇಂದ್ರಿಯೇಣ ಸೋಮಪೀಥೇನ ವ್ಯಾರ್ಧ್ಯತ | ಆ ಇಂದ್ರನು ಇಂದ್ರಿಯಶಕ್ತಿಯಿಲ್ಲದವನೂ, ಸೋಮಪಾನವಿಲ್ಲದವನೂ ಆದನು. |
| ಸಃ ಯತ್ ಊರ್ಧ್ವಮ್ ಉದವಮೀತ್ ತೇ ಶ್ಯಾಮಾಕಾಃ ಅಭವನ್ | ಆ ಇಂದ್ರನು ಯಾವ ಸೋಮರಸವನ್ನು ಬಾಯಿಯಿಂದ ಮೇಲಕ್ಕೆ ವಮನ ಮಾಡಿದನೋ, ಆ ರಸವೇ ಭೂಮಿಯ ಮೇಲೆ ಬಿದ್ದು ಸಾಮೆಧಾನ್ಯವಾಗಿ ಬೆಳೆಯಿತು. |
| ಸಃ ಪ್ರಜಾಪತಿಮ್ ಉಪಾಧಾವತ್ | ಆ ಇಂದ್ರನು ಪ್ರಜಾಪತಿಯನ್ನು ಆಶ್ರಯಿಸಿದನು. |
| ತಸ್ಮೈ ಏತಮ್ ಸೋಮೇಂದ್ರಮ್ ಶ್ಯಾಮಾಕಮ್ ಚರುಮ್ | ಆ ಇಂದ್ರನಿಗಾಗಿ ಪ್ರಜಾಪತಿಯು ಸೋಮೇಂದ್ರ ದೇವತಾಕವಾದ ಸಾಮೆ ಅಕ್ಕಿಯ ಚರುವನ್ನು |

---

ಒಂದು ಸೋಮಯಾಗವನ್ನು ಮಾಡಿದನು. ಅದಕ್ಕೆ ಇಂದ್ರನನ್ನು ಆಹ್ವಾನಿಸಲಿಲ್ಲ. ಇಂದ್ರನು ಬಲಾತ್ಕಾರದಿಂದ ಯಾಗಶಾಲೆಯನ್ನು ಪ್ರವೇಶಿಸಿ, ಸೋಮರಸವನ್ನೆಲ್ಲವನ್ನೂ ಕುಡಿದುಬಿಟ್ಟನು. ಅನಂತರ ಭೀತನಾಗಿ ಎಲ್ಲ ದಿಕ್ಕುಗಳಿಗೂ ಓಡಿದನು. ಅವನ ಇಂದ್ರಿಯ

ನಿರವಪತ್ತೇನೈವಾಸ್ಮಿನ್ನಿಂದ್ರಿಯಗ್‌ಂ ಸೋಮಪೀಥಮದಧಾ

ದ್ವಿ ವಾ ಏಷ ಇಂದ್ರಿಯೇಣ ಸೋಮಪೀಥೇನರ್ಧ್ಯತೇ

---

ನಿರಿತಿ । ಅವಪತ್ । ತೇನ । ಏವ । ಅಸ್ಮಿನ್ನ್ । ಇಂದ್ರಿಯಮ್ । ಸೋಮಪೀಥಮಿತಿ ಸೋಮ–ಪೀಥಮ್ । ಅದಧಾತ್ । **ವೀತಿ** । ವೈ । ಏಷಃ । ಇಂದ್ರಿಯೇಣ । ಸೋಮಪೀಥೇ ನೇತಿ ಸೋಮ–ಪೀಥೇನ । ಋಧ್ಯತೇ ।

---

| | |
|---|---|
| ನಿರವಪತ್ | ಯಾಗ ಮಾಡಿದನು. |
| ತೇನ ಏವ ಅಸ್ಮಿನ್ ಇಂದ್ರಿಯಮ್ ಸೋಮಪೀಥಮ್ ಅದಧಾತ್ | ಈ ಯಾಗದಿಂದಲೇ ಪ್ರಜಾಪತಿಯು ಇಂದ್ರನಲ್ಲಿ ಇಂದ್ರಿಯಶಕ್ತಿಯನ್ನೂ ಸೋಮಪಾನ ಫಲವನ್ನೂ ಉಂಟುಮಾಡಿದನು. |

**ಯಾಗವಿಧಿ; ಅದರ ಪ್ರಶಂಸೆ**

| | |
|---|---|
| ಯಃ ಸೋಮಮ್ ವಮಿತಿ | ಯಾವನು ಸೋಮರಸವನ್ನು ವಮನ ಮಾಡುತ್ತಾನೆಯೋ |
| ಏಷಃ ಇಂದ್ರಿಯೇಣ ಸೋಮಪೀಥೇನ ವ್ಯೃಧ್ಯತೇ | ಇವನು ಇಂದ್ರಿಯಶಕ್ತಿಯಿಂದಲೂ, ಸೋಮಪಾನದಿಂದಲೂ ಹೀನನಾಗುತ್ತಾನೆ. |

---

ಶಕ್ತಿಯೂ ಸೋಮರಸಪಾನವೂ ಹೀನವಾಗಿ ಹೋಯಿತು. ಆಗ ಆತನು ಕುಡಿದಿದ್ದ ಸೋಮರಸವು ಎಲ್ಲ ಕಡೆಗಳಿಂದಲೂ ಹೊರಬಂದಿತು. ಮುಖದಿಂದ ಮೇಲಕ್ಕೆ ವಮನ ಮಾಡಿದ ಸೋಮರಸವು ಭೂಮಿಯ ಮೇಲೆ ಬಿದ್ದಿತು. ಅದು ಸಾಮೆಧಾನ್ಯವಾಗಿ ಬೆಳೆಯಿತು. ಇಂದ್ರನು ಶಕ್ತಿಯನ್ನು ಮತ್ತೆ ಪಡೆಯಲು ಪ್ರಜಾಪತಿಯನ್ನು ಮರೆಹೊಕ್ಕನು. ಪ್ರಜಾಪತಿಯು ಇಂದ್ರನಿಗಾಗಿ ಸೋಮೇಂದ್ರದೇವತಾಕವಾದ ಶ್ಯಾಮಾಕಚರುದ್ರವ್ಯವುಳ್ಳ ಯಾಗವನ್ನು ಮಾಡಿದನು. ಅದರ ಪ್ರಭಾವದಿಂದ ಇಂದ್ರನಲ್ಲಿ ಇಂದ್ರಿಯ ಶಕ್ತಿಯನ್ನೂ , ಸೋಮಪಾನಫಲವನ್ನೂ ನೆಲೆಗೊಳಿಸಿದನು.

ಯಃ ಸೋಮಂ ವಮಿತಿ ಯಸ್ಸೋಮವಾಮೀ ಸ್ಯಾತ್ತಸ್ಮಾ

[ತಸ್ಮೈ (೬) ಏತಗ್ಂ] ಏತಗ್ಂ ಸೋಮೇಂದ್ರಗ್ಗ್ಂ

ಶ್ಯಾಮಾಕಂ ಚರುಂ ನಿರ್ವಪೇತ್ಸೋಮಂ ಚೈವೇಂದ್ರಂ

ಚ ಸ್ವೇನ ಭಾಗಧೇಯೇನೋಪಧಾವತಿ

---

ಯಃ । ಸೋಮಮ್ । ವಮಿತಿ । ಯಃ । ಸೋಮವಾಮೀತಿ ಸೋಮ–ವಾಮೀ । ಸ್ಯಾತ್ । ತಸ್ಮೈ । ಏತಮ್ । ಸೋಮೇಂದ್ರಮ್ । ಶ್ಯಾಮಾಕಮ್ । ಚರುಮ್ । ನಿರಿತಿ । ವಪೇತ್ । ಸೋಮಮ್ । ಚ । ಏವ । ಇಂದ್ರಮ್ । ಚ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಯಃ ಸೋಮವಾಮೀ ಸ್ಯಾತ್ ತಸ್ಮೈ | ಯಾವನು ಸೋಮವನ್ನು ವಮನ ಮಾಡುತ್ತಾನೆಯೋ ಅವನಿಗಾಗಿ |
| ಏತಮ್ ಸೋಮೇಂದ್ರಮ್ ಶ್ಯಾಮಾಕಮ್ ಚರುಮ್ ನಿರ್ವಪೇತ್ | ಈ ಸೋಮೇಂದ್ರದೇವತಾಕವಾದ ಶ್ಯಾಮಾಕಚರುದ್ರವ್ಯವುಳ್ಳ ಯಾಗವನ್ನು ಮಾಡಬೇಕು. |
| ಸೋಮಮ್ ಚ ಇಂದ್ರಮ್ ಚ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಸೋಮೇಂದ್ರ ಯಾಗದಿಂದ ಸೋಮ–ಇಂದ್ರರಿಗೆ ಹವಿರ್ಭಾಗವನ್ನಿತ್ತು ಸೇವಿಸುತ್ತಾನೆ. |

---

ಸೋಮರಸವನ್ನು ವಾಂತಿ ಮಾಡಿದ ಯಜಮಾನನು ಇಂದ್ರಿಯಶಕ್ತಿಯನ್ನೂ, ಸೋಮರಸಪಾನ ಮಾಡಿದ ತೃಪ್ತಿಯನ್ನೂ ಕಳೆದುಕೊಳ್ಳುತ್ತಾನೆ. ಅವನು ಸೋಮೇಂದ್ರ ದೇವತಾಕವಾದ ಸಾಮೆಧಾನ್ಯದ ಚರುವು ಹವಿಸ್ಸಾಗಿರುವ ಯಾಗವನ್ನು ಮಾಡಬೇಕು. ಈ ಯಾಗದಿಂದ ಯಜಮಾನನು ಸೋಮೇಂದ್ರದೇವತೆಗಳ ಭಾಗವನ್ನು ಅರ್ಪಿಸಿ ತೃಪ್ತಿ ಪಡಿಸುತ್ತಾನೆ.

ತಾವೇವಾಸ್ಮಿನ್ನಿಂದ್ರಿಯಗ್‌ಂ ಸೋಮಪೀಥಂ ಧತ್ತೋ
ನೇಂದ್ರಿಯೇಣ ಸೋಮಪೀಥೇನ ವ್ಯೃಧ್ಯತೇ
ಯತ್ಸೌಮ್ಯೋ ಭವತಿ ಸೋಮಪೀಥಮೇವಾವರುಂಧೇ

ತೌ। ಏವ। ಅಸ್ಮಿನ್ನ್। ಇಂದ್ರಿಯಮ್। ಸೋಮಪೀಥಮಿತಿ ಸೋಮ–ಪೀಥಮ್। ಧತ್ತಃ।
ನ। ಇಂದ್ರಿಯೇಣ। ಸೋಮಪೀಥೇನೇತಿ ಸೋಮ–ಪೀಥೇನ। ವೀತಿ। ಋಧ್ಯತೇ। **ಯತ್।**
ಸೌಮ್ಯಃ। ಭವತಿ। ಸೋಮಪೀಥಮಿತಿ ಸೋಮ–ಪೀಥಮ್। ಏವ। ಅವೇತಿ। ರುಂಧೇ।

| | |
|---|---|
| **ತೌ ಏವ ಅಸ್ಮಿನ್ ಇಂದ್ರಿಯಮ್ ಸೋಮಪೀಥಮ್ ಧತ್ತಃ** | ಆ ಇಂದ್ರ–ಸೋಮರು ಈ ಯಜಮಾನನಲ್ಲಿ ಇಂದ್ರಿಯಸಾಮರ್ಥ್ಯವನ್ನೂ, ಸೋಮಪಾನವನ್ನೂ ನೆಲೆಗೊಳಿಸುತ್ತಾರೆ. |
| **ಇಂದ್ರಿಯೇಣ ಸೋಮಪೀಥೇನ ನ ವ್ಯೃಧ್ಯತೇ** | ಯಜಮಾನನು ಇಂದ್ರಿಯ ಸೋಮಪಾನಗಳಿಂದ ಹೀನನಾಗುವುದಿಲ್ಲ. |

**ದೇವತಾದ್ರವ್ಯಪ್ರಶಂಸೆ**

| | |
|---|---|
| **ಯತ್ ಸೌಮ್ಯಃ ಭವತಿ** | ಯಾಗವು ಸೋಮದೇವತಾಕವಾಗಿದೆಯೆಂಬುದು ಯಾವುದುಂಟೋ [ಅದರ ಫಲವಿದು]. |
| **ಸೋಮಪೀಥಮ್ ಏವ ಅವರುಂಧೇ** | ಯಜಮಾನನು ಸೋಮಪಾನಫಲವನ್ನು ಹೊಂದುತ್ತಾನೆ. |

ಆ ಇಬ್ಬರು ದೇವತೆಗಳೂ ಈ ಯಜಮಾನನಿಗೆ ಇಂದ್ರಿಯಶಕ್ತಿಯನ್ನೂ, ಸೋಮರಸವನ್ನು ಜೀರ್ಣಮಾಡಿಕೊಳ್ಳುವ ಶಕ್ತಿಯನ್ನೂ ಕೊಡುತ್ತಾರೆ. ಯಜಮಾನನು ಇಂದ್ರಿಯ ಸೋಮಪಾನಫಲಗಳಿಂದ ಹೀನನಾಗುವುದಿಲ್ಲ.

ಇಲ್ಲಿ ದೇವತೆಗಳ ಹಾಗೂ ದ್ರವ್ಯದ ಪ್ರಶಂಸೆಯಿದೆ. ಸೋಮನು ದೇವತೆಯಾಗಿರುವುದರಿಂದ ಯಜಮಾನನು ಸೋಮಪಾನಫಲವನ್ನು ಪಡೆಯುತ್ತಾನೆ. ಮತ್ತೊಮ್ಮೆ

ಯದೈಂದ್ರೋ ಭವತೀಂದ್ರಿಯಂ ವೈ ಸೋಮಪೀಥ

ಇಂದ್ರಿಯಮೇವ ಸೋಮಪೀಥಮವರುಂಧೇ

ಶ್ಯಾಮಾಕೋ ಭವತ್ಯೇಷ ವಾವ ಸ ಸೋಮಃ (೭)

---

ಯತ್ । ಐಂದ್ರಃ । ಭವತಿ । ಇಂದ್ರಿಯಮ್ । ವೈ । ಸೋಮಪೀಥ ಇತಿ ಸೋಮ–ಪೀಥಃ ।
ಇಂದ್ರಿಯಮ್ । ಏವ । ಸೋಮಪೀಥಮಿತಿ ಸೋಮ–ಪೀಥಮ್ । ಅವೇತಿ । ರುಂಧೇ ।
ಶ್ಯಾಮಾಕಃ । ಭವತಿ । ಏಷಃ । ವಾವ । ಸಃ । ಸೋಮಃ ।

---

| | |
|---|---|
| ಯತ್ ಐಂದ್ರಃ ಭವತಿ | ಇಂದ್ರನು ದೇವತೆಯೆಂಬುದು ಯಾವುದುಂಟೋ [ಅದರ ಫಲವಿದು]. |
| ಇಂದ್ರಿಯಮ್ ವೈ ಸೋಮಪೀಥಃ | ಇಂದ್ರಿಯಶಕ್ತಿಯೇ ಸೋಮಪಾನವನ್ನು ಜೀರ್ಣಗೊಳಿಸುವ ಶಕ್ತಿಯಾಗಿದೆ. |
| ಇಂದ್ರಿಯಮ್ ಸೋಮಪೀಥಮ್ ಏವ ಅವರುಂಧೇ | ಯಜಮಾನನು ಇಂದ್ರಿಯಶಕ್ತಿಯನ್ನೂ ಸೋಮರಸಪಾನಫಲವನ್ನೂ ಹೊಂದುತ್ತಾನೆ. |
| ಶ್ಯಾಮಾಕಃ ಭವತಿ | ಸಾಮೆಧಾನ್ಯವು ಹವಿರ್ದ್ರವ್ಯವಾಗಿದೆ. [ಅದರ ಫಲವಿದು]. |
| ಏಷಃ ವಾವ ಸಃ ಸೋಮಃ | [ಸೋಮರಸದಿಂದ ಜನಿಸಿದ] ಈ ಸಾಮೆಯು ಆ ಸೋಮವೇ ಆಗಿದೆ. |

---

ಸೋಮರಸವು ವಮನವಾಗದೆ ಅದು ಜೀರ್ಣವಾಗುತ್ತದೆ. ಇಂದ್ರನು ದೇವತೆಯಾಗಿರುವುದರಿಂದ ಸೋಮಪಾನವನ್ನೂ ಜೀರ್ಣ ಮಾಡಿಕೊಳ್ಳುವ ಶಕ್ತಿಯನ್ನೂ , ಇಂದ್ರಿಯಶಕ್ತಿಯನ್ನೂ ಹೊಂದುತ್ತಾನೆ. ಸೋಮರಸದಿಂದ ಹುಟ್ಟಿದ ಸಾಮೆಯೇ ಹವಿಸ್ಸಿನ ದ್ರವ್ಯವಾಗಿರುವುದರಿಂದ ಒಡನೆಯೇ ಸೋಮಪಾನವನ್ನೂ ಮಾಡಿದಂತಾಗುತ್ತದೆ.

**ಸಾಕ್ಷಾದೇವ ಸೋಮಪೀಥಮವರುಂಧೇಽಗ್ನಯೇ ದಾತ್ರೇ**

**ಪುರೋಡಾಶಮಷ್ಟಾಕಪಾಲಂ ನಿರ್ವಪೇದಿಂದ್ರಾಯ**

**ಪ್ರದಾತ್ರೇ ಪುರೋಡಾಶಮೇಕಾದಶಕಪಾಲಂ**

---

ಸಾಕ್ಷಾದಿತಿ ಸ–ಅಕ್ಷಾತ್ । ಏವ । ಸೋಮಪೀಥಮಿತಿ ಸೋಮ–ಪೀಥಮ್ । ಅವೇತಿ । ರುಂಧೇ । **ಅಗ್ನಯೇ** । ದಾತ್ರೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ । ನಿರಿತಿ । ವಪೇತ್ । ಇಂದ್ರಾಯ । ಪ್ರದಾತ್ರ ಇತಿ ಪ್ರ–ದಾತ್ರೇ । ಪುರೋಡಾಶಮ್ । ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್ ।

---

| | |
|---|---|
| ಸಾಕ್ಷಾತ್ ಏವ ಸೋಮಪೀಥಮ್ ಅವರುಂಧೇ | ಆದುದರಿಂದ ಯಜಮಾನನು ಒಡನೆಯೇ ಸೋಮರಸಪಾನವನ್ನು ಮಾಡಿದವನಾಗುತ್ತಾನೆ. |

**ಪಶುಕಾಮನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| ಪಶುಕಾಮಃ | ಗವಾದಿಪಶುಕಾಮನಾದವನು |
| ಅಗ್ನಯೇ ದಾತ್ರೇ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್ | ದಾತೃವಾದ ಅಗ್ನಿದೇವತೆಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. |
| ಪ್ರದಾತ್ರೇ ಇಂದ್ರಾಯ ಪುರೋಡಾಶಮ್ ಏಕಾದಶಕಪಾಲಮ್ [ನಿರ್ವಪೇತ್] | ಪ್ರದಾತೃವಾದ ಇಂದ್ರದೇವನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಅನುಷ್ಠಿಸಬೇಕು. |

---

ಪಶುಕಾಮನು ಮೂರು ಹವಿರ್ಯಾಗಗಳನ್ನು ಮಾಡಬೇಕು. ದಾತೃವಾದ ಅಗ್ನಿಗೆ ಅಷ್ಟಾಕಪಾಲದ್ರವ್ಯವನ್ನು ಸಮರ್ಪಿಸುವುದು ಮೊದಲನೆಯ ಹವಿರ್ಯಾಗ. ಪ್ರದಾತೃವಾದ ಇಂದ್ರನಿಗೆ ಏಕಾದಶಕಪಾಲಪುರೋಡಾಶದ್ರವ್ಯವನ್ನು ಅರ್ಪಿಸುವುದು ಎರಡನೆಯ

ಪಶುಕಾಮೋಽಗ್ನಿರೇವಾಸ್ಮೈ ಪಶೂನ್ಪ್ರಜನಯತಿ ವೃದ್ಧಾನಿಂದ್ರಃ

ಪ್ರಯಚ್ಛತಿ ದಧಿ ಮಧು ಘೃತಮಾಪೋ ಧಾನಾ

ಭವಂತ್ಯೇತದ್ವೈ ಪಶೂನಾಗ್ಂ ರೂಪಗ್ಂ

---

ಪಶುಕಾಮ ಇತಿ ಪಶು–ಕಾಮಃ। ಅಗ್ನಿಃ। ಏವ। ಅಸ್ಮೈ। ಪಶೂನ್। ಪ್ರಜನಯತೀತಿ ಪ್ರ–ಜನಯತಿ। ವೃದ್ಧಾನ್। ಇಂದ್ರಃ। ಪ್ರೇತಿ। ಯಚ್ಛತಿ। ದಧಿ। ಮಧು। ಘೃತಮ್। ಆಪಃ। ಧಾನಾಃ। ಭವಂತಿ। ಏತತ್। ವೈ। ಪಶೂನಾಮ್। ರೂಪಮ್।

---

| | |
|---|---|
| ಅಗ್ನಿಃ ಏವ ಅಸ್ಮೈ ಪಶೂನ್ ಪ್ರಜನಯತಿ | ಅಗ್ನಿಯೇ ಈ ಯಜಮಾನನಿಗೆ ಪಶುಗಳನ್ನು ಉತ್ಪಾದಿಸುತ್ತಾನೆ. |
| ವೃದ್ಧಾನ್ ಇಂದ್ರಃ ಪ್ರಯಚ್ಛತಿ | ಆ ಪಶುಗಳನ್ನು ಇಂದ್ರನು ವೃದ್ಧಿಗೊಳಿಸಿ ಕೊಡುತ್ತಾನೆ. |

**ಪ್ರಾಜಾಪತ್ಯಯಾಗವಿಧಿ; ಪ್ರಶಂಸೆ**

| | |
|---|---|
| ದಧಿ, ಮಧು, ಘೃತಮ್, ಆಪಃ, ಧಾನಾಃ ಭವಂತಿ | ಮೂರನೆಯ ಪ್ರಾಜಾಪತ್ಯಯಾಗದಲ್ಲಿ ಮೊಸರು, ಜೇನುತುಪ್ಪ, ತುಪ್ಪ, ನೀರು ಮತ್ತು ಹುರಿದ ಯವ ಈ ಐದೂ ಒಟ್ಟು ಗೂಡಿ ಯಾಗದ್ರವ್ಯವಾಗಿದೆ. |
| ಏತತ್ ವೈ ಪಶೂನಾಮ್ ರೂಪಮ್ | ಮೊಸರು–ತುಪ್ಪಗಳಿಂದ ಕೂಡಿರುವ ಈ ದ್ರವ್ಯಸಮೂಹವೂ ಪಶುರೂಪವಾಗಿದೆ. |

---

ಹವಿರ್ಯಾಗ. ಪ್ರಜಾಪತಿದೇವತೆಗಾಗಿ ದಧಿ–ಘೃತಾದಿಯಾದ ಐದು ದ್ರವ್ಯಗಳನ್ನು ಸಮರ್ಪಿಸುವುದು ಮೂರನೆಯ ಹವಿರ್ಯಾಗ. ಅಗ್ನಿಗಾಗಿ ಯಾಗ ಮಾಡುವುದರಿಂದ ದಾತೃವಾದ ಅಗ್ನಿಯು ಪಶುಗಳನ್ನು ಕೊಡುತ್ತಾನೆ. ಪ್ರದಾತೃವಾದ ಇಂದ್ರನು ಪಶುಗಳನ್ನು ವೃದ್ಧಿಗೊಳಿಸುತ್ತಾನೆ.

ದಧಿ, ಮಧು, ಘೃತ, ಜಲ ಮತ್ತು ಹುರಿದ ಯವ – ಈ ಐದು ದ್ರವ್ಯಗಳು ಒಂದುಗೂಡಿ ಮೂರನೆಯ ಯಾಗದ ದ್ರವ್ಯವಾಗಿದೆ. ದಧಿ–ಘೃತಾದಿಗಳು ಪಶುಜನ್ಯ ವಾಗಿರುವುದರಿಂದ ಅವುಗಳಿಂದ ಕೂಡಿದ ಸಮುದಾಯವೂ ಪಶುರೂಪವೇ

ರೂಪೇಣೈವ ಪಶೂನವರುಂಧೇ ಪಂಚಗೃಹೀತಂ ಭವತಿ

ಪಾಂಕ್ತಾ ಹಿ ಪಶವೋ ಬಹುರೂಪಂ ಭವತಿ ಬಹುರೂಪಾ

ಹಿ ಪಶವಃ ಸಮೃದ್ಧ್ಯೈ [ಪಶವಃ (೮) ಸಮೃದ್ಧ್ಯೈ]

---

ರೂಪೇಣ। ಏವ। ಪಶೂನ್। ಅವೇತಿ। ರುಂಧೇ। **ಪಂಚಗೃಹೀತಮಿತಿ ಪಂಚ–ಗೃಹೀತಮ್**। ಭವತಿ। ಪಾಂಕ್ತಾಃ। ಹಿ। ಪಶವಃ। ಬಹುರೂಪಮಿತಿ ಬಹು–ರೂಪಮ್। ಭವತಿ। ಬಹುರೂಪಾ ಇತಿ ಬಹು–ರೂಪಾಃ। ಹಿ। ಪಶವಃ। ಸಮೃಧ್ಯಾ ಇತಿ ಸಮ್–ಋದ್ಧ್ಯೈ।

---

| | |
|---|---|
| **ರೂಪೇಣ ಏವ ಪಶೂನ್ ಅವರುಂಧೇ** | ಆದುದರಿಂದ ಪಶುರೂಪವಾಗಿರುವ ದಧ್ಯಾದಿದ್ರವ್ಯಗಳಿಂದಲೇ ಯಜಮಾನನು ಗವಾದಿಪಶುಗಳನ್ನು ಹೊಂದುತ್ತಾನೆ. |

**ಸಂಖ್ಯಾದೇವತಾದಿ ಪ್ರಶಂಸೆ**

| | |
|---|---|
| **ಪಂಚಗೃಹೀತಮ್ ಭವತಿ** | ಐದು ದ್ರವ್ಯಗಳನ್ನು ಅವದಾನ ಮಾಡುವುದರಿಂದ ಪಂಚಗೃಹೀತವಾಗುತ್ತದೆ. |
| **ಪಶವಃ ಪಾಂಕ್ತಾಃ ಹಿ** | ಪಶುಗಳು ಪಂಚಾಕ್ಷರಗಳುಳ್ಳ ಪಂಕ್ತಿ ಛಂದಸ್ಸಿಗೆ ಸಂಬಂಧಿಸಿದವುಗಳಷ್ಟೆ. |
| **ಬಹುರೂಪಮ್ ಭವತಿ** | ಹವಿರ್ದ್ರವ್ಯಗಳು ದಧಿಘೃತಾದಿ ಬಹುರೂಪವಾಗಿವೆ. |
| **ಬಹುರೂಪಾಃ ಹಿ ಪಶವಃ ಸಮೃದ್ಧ್ಯೈ** | ಪಶುಗಳೂ ಗೋಮಹಿಷಾದಿ ಬಹುರೂಪಗಳಾಗಿವೆ. ಆದುದರಿಂದ ಈ ಯಾಗದ್ರವ್ಯಗಳು ಪಶುಸಮೃದ್ಧಿಗೆ ಕಾರಣವಾಗುತ್ತವೆ. |

---

ಆಗಿದೆ. ಇದೇ ಯಾಗದ್ರವ್ಯವಾಗಿರುವುದರಿಂದ ಯಜಮಾನನು ಪಶುರೂಪದಿಂದಲೇ ಪಶುಗಳನ್ನು ಪಡೆದಂತಾಗುತ್ತದೆ. ಇದು ದ್ರವ್ಯಪ್ರಶಂಸೆ.

ದ್ರವ್ಯದೇವತಾದಿಪ್ರಶಂಸೆಯು ಹೀಗಿದೆ : ಐದು ದ್ರವ್ಯಗಳನ್ನು ಅವದಾನ ಮಾಡುವುದರಿಂದ ಪಂಚಗೃಹೀತವಾಗುತ್ತದೆ. ಪಶುಗಳು ಪಂಚಾಕ್ಷರಗಳುಳ್ಳ ಪಂಕ್ತಿ ಛಂದಸ್ಸಿಗೆ ಸಂಬಂಧಿಸಿವೆ. ಆದುದರಿಂದ ಪಶುಪ್ರಾಪ್ತಿಗೆ ಸಾಧನವಾಗುತ್ತದೆ. ದಧಿಘೃತಾದಿ

ಪ್ರಾಜಾಪತ್ಯಂ ಭವತಿ ಪ್ರಾಜಾಪತ್ಯಾ ವೈ ಪಶವಃ ಪ್ರಜಾಪತಿ ರೇವಾಸ್ಮೈ ಪಶೂನ್ಪ್ರಜನಯತ್ಯಾತ್ಮಾ ವೈ ಪುರುಷಸ್ಯ ಮಧು ಯನ್ಮಧ್ವಗ್ನೌ ಜುಹೋತ್ಯಾತ್ಮಾನಮೇವ ತದ್ಯಜಮಾನೋಽಗ್ನೌ

---

ಪ್ರಾಜಾಪತ್ಯಮಿತಿ ಪ್ರಾಜಾ–ಪತ್ಯಮ್ । ಭವತಿ । ಪ್ರಾಜಾಪತ್ಯಾ ಇತಿ ಪ್ರಾಜಾ–ಪತ್ಯಾಃ । ವೈ । ಪಶವಃ । ಪ್ರಜಾಪತಿರಿತಿ ಪ್ರಜಾ–ಪತಿಃ । ಏವ । ಅಸ್ಮೈ । ಪಶೂನ್ । ಪ್ರೇತಿ । ಜನಯತಿ । ಆತ್ಮಾ । ವೈ । ಪುರುಷಸ್ಯ । ಮಧು । ಯತ್ । ಮಧು । ಅಗ್ನೌ । ಜುಹೋತಿ । ಆತ್ಮಾನಮ್ । ಏವ । ತತ್ । ಯಜಮಾನಃ । ಅಗ್ನೌ ।

---

| | |
|---|---|
| ಪ್ರಾಜಾಪತ್ಯಮ್ ಭವತಿ | ಈ ಯಾಗವು ಪ್ರಜಾಪತಿದೇವತಾಕವಾಗಿದೆ. |
| ಪಶವಃ ಪ್ರಾಜಾಪತ್ಯಾಃ ವೈ | ಪಶುಗಳೂ ಪ್ರಜಾಪತಿಸಂಬಂಧಿಯಾದವುಗಳು |
| ಪ್ರಜಾಪತಿಃ ಏವ ಅಸ್ಮೈ ಪಶೂನ್ ಪ್ರಜನಯತಿ | ಪ್ರಜಾಪತಿದೇವನೇ ಯಜಮಾನನಿಗೆ ಪಶುಗಳನ್ನು ಉತ್ಪಾದಿಸಿ ಕೊಡುತ್ತಾನೆ. |

**ಮಧುಹೋಮಪ್ರಶಂಸೆ**

| | |
|---|---|
| ಪುರುಷಸ್ಯ ಆತ್ಮಾ ಮಧು ವೈ | ಮನುಷ್ಯನಿಗೆ ಆತ್ಮನು ಜೇನಿನಂತೆ ಇದ್ದಾನೆ. [ಅರಿಯಲು ಕಷ್ಟಸಾಧ್ಯನಾಗಿದ್ದಾನೆ]. |
| ಮಧು ಅಗ್ನೌ ಜುಹೋತಿ [ಇತಿ] ಯತ್ | ಮಧುವನ್ನು ಅಗ್ನಿಯಲ್ಲಿ ಹೋಮ ಮಾಡುವುದೆಂಬುದು ಯಾವುದುಂಟೋ |
| ತತ್ ಯಜಮಾನಃ ಆತ್ಮಾನಮ್ ಏವ ಅಗ್ನೌ | ಅದು ಯಜಮಾನನು ತನ್ನನ್ನೇ ಅಗ್ನಿಯಲ್ಲಿ |

---

ಬಹುರೂಪವಾದ ಹವಿರ್ದ್ರವ್ಯಗಳು ಹಸು, ಎಮ್ಮೆ, ಆಡು ಮುಂತಾದ ಬಹುರೂಪ ಪಶುಗಳ ಪ್ರಾಪ್ತಿಗೆ ಕಾರಣವಾಗುತ್ತವೆ. ಪ್ರಜಾಪತಿಯು ಯಾಗದೇವತೆ. ಆತನೇ ಪಶುಗಳನ್ನು ಸೃಷ್ಟಿಸತಕ್ಕವನು. ಆತನ ಅನುಗ್ರಹದಿಂದಲೇ ಯಜಮಾನನು ಪಶು ಸಂಪತ್ತಿಯನ್ನು ಪಡೆಯುತ್ತಾನೆ.

ಪ್ರ ದಧಾತಿ ಪಂಕ್ತ್ಯಾ ಯಾಜ್ಯಾನುವಾಕ್ಯೇ ಭವತಃ ಪಾಂಕ್ತಃ

ಪುರುಷಃ ಪಾಂಕ್ತಾಃ ಪಶವ

---

ಪ್ರೇತಿ । ದಧಾತಿ । **ಪಂಕ್ತ್ಯಾ** । ಯಾಜ್ಯಾನುವಾಕ್ಯೇ ಇತಿ ಯಾಜ್ಯಾ–ಅನುವಾಕ್ಯೇ । ಭವತಃ । ಪಾಂಕ್ತಃ । ಪುರುಷಃ । ಪಾಂಕ್ತಾಃ । ಪಶವಃ ।

---

**ಪ್ರದಧಾತಿ** — ಹಾಕಿದಂತಾಗುತ್ತದೆ.

**ಯಾಜ್ಯಾನುವಾಕ್ಯೆಗಳ ಪ್ರಶಂಸೆ**

**ಪಂಕ್ತ್ಯಾ ಯಾಜ್ಯಾನುವಾಕ್ಯೇ ಭವತಃ** — *'**ಋತಂ ನ ಪೂತಪವ್'** *'**ಉಭೇ ಸುಶ್ಚಂದ್ರ'** ಎಂಬ ಪಂಕ್ತಿಛಂದಸ್ಸಿನ ಯಾಜ್ಯಾನುವಾಕ್ಯಗಳು ಈ ಯಾಗದಲ್ಲಿ ವಿಹಿತವಾಗಿವೆ.

**ಪುರುಷಃ ಪಾಂಕ್ತಃ** — ಪುರುಷನೂ ಪಂಕ್ತಿಛಂದಸ್ಸಿಗೆ ಸಂಬಂಧಿಸಿದವನೇ.

**ಪಶವಃ ಪಾಂಕ್ತಾಃ** — ಪಶುಗಳೂ ಪಂಕ್ತಿಛಂದಸ್ಸಿಗೆ ಸಂಬಂಧಿಸಿವೆ.

---

ಪುರುಷನ ಆತ್ಮವು ಜೇನಿನಂತೆ. ಜೇನು ಮರದ ತುದಿಯಲ್ಲಿ ಇರುವುದರಿಂದ ಹೊಂದಲು ಕಷ್ಟಸಾಧ್ಯವಾಗಿದೆ. ಆತ್ಮನೂ ಹಸ್ತಪಾದಾದಿ ವ್ಯತಿರಿಕ್ತನಾಗಿ ಇರುವುದರಿಂದ ಅವನನ್ನು ತಿಳಿಯುವುದೂ ಕಷ್ಟಸಾಧ್ಯ. ಮಧುವನ್ನು ಅಗ್ನಿಯಲ್ಲಿ ಹೋಮ ಮಾಡುವುದರಿಂದ ಯಜಮಾನನು ತನ್ನನ್ನೇ ಅಗ್ನಿಯಲ್ಲಿ ಹಾಕಿದಂತಾಗುತ್ತದೆ. ಮಧುಹೋಮದಿಂದ ಯಜಮಾನನು ತನ್ನನ್ನೇ ಅಗ್ನಿಯಲ್ಲಿ ಸಮರ್ಪಿಸಿದಂತಾಯಿತು. ಪ್ರಾಜಾಪತ್ಯಯಾಗದಿಂದ ಅಗ್ನಿಯನ್ನು ತೃಪ್ತಿಪಡಿಸಿದಂತಾಯಿತು.

---

* ತೈ.ಸಂ. 2.2.12

ಆತ್ಮಾನಮೇವ ಮೃತ್ಯೋರ್ನಿಷ್ಕ್ರೀಯ

ಪಶೂನವರುಂಧೇ ||೧೪-2||

ಇಂದ್ರಿಯೇಽಸ್ಮಿನ್ಥ್ಸುವ್ಯಾ ಏತಾಮಿಂದ್ರಃ ಸ್ತ್ಯಾತೃಸ್ತ್ವ ಸೋವೋ

ಬಹುರೂಪಾ ಹಿ ಪಶವ ಏಕಚತ್ವಾರಿಗ್ಂಶಚ್ಚ ||

---

ಆತ್ಮಾನಮ್ । ಏವ । ಮೃತ್ಯೋಃ । ನಿಷ್ಕ್ರೀಯೇತಿ ನಿಃ-ಕ್ರೀಯ । ಪಶೂನ್ । ಅವೇತಿ ।

ರುಂಧೇ ||2||

---

| | |
|---|---|
| ಆತ್ಮಾನಮ್ ಏವ ನಿಷ್ಕ್ರೀಯ ಮೃತ್ಯೋಃ ಪಶೂನ್ ಅವರುಂಧೇ | ಯಜಮಾನನು ತನ್ನನ್ನೇ ಮಧುಹೋಮ ದಿಂದ ಅಗ್ನಿಗೆ ಸಮರ್ಪಿಸಿ ಪಶುಗಳನ್ನು ಪಡೆಯುತ್ತಾನೆ. |

---

ಪಂಕ್ತಿ ಛಂದಸ್ಸಿನ ಯಾಜ್ಯಾನುವಾಕ್ಯೆಗಳಿಂದ ಮೃತ್ಯುರೂಪನಾದ ಅಗ್ನಿಯಿಂದ ತನ್ನನ್ನು ಪ್ರತಿಯಾಗಿ ಪಡೆದು ಪಶುಸಂಪತ್ತಿಯನ್ನು ಯಜಮಾನನು ಪಡೆಯುತ್ತಾನೆ.

* * *

# ದ್ವಿತೀಯಾನುವಾಕವಿಷಯಸಂಗ್ರಹ

**ಮೃತ್ಯೋರ್ಭೀತಸ್ಯಾಯುರರ್ಥೀ ನಿರ್ವಪೇಚ್ಛತಕೃಷ್ಣಲಾಮ್ ।**
**ಬ್ರಹ್ಮವರ್ಚಸಕಾಮೋ ಯಃ ಸ ಸೌರ್ಯಂ ಚರುಮಾಚರೇತ್ ॥**
**ಹಿರಣ್ಯಕಾಮಃ ಕುರ್ವೀತ ಹ್ಯಾಗ್ನೇಯಾದಿ ಹವಿಸ್ತ್ರಯಮ್ ।**
**ಹಿರಣ್ಯಲಾಭೇ ತನ್ನಾಶೇಽಪ್ಯೇತದೇವ ಸಮಾಚರೇತ್ ।**
**ಸೋಮವಾಮೀ ತು ಸೋಮೇಂದ್ರಂ ಚರುಂ ಶ್ಯಾಮಾಕಮಾಚರೇತ್ ॥**
**ಪಶ್ವರ್ಥೀ ಹ್ಯಗ್ನಯೇ ದಾತ್ರ ಇತ್ಯಾದಿತ್ರಯಮಾಚರೇತ್ ।**
**ಅನುವಾಕೇ ದ್ವಿತೀಯೇಽರ್ಥಾ ಏತಾವಂತ ಉದೀರಿತಾಃ ॥**
**ಹಿರಣ್ಯಗರ್ಭ ಇತ್ಯಾತ್ರಾಕ್ಷರಾರ್ಥಃ ಸ್ಪಷ್ಟಮೀರಿತಃ ॥**

ಮೃತ್ಯುವಿನಿಂದ ಭಯಪಡುವವನಿಗೆ, ಬ್ರಹ್ಮವರ್ಚಸವನ್ನು ಬಯಸುವವನಿಗೆ, ಚಿನ್ನವನ್ನು ಇಚ್ಛಿಸುವವನಿಗೆ, ಹಿರಣ್ಯವನ್ನು ಪಡೆಯುವವನಿಗೆ, ಚಿನ್ನವನ್ನು ಕಳೆದುಕೊಂಡವನಿಗೆ, ಸೋಮರಸವನ್ನು ವಮನ ಮಾಡಿದವನಿಗೆ, ಪಶುಕಾಮನಾದವನಿಗೆ — ಈ ಅನುವಾಕದಲ್ಲಿ ಇಷ್ಟಿಗಳು ಹೇಳಲ್ಪಟ್ಟಿವೆ.

**'ಹಿರಣ್ಯಗರ್ಭ'** ಅನುವಾಕದಲ್ಲಿ ಮಂತ್ರಾರ್ಥವು ಹೇಳಲ್ಪಟ್ಟಿದೆ.

* * *

## ॥ ತೃತೀಯೋऽನುವಾಕಃ ॥

ದೇವಾ ವೈ ಸತ್ರಮಾಸತರ್ಧಿಪರಿಮಿತಂ ಯಶಸ್ಕಾಮಾ

ಸ್ತೇಷಾಗ್ಂ ಸೋಮಗ್ಂ ರಾಜಾನಂ ಯಶ

ಆರ್ಛತ್ಸ ಗಿರಿಮುದೈತ್ತಮಗ್ನಿರನೂದೈತ್ತಾವಗ್ನೀಷೋಮೌ

---

ದೇವಾಃ । ವೈ । ಸತ್ರಮ್ । ಆಸತ । ಋದ್ಧಿಪರಿಮಿತಮಿತ್ಯೃದ್ಧಿ–ಪರಿಮಿತಮ್ । ಯಶಸ್ಕಾಮಾ ಇತಿ ಯಶಃ–ಕಾಮಾಃ । ತೇಷಾಮ್ । ಸೋಮಮ್ । ರಾಜಾನಮ್ । ಯಶಃ । ಆರ್ಛತ್ । ಸಃ । ಗಿರಿಮ್ । ಉದಿತಿ । ಐತ್ । ತಮ್ । ಅಗ್ನಿಃ । ಅನು । ಉದಿತಿ । ಐತ್ । ತೌ । ಅಗ್ನೀಷೋಮಾವಿತ್ಯಗ್ನೀ–ಸೋಮೌ ।

---

**ಮೂರನೆಯ ಅನುವಾಕದಲ್ಲಿ ಯಜ್ಞವಿಭ್ರಷ್ಟೇಷ್ಟಿ ಮೊದಲಾದ ಇಷ್ಟಿಗಳು ಹೇಳಲ್ಪಡುತ್ತವೆ. ಯಜ್ಞವಿಭ್ರಷ್ಟೇಷ್ಟಿಯ ವಿಧಾನಕ್ಕಾಗಿ ಉಪಾಖ್ಯಾನವನ್ನು ಆರಂಭಿಸಲಾಗಿದೆ.**

### ಯಜ್ಞವಿಭ್ರಷ್ಟೇಷ್ಟಿವಿಧಿಗಾಗಿ ಉಪಾಖ್ಯಾನ

| | |
|---|---|
| ಯಶಸ್ಕಾಮಾಃ ದೇವಾಃ ಋದ್ಧಿಪರಿಮಿತಮ್ ಸತ್ರಮ್ ಆಸತ | ಯಶಸ್ಸನ್ನು ಬಯಸಿದ ದೇವತೆಗಳು ಸಮೃದ್ಧಿ ಫಲವುಳ್ಳ ಸತ್ರಯಾಗವನ್ನು ಮಾಡುತ್ತಿದ್ದರು. |
| ತೇಷಾಮ್ ಸೋಮಮ್ ರಾಜಾನಮ್ ಯಶಃ ಆರ್ಛತ್ | ಆ ದೇವತೆಗಳ ಪೈಕಿ ರಾಜನಾದ ಸೋಮನನ್ನು ಯಶಸ್ಸು ಹೊಂದಿತು. |
| ಸಃ ಗಿರಿಮ್ ಉದೈತ್ | ಆ ಸೋಮನು ಯಶಸ್ಸಿನೊಡನೆ ಒಂದು ಪರ್ವತವನ್ನು ಹತ್ತಿದನು. |
| ತಮ್ ಅಗ್ನಿಃ ಅನು ಉತ್ ಐತ್ ತೌ ಅಗ್ನೀಷೋಮೌ | ಆ ಸೋಮನನ್ನು ಅನುಸರಿಸಿ, ಅಗ್ನಿಯೂ ಬೆಟ್ಟವನ್ನು ಏರಿದನು. ಆ ಸೋಮ–ಅಗ್ನಿ ಇಬ್ಬರೂ ಐಕಮತ್ಯವನ್ನು |

ಸಮಭವತಾಂ ತಾವಿಂದ್ರೋ ಯಜ್ಞ ವಿಭ್ರಷ್ಟೋಽನು

ಪರ್ಯೈತಾವಬ್ರವೀದ್ಯಾಜಯತಂ ಮೇತಿ

---

ಸಮಿತಿ । ಅಭವತಾಮ್ । ತೌ । ಇಂದ್ರಃ । ಯಜ್ಞವಿಭ್ರಷ್ಟ ಇತಿ ಯಜ್ಞ–ವಿಭ್ರಷ್ಟಃ ।

ಅನು । ಪರೇತಿ । ಐತ್ । ತೌ । ಅಬ್ರವೀತ್ । ಯಾಜಯತಮ್ । ಮಾ । ಇತಿ ।

---

| | |
|---|---|
| ಸಮಭವತಾಮ್ | ಹೊಂದಿ ಅಗ್ನೀಷೋಮದೇವತೆಗಳಾದರು. |
| ಯಜ್ಞ ವಿಭ್ರಷ್ಟಃ ಇಂದ್ರಃ<br>ತೌ ಅನು ಪರಾ ಐತ್ | ಯಜ್ಞದಿಂದ ಭ್ರಷ್ಟನಾದ/ಯಜ್ಞಫಲರಹಿತನಾದ ಇಂದ್ರನು ಬಹಳ ಕಾಲದ ನಂತರ ಅವರಿಬ್ಬರನ್ನು ಅನುಸರಿಸಿದನು. |
| ಮಾ ಯಾಜಯತಮ್ ಇತಿ ತೌ ಅಬ್ರವೀತ್ | 'ನನಗೂ ಯಾಗವನ್ನು ಮಾಡಿಸಿ' ಎಂದು ಇಂದ್ರನು ಅಗ್ನೀಷೋಮರನ್ನು ಕೇಳಿದನು. |

---

ದೇವತೆಗಳು ಸಮೃದ್ಧಿಯುಕ್ತವಾದ ಯಶಸ್ಸನ್ನು ಅಪೇಕ್ಷಿಸಿ *ಸತ್ರಯಾಗವನ್ನು ಮಾಡಿದರು. ರಾಜನಾದ ಸೋಮನಿಗೆ ಯಾಗಫಲವಾದ ಯಶಸ್ಸು ಮೊದಲು ಪ್ರಾಪ್ತವಾಯಿತು. ಆ ಸೋಮನು ಯಶಸ್ಸನ್ನು ತೆಗೆದುಕೊಂಡು ಒಂದು ದುರ್ಗಮವಾದ ಬೆಟ್ಟವನ್ನು ಏರಿದನು. ಸೋಮನನ್ನು ಅನುಸರಿಸಿ ಅಗ್ನಿಯೂ ಆ ಬೆಟ್ಟವನ್ನು ಹತ್ತಿದನು. ಬಳಿಕ ಅವರಿಬ್ಬರೂ ಐಕಮತ್ಯವನ್ನು ಹೊಂದಿ ಅಗ್ನೀಷೋಮರಾದರು. ಅನಂತರ ಬಹುಕಾಲ ಕಳೆದ ಮೇಲೆ ಯಾಗಫಲರಹಿತನಾದ ಇಂದ್ರನೂ ಅಗ್ನೀಷೋಮರನ್ನು ಅನುಸರಿಸಿ ಬೆಟ್ಟವನ್ನು ಹತ್ತಿದನು. ಇಂದ್ರನು ತನಗೂ ಯಾಗ ಮಾಡಿಸಬೇಕೆಂದು ಕೇಳಿಕೊಂಡನು. ಅಗ್ನೀಷೋಮರು ಅಗ್ನಿದೇವತಾಕವಾದ ಅಷ್ಟಾಕಪಾಲಪುರೋಡಾಶ

---

* ಹನ್ನೆರಡು ದಿನಗಳೂ, ಅದಕ್ಕಿಂತಲೂ ಅಧಿಕಕಾಲವೂ ಮಾಡುವ, ಯಜಮಾನರೇ ಋತ್ವಿಜರಾಗಿರುವ ಸೋಮಯಾಗ.

ತಸ್ಮಾ ಏತಾಮಿಷ್ಟಿಂ ನಿರವಪತಾಮಾಗ್ನೇಯಮಷ್ಟಾಕಪಾಲ

ಮೈಂದ್ರಮೇಕಾದಶಕಪಾಲಗ್ಂ ಸೌಮ್ಯಂ ಚರುಂ

ತಯೈವಾಸ್ಮಿನ್ತೇಜ ಇಂದ್ರಿಯಂ [ತೇಜಃ (೧) ಇಂದ್ರಿಯಂ]

ಬ್ರಹ್ಮವರ್ಚಸಮಧತ್ತಾಂ

---

ತಸ್ಮೈ । ಏತಾಮ್ । ಇಷ್ಟಿಮ್ । ನಿರಿತಿ । ಅವಪತಾಮ್ । ಆಗ್ನೇಯಮ್ । ಅಷ್ಟಾಕಪಾಲ ಮಿತ್ಯಷ್ಟಾ–ಕಪಾಲಮ್ । ಐಂದ್ರಮ್ । ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್ । ಸೌಮ್ಯಮ್ । ಚರುಮ್ । ತಯಾ । ಏವ । ಅಸ್ಮಿನ್ನ್ । ತೇಜಃ । ಇಂದ್ರಿಯಮ್ । ಬ್ರಹ್ಮ ವರ್ಚಸಮಿತಿ ಬ್ರಹ್ಮ–ವರ್ಚಸಮ್ । ಅಧತ್ತಾಮ್ ।

---

| | |
|---|---|
| ತಸ್ಮೈ ಏತಾಮ್ ಇಷ್ಟಿಮ್ ನಿರವಪತಾಮ್ | ಅಗ್ನೀಷೋಮರು ಇಂದ್ರನಿಗೆ ಈ ಯಾಗವನ್ನು ಮಾಡಿಸಿದರು. |
| ಆಗ್ನೇಯಮ್ ಅಷ್ಟಾಕಪಾಲಮ್ ಐಂದ್ರಮ್ ಏಕಾದಶಕಪಾಲಮ್ ಸೌಮ್ಯಂ ಚರುಮ್ | ಅಗ್ನಿದೇವತಾಕವಾದ ಅಷ್ಟಾಕಪಾಲ ಪುರೋಡಾಶದ್ರವ್ಯವುಳ್ಳ ಒಂದು ಯಾಗ, ಇಂದ್ರದೇವತಾಕವಾದ ಏಕಾದಶಕಪಾಲ ಪುರೋಡಾಶದ್ರವ್ಯವುಳ್ಳ ಒಂದು ಯಾಗ; ಸೋಮದೇವತಾಕವಾದ ಚರುಯಾಗ; [ಇಂತಹ ಯಾಗವನ್ನು ಮಾಡಿಸಿದರು]. |
| ತಯಾ ಏವ ಅಸ್ಮಿನ್ ತೇಜಃ ಇಂದ್ರಿಯಮ್ ಬ್ರಹ್ಮವರ್ಚಸಮ್ ಅಧತ್ತಾಮ್ | ಆ ಯಾಗದಿಂದಲೇ ಈ ಇಂದ್ರನಲ್ಲಿ ತೇಜಸ್ಸನ್ನೂ, ಇಂದ್ರಿಯಸಾಮರ್ಥ್ಯವನ್ನೂ ಬ್ರಹ್ಮವರ್ಚಸವನ್ನೂ ನೆಲೆಗೊಳಿಸಿದರು. |

---

ಯಾಗ, ಇಂದ್ರದೇವತಾಕವಾದ ಏಕಾದಶಕಪಾಲಪುರೋಡಾಶಯಾಗ, ಸೋಮದೇವತಾಕ ವಾದ ಚರುಯಾಗ – ಹೀಗೆ ಮೂರು ಹವಿಸ್ಸುಗಳುಳ್ಳ ಇಷ್ಟಿಯನ್ನು ಇಂದ್ರನಿಂದ ಮಾಡಿಸಿದರು. ಆಗ್ನೇಯಯಾಗದಿಂದ ತೇಜಸ್ಸನ್ನೂ, ಐಂದ್ರಯಾಗದಿಂದ ಇಂದ್ರಿಯ

ಯೋ ಯಜ್ಞವಿಭ್ರಷ್ಟಃ ಸ್ಯಾತ್ತಸ್ಮಾ ಏತಾಮಿಷ್ಟಿಂ

ನಿರ್ವಪೇದಾಗ್ನೇಯಮಷ್ಟಾಕಪಾಲಮೈಂದ್ರಮೇಕಾದಶ

ಕಪಾಲಗ್ಂ ಸೌಮ್ಯಂ ಚರುಂ

---

ಯಃ । ಯಜ್ಞವಿಭ್ರಷ್ಟ ಇತಿ ಯಜ್ಞ-ವಿಭ್ರಷ್ಟಃ । ಸ್ಯಾತ್ । ತಸ್ಮೈ । ಏತಾಮ್ । ಇಷ್ಟಿಮ್ । ನಿರಿತಿ । ವಪೇತ್ । ಆಗ್ನೇಯಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ಐಂದ್ರಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ಸೌಮ್ಯಮ್ । ಚರುಮ್ ।

---

**ಇಷ್ಟಿವಿಧಾನ; ಪ್ರಶಂಸೆ**

| | |
|---|---|
| ಯಃ ಯಜ್ಞವಿಭ್ರಷ್ಟಃ ಸ್ಯಾತ್, ತಸ್ಮೈ ಏತಾಮ್ ಇಷ್ಟಿಮ್ ನಿರ್ವಪೇತ್ | ಯಾವನು ಯಜ್ಞಹೀನನೋ ಅವನಿಗಾಗಿ ಈ ಮೂರು ಹವಿಸ್ಸುಗಳ ಯಾಗವನ್ನು ಮಾಡಿಸಬೇಕು. |
| ಆಗ್ನೇಯಮ್ ಅಷ್ಟಾಕಪಾಲಮ್ ಐಂದ್ರಮ್ ಏಕಾದಶಕಪಾಲಮ್ ಸೌಮ್ಯಮ್ ಚರುಮ್ [ನಿರ್ವಪೇತ್] | ಅಗ್ನಿದೇವತಾಕವಾದ ಅಷ್ಟಾಕಪಾಲ ಪುರೋಡಾಶಯಾಗ, ಇಂದ್ರದೇವತೆಗಾಗಿ ಏಕಾದಶಕಪಾಲಪುರೋಡಾಶಯಾಗ, ಸೋಮದೇವತೆಗೆ ಚರುಯಾಗ – ಈ ಮೂರನ್ನೂ ಅನುಷ್ಠಿಸಬೇಕು. |

---

ಸಾಮರ್ಥ್ಯವನ್ನೂ , ಸೌಮ್ಯಚರುಯಾಗದಿಂದ ಇಂದ್ರನಲ್ಲಿ ಬ್ರಹ್ಮವರ್ಚಸವನ್ನೂ ಉಂಟುಮಾಡಿದರು.

*ಯಜ್ಞವಿಭ್ರಷ್ಟನಾದವನು ಆಗ್ನೇಯವಾಗಿ ಅಷ್ಟಾಕಪಾಲಪುರೋಡಾಶ ಯಾಗವನ್ನೂ , ಇಂದ್ರನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನೂ , ಸೋಮದೇವನಿಗಾಗಿ ಚರುಯಾಗವನ್ನೂ ಮಾಡಬೇಕು.

---

* ಇಷ್ಟಿ, ಪಶು, ಸೋಮಯಾಗಗಳನ್ನು ಸ್ವಕಾಲದಲ್ಲಿ ಮಾಡದೇ ಇರುವವನು.

ಯದಾಗ್ನೇಯೋ ಭವತಿ ತೇಜ ಏವಾಸ್ಮಿನ್ತೇನ ದಧಾತಿ

ಯದ್ಯೆಂದ್ರೋ ಭವತೀಂದ್ರಿಯಮೇವಾಸ್ಮಿನ್ತೇನ ದಧಾತಿ

ಯತ್ಸೌಮ್ಯೋ ಬ್ರಹ್ಮವರ್ಚಸಂ

---

ಯತ್ । ಆಗ್ನೇಯಃ । ಭವತಿ । ತೇಜಃ । ಏವ । ಅಸ್ಮಿನ್ನ್ । ತೇನ । ದಧಾತಿ । ಯತ್ । ಐಂದ್ರಃ । ಭವತಿ । ಇಂದ್ರಿಯಮ್ । ಏವ । ಅಸ್ಮಿನ್ನ್ । ತೇನ । ದಧಾತಿ । ಯತ್ । ಸೌಮ್ಯಃ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ ।

---

| | |
|---|---|
| ಯತ್ ಆಗ್ನೇಯಃ ಭವತಿ ತೇನ ಅಸ್ಮಿನ್ ತೇಜಃ ಏವ ದಧಾತಿ | ಆಗ್ನೇಯಯಾಗವೆಂಬುದು ಯಾವುದುಂಟೋ, ಅದರಿಂದ ಈ ಯಜಮಾನನಲ್ಲಿ ತೇಜಸ್ಸನ್ನು ಉಂಟುಮಾಡಿದಂತಾಗುತ್ತದೆ. |
| ಯತ್ ಐಂದ್ರಃ ಭವತಿ ತೇನ ಅಸ್ಮಿನ್ ಇಂದ್ರಿಯಮ್ ಏವ ದಧಾತಿ | ಐಂದ್ರಯಾಗವೆಂಬುದು ಯಾವುದುಂಟೋ ಅದರಿಂದ ಈ ಯಜಮಾನನಲ್ಲಿ ಇಂದ್ರಿಯ ಸಾಮರ್ಥ್ಯವನ್ನು ನೆಲೆಗೊಳಿಸಿದಂತಾಗುತ್ತದೆ. |
| ಯತ್ ಸೌಮ್ಯಃ ತೇನ ಬ್ರಹ್ಮವರ್ಚಸವ್ | ಸೌಮ್ಯಯಾಗದಿಂದ ಬ್ರಹ್ಮವರ್ಚಸವನ್ನು ಈ ಯಜಮಾನನಲ್ಲಿ ಉಂಟುಮಾಡಿದಂತಾಗುತ್ತದೆ. |

---

ಆಗ್ನೇಯಯಾಗದಿಂದ ತೇಜಸ್ಸನ್ನೂ, ಐಂದ್ರಯಾಗದಿಂದ ಇಂದ್ರಿಯಶಕ್ತಿಯನ್ನೂ ಸೌಮ್ಯ ಯಾಗದಿಂದ *ಬ್ರಹ್ಮವರ್ಚಸವನ್ನೂ ಯಜಮಾನನು ಪಡೆಯುತ್ತಾನೆ. ಯಾಗಗಳನ್ನು ಸ್ವಕಾಲದಲ್ಲಿ ಮಾಡದಿರುವ ದೋಷದ ಪರಿಹಾರವೂ ಆಗುತ್ತದೆ.

---

* ಶ್ರುತಾಧ್ಯಯನಸಂಪತ್ತಿ

ತೇನಾऽऽಗ್ನೇಯಸ್ಯ ಚ ಸೌಮ್ಯಸ್ಯ ಚೈಂದ್ರೇ ಸಮಾಶ್ಲೇಷ

ಯೇತ್ತೇಜಶ್ಚೈವಾಸ್ಮಿನ್ಬ್ರಹ್ಮವರ್ಚಸಂ ಚ ಸಮೀಚೀ

[ಸಮೀಚೀ (೨) ದಧಾತ್ಯಗ್ನೀಷೋಮೀಯ]

---

ತೇನ । ಆಗ್ನೇಯಸ್ಯ । ಚ । ಸೌಮ್ಯಸ್ಯ । ಚ । ಐಂದ್ರೇ । ಸಮಾಶ್ಲೇಷಯೇದಿತಿ ಸಮ್–ಆಶ್ಲೇಷಯೇತ್ । ತೇಜಃ । ಚ । ಏವ । ಅಸ್ಮಿನ್ನ್ । ಬ್ರಹ್ಮವರ್ಚಸಮಿತಿ ಬ್ರಹ್ಮ–ವರ್ಚಸಮ್ । ಚ । ಸಮೀಚೀ ಇತಿ ।

---

**ಈ ಯಾಗದಲ್ಲಿನ ವಿಶೇಷವಿಧಿ; ಪ್ರಶಂಸೆ**

| | |
|---|---|
| ಆಗ್ನೇಯಸ್ಯ ಚ ಸೌಮ್ಯಸ್ಯ ಚ ಐಂದ್ರೇ ಸಮಾಶ್ಲೇಷಯೇತ್ | ಆಗ್ನೇಯಪುರೋಡಾಶವನ್ನೂ, ಸೌಮ್ಯ ಚರುಯಾಗವನ್ನೂ ಐಂದ್ರಪುರೋಡಾಶ ದೊಡನೆಯೇ ಪಾಕ ಮಾಡಬೇಕು/ ಆಗ್ನೇಯ–ಸೌಮ್ಯಗಳ ಲೇಪವನ್ನು ಐಂದ್ರ ಹವಿಸ್ಸಿನ ಲೇಪದೊಡನೆ ಸೇರಿಸಬೇಕು. |
| ಅಸ್ಮಿನ್ ತೇಜಃ ಚ ಬ್ರಹ್ಮವರ್ಚಸಮ್ ಚ ಸಮೀಚೀ | ಇದರಿಂದ ಯಜಮಾನನಲ್ಲಿ ತೇಜಸ್ಸನ್ನೂ ಬ್ರಹ್ಮವರ್ಚಸವನ್ನೂ ಚೆನ್ನಾಗಿ ಸೇರಿಸಿ |

---

ಆಗ್ನೇಯಹವಿಸ್ಸನ್ನೂ, ಸೌಮ್ಯಹವಿಸ್ಸನ್ನೂ ಐಂದ್ರಹವಿಸ್ಸಿನೊಡನೆಯೇ ಪಾಕ ಮಾಡಬೇಕು ಅಥವಾ ಅವುಗಳ ಲೇಪವನ್ನು ಐಂದ್ರಹವಿಸ್ಸಿನ ಲೇಪದೊಡನೆ ಸೇರಿಸ ಬೇಕು. ಇದರಿಂದ ಅಧ್ವರ್ಯುವು ಯಜಮಾನನಲ್ಲಿ ತೇಜಸ್ಸು ಅಂದರೆ ಆಜ್ಞಾಶಕ್ತಿಯನ್ನೂ, ಬ್ರಹ್ಮವರ್ಚಸವನ್ನೂ ಇಂದ್ರಿಯಸಾಮರ್ಥ್ಯವನ್ನೂ ಚೆನ್ನಾಗಿ ಸೇರಿಸಿ ಉಂಟುಮಾಡಿ ದಂತಾಗುತ್ತದೆ.

ದಧಾತ್ಯಗ್ನೀಷೋಮೀಯಮೇಕಾದಶಕಪಾಲಂ ನಿರ್ವಪೇದ್ಯಂ
ಕಾಮೋ ನೋಪನಮೇದಾಗ್ನೇಯೋ ವೈ ಬ್ರಾಹ್ಮಣಃ ಸ
ಸೋಮಂ ಪಿಬತಿ

---

ದಧಾತಿ । ಅಗ್ನೀಷೋಮೀಯಮಿತ್ಯಗ್ನೀ–ಸೋಮೀಯಮ್ । ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್ । ನಿರಿತಿ । ವಪೇತ್ । ಯಮ್ । ಕಾಮಃ । ನ । ಉಪನಮೇದಿತ್ಯುಪ–ನಮೇತ್ । ಆಗ್ನೇಯಃ । ವೈ । ಬ್ರಾಹ್ಮಣಃ । ಸಃ । ಸೋಮಮ್ । ಪಿಬತಿ ।

---

**ಕಾಮನೆಗಳ ಪ್ರಾಪ್ತಿಗಾಗಿ ಇಷ್ಟಿವಿಧಾನ; ಪ್ರಶಂಸೆ**

| | |
|---|---|
| ದಧಾತಿ ಏವ | ಉಂಟುಮಾಡಿದಂತಾಗುತ್ತದೆ. |
| ಯಮ್ ಕಾಮಃ ನ ಉಪನಮೇತ್ | ಯಾವ ಯಜಮಾನನಿಗೆ ಬಯಸಿದ ಕಾಮನೆಗಳು ಕೈಗೂಡುವುದಿಲ್ಲವೋ [ಅವನು] |
| ಅಗ್ನೀಷೋಮೀಯಮ್ ಏಕಾದಶಕಪಾಲಮ್ ನಿರ್ವಪೇತ್ | ಅಗ್ನೀಷೋಮದೇವತೆಗಳಿಗಾಗಿ ಏಕಾದಶಕಪಾಲಪುರೋಡಾಶದ್ರವ್ಯದ ಯಾಗವನ್ನು ಮಾಡಬೇಕು. |
| ಬ್ರಾಹ್ಮಣಃ ಆಗ್ನೇಯಃ ವೈ | ಬ್ರಾಹ್ಮಣನು ಅಗ್ನಿದೇವತಾಸಂಬಂಧಿಯಷ್ಟೆ. |
| ಸಃ ಸೋಮಮ್ ಪಿಬತಿ | ಅವನು ಸೋಮಪಾನವನ್ನು ಮಾಡುತ್ತಾನೆ. [ಇದರಿಂದ ಸೋಮಸಂಬಂಧಿಯೂ ಆಗುತ್ತಾನೆ]. |

---

ಯಾವ ಯಜಮಾನನಿಗೆ ಕಾಮನೆಗಳು ಲಭಿಸುವುದಿಲ್ಲವೋ ಆತನು ಅಗ್ನೀಷೋಮದೇವತೆಗಳಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು.

ಬ್ರಾಹ್ಮಣನೂ ಅಗ್ನಿಯೂ *ಬ್ರಹ್ಮನ ಮುಖದಿಂದ ಜನಿಸಿದವರಾದುದರಿಂದ ಬ್ರಾಹ್ಮಣನು ಅಗ್ನಿಸಂಬಂಧಿಯಾಗಿರುತ್ತಾನೆ. ಅವನು ಸೋಮಪಾನವನ್ನು ಮಾಡುವುದರಿಂದ ಸೋಮಸಂಬಂಧಿಯೂ ಹೌದು. ಈ ಯಾಗದಿಂದ ಯಜಮಾನನು ತನ್ನ ದೇವತೆಗೆ

---

* ತೈ. ಸಂ. 7.1.1.

ಸ್ವಾಮೇವ ದೇವತಾಗ್ಂ ಸ್ವೇನ ಭಾಗಧೇಯೇನೋಪ

ಧಾವತಿ ಸೈವೈನಂ ಕಾಮೇನ ಸಮರ್ಧಯತ್ಯುಪೈನಂ

ಕಾಮೋ ನಮತ್ಯಗ್ನೀಷೋಮೀಯಮಷ್ಟಾಕಪಾಲಂ

ನಿರ್ವಪೇದ್ಬ್ರಹ್ಮವರ್ಚಸಕಾಮೋಽಗ್ನೀಷೋಮಾವೇವ

---

ಸ್ವಾಮ್ । ಏವ । ದೇವತಾಮ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಾ । ಏವ । ಏನಮ್ । ಕಾಮೇನ । ಸಮಿತಿ । ಅರ್ಧಯತಿ । ಉಪೇತಿ । ಏನಮ್ । ಕಾಮಃ । ನಮತಿ । ಅಗ್ನೀಷೋಮೀಯಮಿತ್ಯಗ್ನೀ–ಸೋಮೀಯಮ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ । ನಿರಿತಿ । ವಪೇತ್ । ಬ್ರಹ್ಮವರ್ಚಸಕಾಮ ಇತಿ ಬ್ರಹ್ಮವರ್ಚಸ–ಕಾಮಃ । ಅಗ್ನೀಷೋಮಾವಿತ್ಯಗ್ನೀ–ಸೋಮೌ । ಏವ ।

---

| | |
|---|---|
| ಸ್ವಾಮ್ ದೇವತಾಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದಿಂದ ಯಜಮಾನನು ತನ್ನ ದೇವತೆಗೆ ತಕ್ಕ ಹವಿರ್ಭಾಗವನ್ನಿತ್ತು ಸೇವಿಸಿದವನಾಗುತ್ತಾನೆ. |
| ಸಾ ಏವ ಏನಮ್ ಕಾಮೇನ ಸಮರ್ಧಯತಿ | ಆ ದೇವತೆಯೇ ಯಜಮಾನನ ಕಾಮನೆಯನ್ನು ಪೂರ್ಣಗೊಳಿಸುತ್ತದೆ. |
| ಏನಮ್ ಕಾಮಃ ಉಪನಮತಿ | ಈ ಯಜಮಾನನನ್ನು ಕಾಮನೆಯು ಹೊಂದುತ್ತದೆ/ಕಾಮನೆಯು ಪೂರ್ಣವಾಗುತ್ತದೆ. |

**ಬ್ರಹ್ಮವರ್ಚಸಕಾಮನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| ಬ್ರಹ್ಮವರ್ಚಸಕಾಮಃ | ಶ್ರುತಾಧ್ಯಯನಸಂಪತ್ತಿಯನ್ನು ಬಯಸುವವನು |
| ಅಗ್ನೀಷೋಮೀಯಮ್ ಅಷ್ಟಾಕಪಾಲಮ್ ನಿರ್ವಪೇತ್ | ಅಗ್ನೀಷೋಮದೇವತೆಗಳಿಗಾಗಿ ಸಾಮೆ ಧಾನ್ಯದ ಅಷ್ಟಾಕಪಾಲಪುರೋಡಾಶದ ಯಾಗವನ್ನು ಅನುಷ್ಠಿಸಬೇಕು. ಯಜಮಾನನು ಈ ಯಾಗದಿಂದ |
| ಅಗ್ನೀಷೋಮೌ ಏವ | |

---

ತಕ್ಕ ಭಾಗವನ್ನಿತ್ತು ಸೇವಿಸಿದವನಾಗುತ್ತಾನೆ. ಆ ದೇವತೆಯೇ ಈ ಯಜಮಾನನ ಕಾಮನೆಗಳನ್ನು ಪೂರ್ಣಗೊಳಿಸುತ್ತದೆ. ಯಜಮಾನನ ಇಷ್ಟಾರ್ಥವು ಕೈಗೂಡುತ್ತದೆ.

ಸ್ವೇನ ಭಾಗಧೇಯೇನೋಪಧಾವತಿ ತಾವೇವಾಸ್ಮಿನ್ಬ್ರಹ್ಮ

ವರ್ಚಸಂ ಧತ್ತೋ ಬ್ರಹ್ಮವರ್ಚಸ್ಯೇವ [(೩) ಭವತಿ]

ಭವತಿ ಯದಷ್ಟಾಕಪಾಲಸ್ತೇನಾऽऽಗ್ನೇಯೋ

---

ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ತೌ । ಏವ । ಅಸ್ಮಿನ್ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ಧತ್ತಃ । ಬ್ರಹ್ಮವರ್ಚಸೀತಿ ಬ್ರಹ್ಮ-ವರ್ಚಸೀ । ಏವ । ಭವತಿ । ಯತ್ । ಅಷ್ಟಾಕಪಾಲ ಇತ್ಯಷ್ಟಾ-ಕಪಾಲಃ । ತೇನ । ಆಗ್ನೇಯಃ ।

---

| | |
|---|---|
| ಸ್ವೇನ ಭಾಗಧೇಯೇನ ಉಪಧಾವತಿ | ಅಗ್ನೀಷೋಮರಿಗೆ ಸಲ್ಲಬೇಕಾದ ಭಾಗವನ್ನು ಸಲ್ಲಿಸಿ ಸೇವಿಸುತ್ತಾನೆ. |
| ತೌ ಅಸ್ಮಿನ್ ಬ್ರಹ್ಮವರ್ಚಸಮ್ ಧತ್ತಃ ಏವ | ಆ ಇಬ್ಬರು ದೇವತೆಗಳೇ ಈ ಯಜಮಾನನಲ್ಲಿ ಬ್ರಹ್ಮವರ್ಚಸವನ್ನುಂಟುಮಾಡುತ್ತಾರೆ. |
| ಬ್ರಹ್ಮವರ್ಚಸೀ ಏವ ಭವತಿ | ಯಜಮಾನನು ಬ್ರಹ್ಮವರ್ಚಸವುಳ್ಳವನೇ ಆಗುತ್ತಾನೆ. |
| ಯತ್ ಅಷ್ಟಾಕಪಾಲಃ ತೇನ ಆಗ್ನೇಯಃ | *ಅಷ್ಟಾಕಪಾಲವಿರುವುದರಿಂದ ಈ ಯಾಗವು ಆಗ್ನೇಯವಾಗಿದೆ. |

---

ಬ್ರಹ್ಮವರ್ಚಸವನ್ನು ಬಯಸುವವನು ಅಗ್ನೀಷೋಮದೇವತೆಗಳಿಗಾಗಿ ಸಾಮೆ ಧಾನ್ಯದ ಅಷ್ಟಾಕಪಾಲಪುರೋಡಾಶಯಾಗವನ್ನು ಅನುಷ್ಠಿಸಬೇಕು. ಈ ಯಾಗದಿಂದ ಯಜಮಾನನು ಅಗ್ನಿ – ಸೋಮ ದೇವತೆಗಳಿಗೆ ಅವರ ಭಾಗವನ್ನಿತ್ತು ತೃಪ್ತಿಪಡಿಸುತ್ತಾನೆ. ಆ ಅಗ್ನೀಷೋಮರು ತೃಪ್ತರಾಗಿ ಈ ಯಜಮಾನನಿಗೆ ಬ್ರಹ್ಮವರ್ಚಸವನ್ನು ಕೊಡುತ್ತಾರೆ. ಯಜಮಾನನು ಬ್ರಹ್ಮವರ್ಚಸಿಯಾಗುತ್ತಾನೆ. ಪುರೋಡಾಶವು ಅಷ್ಟಾಕಪಾಲ

---

* ಅಷ್ಟಾಕ್ಷರಾ ಗಾಯತ್ರೀ ಗಾಯತ್ರೋऽಗ್ನಿಃ ।

ಯಚ್ಛ್ಯಾಮಾಕಸ್ತೇನ ಸೌಮ್ಯಃ ಸಮೃದ್ಧ್ಯೈ ಸೋಮಾಯ ವಾಜಿನೇ ಶ್ಯಾಮಾಕಂ ಚರುಂ ನಿರ್ವಪೇದ್ಯಃ ಕ್ಲೈಬ್ಯಾದ್ಬಿಭೀಯಾದ್ರೇತೋ ಹಿ ವಾ ಏತಸ್ಮಾದ್ವಾಜಿನಮಪಕ್ರಾಮತ್ಯಥೈಷ

---

ಯತ್ । ಶ್ಯಾಮಾಕಃ । ತೇನ । ಸೌಮ್ಯಃ । ಸಮೃಧ್ಯಾ ಇತಿ ಸಮ್–ಋದ್ಧ್ಯೈ । **ಸೋಮಾಯ** । ವಾಜಿನೇ । ಶ್ಯಾಮಾಕಮ್ । ಚರುಮ್ । ನಿರಿತಿ । ವಪೇತ್ । ಯಃ । ಕ್ಲೈಬ್ಯಾತ್ । ಬಿಭೀಯಾತ್ । ರೇತಃ । ಹಿ । ವೈ । ಏತಸ್ಮಾತ್ । ವಾಜಿನಮ್ । ಅಪಕ್ರಾಮತೀತ್ಯಪ–ಕ್ರಾಮತಿ । ಅಥ । ಏಷಃ ।

---

| | |
|---|---|
| **ಯತ್ ಶ್ಯಾಮಾಕಃ ತೇನ ಸೌಮ್ಯಃ ಸಮೃದ್ಧ್ಯೈ** | ಸಾಮೆಯು ಸೋಮರಸದಿಂದ ಹುಟ್ಟಿದುದರಿಂದ ಅದು ಸೌಮ್ಯವಾಗಿದೆ. ಹೀಗಿರುವ ಅಗ್ನೀಷೋಮೀಯವು ಬ್ರಹ್ಮವರ್ಚಸದ ಸಮೃದ್ಧಿಗೆ ಕಾರಣವಾಗಿದೆ. |

**ನಪುಂಸಕತ್ವಭೀತಿಯ ಪರಿಹಾರಕ್ಕಾಗಿ ವಿಹಿತ ಇಷ್ಟಿ; ಪ್ರಶಂಸೆ**

| | |
|---|---|
| **ಯಃ ಕ್ಲೈಬ್ಯಾತ್ ಬಿಭೀಯಾತ್** | ಯಾವನು ನಪುಂಸಕತ್ವದಿಂದ ಭೀತನಾಗಿರುತ್ತಾನೆಯೋ [ಅವನು]. |
| **ಸೋಮಾಯ ವಾಜಿನೇ ಶ್ಯಾಮಾಕಮ್ ಚರುಮ್ ನಿರ್ವಪೇತ್** | ಪ್ರಜೋತ್ಪತ್ತಿಯನ್ನುಂಟುಮಾಡುವ ಅನ್ನರಸವುಳ್ಳ ಸೋಮನಿಗಾಗಿ ಸಾಮೆ ಅಕ್ಕಿಯ ಅನ್ನದ ಚರುವನ್ನು ಯಾಗ ಮಾಡಬೇಕು. |
| **ಏತಸ್ಮಾತ್ ವಾಜಿನಮ್ ರೇತಃ ವೈ ಅಪಕ್ರಾಮತಿ ಹಿ ಅಥ ಏಷಃ** | ರೋಗದಿಂದಲೋ ದುರದೃಷ್ಟದಿಂದಲೋ ಒಬ್ಬನಿಗೆ ಪ್ರಜೋತ್ಪತ್ತಿಕಾರಣವಾದ ರೇತಸ್ಸು ಹೊರಟುಹೋಗಬಹುದು. ಅನಂತರ ಈತನು |

---

ವಾಗಿರುವುದು ಅಷ್ಟಾಕ್ಷರಗಾಯತ್ರೀಸ್ವರೂಪನಾದ ಅಗ್ನಿಗೆ ಪ್ರಿಯವಾಗಿದೆ. ಶ್ಯಾಮಾಕ ಧಾನ್ಯವು ಸೋಮರಸದಿಂದ ಹುಟ್ಟಿ ಸೋಮನಿಗೆ ಪ್ರಿಯವಾಗಿದೆ. ಹೀಗಿರುವ ಈ ಯಾಗವು ಬ್ರಹ್ಮವರ್ಚಸರೂಪಫಲಸಮೃದ್ಧಿಗೆ ಕಾರಣವಾಗುತ್ತದೆ.

ತಾನು ನಪುಂಸಕನಾಗಬಹುದೆಂದು ಹೆದರುವವನು ವಾಜಿಯಾದ ಸೋಮನಿಗಾಗಿ ಸಾಮೆ ಅನ್ನದ ಚರುವನ್ನು ಯಾಗ ಮಾಡಬೇಕು. ದುರದೃಷ್ಟದಿಂದಲೋ ರೋಗದಿಂದಲೋ

॥ । 
ಕ್ಲೈಬ್ಯಾದ್ಬಿಭಾಯ ಸೋಮಮೇವ ವಾಜಿನಗ್ಗ್ಂ

। । 
ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮಿನ್ರೇತೋ

। । 
ವಾಜಿನಂ ದಧಾತಿ ನ ಕ್ಲೀಬೋ ಭವತಿ

---

ಕ್ಲೈಬ್ಯಾತ್ । ಬಿಭಾಯ ।ಸೋಮಮ್ । ಏವ । ವಾಜಿನಮ್ । ಸ್ವೇನ । ಭಾಗಧೇಯೇನೇತಿ

ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮಿನ್ನ್ । ರೇತಃ । ವಾಜಿನಮ್ ।

ದಧಾತಿ । ನ । ಕ್ಲೀಬಃ । ಭವತಿ ।

---

| | |
|---|---|
| ಕ್ಲೈಬ್ಯಾತ್ ಬಿಭಾಯ | ತಾನು ನಪುಂಸಕನಾಗಬಹುದೆಂದು ಹೆದರುತ್ತಾನೆ. |
| ವಾಜಿನಮ್ ಸೋಮಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ವಾಜವುಳ್ಳ ಸೋಮನನ್ನೇ ಯಜಮಾನನು ಹವಿರ್ಭಾಗವನ್ನಿತ್ತು ಸೇವಿಸುತ್ತಾನೆ. |
| ಸಃ ಏವ ಅಸ್ಮಿನ್ ರೇತಃ ವಾಜಿನಮ್ ದಧಾತಿ | ಆ ಸೋಮನೇ ತೃಪ್ತನಾಗಿ ಈ ಯಜಮಾನನಿಗೆ ಪ್ರಜೋತ್ಪತ್ತಿಕಾರಣವಾದ ಅನ್ನರಸವುಳ್ಳ ರೇತಸ್ಸನ್ನುಂಟುಮಾಡುತ್ತಾನೆ. |
| ಕ್ಲೀಬಃ ನ ಭವತಿ | ಯಜಮಾನನು ನಪುಂಸಕನಾಗುವುದಿಲ್ಲ. |

---

ಆತನ ರೇತಸ್ಸು ಕ್ಷೀಣವಾಗಬಹುದು. ಆಗ ಈತನು ನಪುಂಸಕನಾಗಬಹುದೆಂದು ಹೆದರುತ್ತಾನೆ. ಈ ಯಾಗದಿಂದ ವಾಜಿಯಾದ ಸೋಮನು ಈ ಯಜಮಾನನಿಗೆ ಪ್ರಜೋತ್ಪತ್ತಿಗೆ ಕಾರಣವಾದ ರೇತಸ್ಸನ್ನುಂಟುಮಾಡುತ್ತಾನೆ. ಯಜಮಾನನು ನಪುಂಸಕನಾಗುವುದಿಲ್ಲ. ಪ್ರಜೋತ್ಪತ್ತಿಗೆ ಶಕ್ತನಾಗುತ್ತಾನೆ.

ಬ್ರಾಹ್ಮಣಸ್ಪತ್ಯಮೇಕಾದಶಕಪಾಲಂ ನಿರ್ವಪೇದ್ಗ್ರಾಮ

ಕಾಮೋ [ಗ್ರಾಮಕಾಮಃ (೪) ಬ್ರಹ್ಮಣಸ್ಪತಿಮೇವ]

ಬ್ರಹ್ಮಣಸ್ಪತಿಮೇವ ಸ್ವೇನ ಭಾಗಧೇಯೇನೋಪಧಾವತಿ

ಸ ಏವಾಸ್ಮೈ ಸಜಾತಾನ್ಪ್ರಯಚ್ಛತಿ

---

**ಬ್ರಾಹ್ಮಣಸ್ಪತ್ಯಮಿತಿ ಬ್ರಾಹ್ಮಣಃ – ಪತ್ಯಮ್** । ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್ । ನಿರಿತಿ । ವಪೇತ್ । ಗ್ರಾಮಕಾಮ ಇತಿ ಗ್ರಾಮ–ಕಾಮಃ । ಬ್ರಹ್ಮಣಃ । ಪತಿಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮೈ । ಸಜಾತಾನಿತಿ ಸ–ಜಾತಾನ್ । ಪ್ರೇತಿ । ಯಚ್ಛತಿ ।

---

**ಗ್ರಾಮಕಾಮನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| **ಗ್ರಾಮಕಾಮಃ** | ಗ್ರಾಮಾಧಿಪತಿಯಾಗಬೇಕೆಂದು ಬಯಸುವವನು |
| **ಬ್ರಾಹ್ಮಣಸ್ಪತ್ಯಮ್ ಏಕಾದಶಕಪಾಲಮ್ ನಿರ್ವಪೇತ್** | ಬ್ರಹ್ಮಣಸ್ಪತಿದೇವನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. |
| **ಬ್ರಹ್ಮಣಸ್ಪತಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ** | ಯಜಮಾನನು ಈ ಯಾಗದಿಂದ ಬ್ರಹ್ಮಣಸ್ಪತಿ ದೇವತೆಯನ್ನು ಹವಿಸ್ಸನ್ನು ಕೊಟ್ಟು ಸೇವಿಸುತ್ತಾನೆ. |
| **ಸಃ ಏವ ಅಸ್ಮೈ ಸಜಾತಾನ್ ಪ್ರಯಚ್ಛತಿ** | ಆ ದೇವನೇ ಮಿತ್ರ–ಜ್ಞಾತಿ–ಭೃತ್ಯಾದಿಗಳನ್ನು ಅಧೀನರನ್ನಾಗಿ ಮಾಡುತ್ತಾನೆ. |

---

ಗ್ರಾಮಾಧಿಪತಿಯಾಗಬೇಕೆಂದು ಬಯಸುವವನು ಬ್ರಹ್ಮಣಸ್ಪತಿದೇವನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು. ಇದರಿಂದ ಬ್ರಹ್ಮಣಸ್ಪತಿಗೆ ತನ್ನ ಭಾಗವು ಲಭಿಸಿದಂತಾಗಿ ಆತನು ಸುಪ್ರೀತನಾಗುತ್ತಾನೆ. ಮಿತ್ರ – ಜ್ಞಾತ್ಯಾದಿಗಳನ್ನು

ಗ್ರಾಮ್ಯೇವ ಭವತಿ ಗಣವತೀ ಯಾಜ್ಯಾನುವಾಕ್ಯೇ ಭವತಃ

ಸಜಾತೈರೇವೈನಂ ಗಣವಂತಂ ಕರೋತ್ಯೇತಾಮೇವ

ನಿರ್ವಪೇದ್ಯಃ ಕಾಮಯೇತ ಬ್ರಹ್ಮನ್ವಿಶಂ ವಿನಾಶಯೇಯಮಿತಿ

---

ಗ್ರಾಮೀ । ಏವ । ಭವತಿ । ಗಣವತೀ ಇತಿ ಗಣ–ವತೀ । ಯಾಜ್ಯಾನುವಾಕ್ಯೇ ಇತಿ ಯಾಜ್ಯಾ–ಅನುವಾಕ್ಯೇ । ಭವತಃ । ಸಜಾತೈರಿತಿ ಸ–ಜಾತೈಃ । ಏವ । ಏನಮ್ । ಗಣವಂತಮಿತಿ ಗಣ–ವಂತಮ್ । ಕರೋತಿ । ಏತಾಮ್ । ಏವ । ನಿರಿತಿ । ವಪೇತ್ । ಯಃ । ಕಾಮಯೇತ । ಬ್ರಹ್ಮನ್ । ವಿಶಮ್ । ವೀತಿ । ನಾಶಯೇಯಮ್ । ಇತಿ ।

---

ಗ್ರಾಮೀ ಏವ ಭವತಿ — ಯಜಮಾನನು ಗ್ರಾಮಾಧಿಪತಿಯೇ ಆಗುತ್ತಾನೆ.

**ಯಾಜ್ಯಾನುವಾಕ್ಯಾವಿಧಾನ; ಫಲಪ್ರಶಂಸೆ**

ಗಣವತೀ ಯಾಜ್ಯಾನುವಾಕ್ಯೇ ಭವತಃ — ಈ ಯಾಗದಲ್ಲಿ *ಗಣಶಬ್ದಯುಕ್ತವಾದ ಯಾಜ್ಯಾನುವಾಕ್ಯೆಗಳನ್ನು ಪ್ರಯೋಗಿಸಬೇಕು.

ಸಜಾತೈಃ ಏವ ಏನಮ್ ಗಣವಂತಂ ಕರೋತಿ — ಮಂತ್ರಪ್ರವಕ್ತನು ಇದರಿಂದ ಯಜಮಾನನನ್ನು ಅನುಕೂಲರಾದ ಜ್ಞಾತ್ಯಾದಿಗಳ ಸಮೂಹ ವುಳ್ಳವನಂತೆ ಮಾಡುತ್ತಾನೆ.

**ಮತ್ತೊಂದು ಕಾಮನೆಗಾಗಿ ಈ ಯಾಗದ ವಿಧಿ; ಪ್ರಶಂಸೆ**

ಯಃ ಬ್ರಹ್ಮನ್ ವಿಶಮ್ ವಿನಾಶಯೇಯಮ್ ಇತಿ ಕಾಮಯೇತ — ಯಾವನು ಧನಮದದಿಂದ ಅತಿಕ್ರಮಿಸಿ ನಡೆಯುವ ವೈಶ್ಯಾದಿಗಳನ್ನು ಬ್ರಾಹ್ಮಣರ ಅಧೀನರನ್ನಾಗಿ ಮಾಡಲು ಬಯಸುವನೋ [ಅವನು]

---

ಅಧೀನರಾಗಿ ನಡೆದುಕೊಳ್ಳುವಂತೆ ಮಾಡುತ್ತಾನೆ. ಯಜಮಾನನು ಗ್ರಾಮಸ್ವಾಮಿಯೇ ಆಗುತ್ತಾನೆ.

---

* ಗಣಾನಾಂ ತ್ವಾ......... ಸಾದನಮ್ ॥ ಸ ಇಜ್ಜನೇನ......... ಬ್ರಹ್ಮಣಸ್ಪತಿಮ್ ॥ ಸ ಸುಷ್ಟುಭಾ......... ಉದಾಜತ್ ॥ ತೈ. ಸಂ. 2.3.14

# ಮಾರುತೀ ಯಾಜ್ಯಾನುವಾಕ್ಯೇ ಕುರ್ಯಾದ್ಬ್ರಹ್ಮನ್ನೇವ ವಿಶಂ ವಿನಾಶಯತಿ ॥೧೯–3॥

[ತೇಜಃ ಸಮೀಚೀ ಬ್ರಹ್ಮವರ್ಚಸ್ಯೇವ ಗ್ರಾಮಕಾಮಸ್ತ್ರಿಚತ್ವಾರಿಗ್‍ಂಶಚ್ಚ ।]

---

ಮಾರುತೀ ಇತಿ । ಯಾಜ್ಯಾನುವಾಕ್ಯೇ ಇತಿ ಯಾಜ್ಯಾ–ಅನುವಾಕ್ಯೇ । ಕುರ್ಯಾತ್ । ಬ್ರಹ್ಮನ್ । ಏವ । ವಿಶಮ್ । ವೀತಿ । ನಾಶಯತಿ ॥3॥

---

| | |
|---|---|
| ಮಾರುತೀ ಯಾಜ್ಯಾನುವಾಕ್ಯೇ ಕುರ್ಯಾತ್ | *ಮರುದ್ದೇವತಾಕಗಳಾದ ಯಾಜ್ಯಾನುವಾಕ್ಯೆಗಳನ್ನು ಪ್ರಯೋಗಿಸಬೇಕು. |
| ಬ್ರಹ್ಮನ್ ವಿಶಮ್ ವಿನಾಶಯತಿ ಏವ | ಮಂತ್ರವಕ್ತನು ಮನುಷ್ಯ ಪ್ರಜೆಗಳನ್ನು ಅಧೀನರಾಗುವಂತೆ ಮಾಡುತ್ತಾನೆ. |

---

ಯಾಜ್ಯಾನುವಾಕ್ಯೆಗಳಲ್ಲಿ 'ಗಣ' ಶಬ್ದವುಳ್ಳ ಮಂತ್ರಗಳನ್ನು ಪ್ರಯೋಗಿಸುವುದರಿಂದ ಯಜಮಾನನು ಅನುಕೂಲರಾದ ಜ್ಞಾತ್ಯಾದಿಗಳ ಗುಂಪನ್ನು ಹೊಂದಿದವನೇ ಆಗುತ್ತಾನೆ.

ಧನಮದದಿಂದ ಅತಿಕ್ರಮಿಸಿ ನಡೆಯುವ ವೈಶ್ಯಾದಿಗಳನ್ನು ಬ್ರಾಹ್ಮಣಾಧೀನರನ್ನಾಗಿ ಮಾಡಲು ಬಯಸುವವನು ಮರುದ್ದೇವತೆಗಳ ಯಾಜ್ಯಾನುವಾಕ್ಯೆಗಳನ್ನು ಪ್ರಯೋಗಿಸಿ ಈ ಇಷ್ಟಿಯನ್ನು ಅನುಷ್ಠಿಸಬೇಕು.

ಮರುತ್ತುಗಳು ದೇವಪ್ರಜೆಗಳು. ಅವರ ಅನುಗ್ರಹದಿಂದ ಮನುಷ್ಯಪ್ರಜೆಗಳೂ ಅಧೀನರಾಗುತ್ತಾರೆ.

---

* ಮರುತೋ ಯದ್ಧ ವೋ...... ಗಂತನ ॥ ಯಾ ವಃ ಶರ್ಮ..... ಸುವೀರಮ್ ।
**ತೈ. ಸಂ. 1.5.11.**

# ತೃತೀಯಾನುವಾಕವಿಷಯಸಂಗ್ರಹ

**ತೃತೀಯೇ ಯಜ್ಞವಿಭ್ರಷ್ಟೋ ಯಃ ಕಾಮಂ ಪ್ರಾಪ್ತುಮಿಚ್ಛತಿ ।**
**ಬ್ರಹ್ಮವರ್ಚಸಕಾಮೋ ಯಃ ಕ್ಲೀಬತ್ವಾದ್ಯೋ ಬಿಭೇತಿ ಚ ।**

**ಗ್ರಾಮಕಾಮೋ ಬ್ರಾಹ್ಮಣೋ ಯೋ ವಿಶಃ ಸ್ಥಾಪನಮಿಚ್ಛತಿ ।**
**ಏತೇಷಾಮಿಷ್ಟಯಃ ಪ್ರೋಕ್ತಾಸ್ತತ್ತತ್ಫಲಸಮಾಪ್ತಯೇ ॥**

ಯಜ್ಞವಿಭ್ರಷ್ಟನಾದವನಿಗೂ, ಬಯಕೆಗಳ ಈಡೇರಿಕೆಯನ್ನು ಇಟ್ಟುಕೊಂಡಿರುವವನು, ಬ್ರಹ್ಮವರ್ಚಸ ಅಂದರೆ ಶ್ರುತಾಧ್ಯಯನಸಂಪತ್ತನ್ನು ಬಯಸುವವನು, ನಪುಂಸಕತ್ವ ಭೀತಿಯ ಪರಿಹಾರವನ್ನು ಇಚ್ಛಿಸುವವನು, ಗ್ರಾಮಾಧಿಪತ್ಯವನ್ನು ಅಪೇಕ್ಷಿಸುವವನು, ಧನಮದದಿಂದ ಅತಿಕ್ರಮಿಸುವ ವೈಶ್ಯಾದಿಗಳನ್ನು ನಿಗ್ರಹಿಸಬಯಸುವವನು — ಇವರಿಗೆ ಈ ಅನುವಾಕದಲ್ಲಿ ಇಷ್ಟಿಗಳು ಆಯಾ ಫಲಗಳನ್ನು ಹೊಂದಲು ಹೇಳಲ್ಪಟ್ಟಿವೆ.

* * *

## ॥ ಚತುರ್ಥೋಽನುವಾಕಃ ॥

ಅರ್ಯಮ್ಣೇ ಚರುಂ ನಿರ್ವಪೇತ್ಸುವರ್ಗಕಾಮೋಽಸೌ

ವಾ ಆದಿತ್ಯೋಽರ್ಯಮಾಽರ್ಯಮಣಮೇವ ಸ್ವೇನ ಭಾಗ

ಧೇಯೇನೋಪಧಾವತಿ ಸ ಏವೈನಗ್ಂ ಸುವರ್ಗಂ ಲೋಕಂ

---

ಅರ್ಯಮ್ಣೇ । ಚರುಮ್ । ನಿರಿತಿ । ವಪೇತ್ । ಸುವರ್ಗಕಾಮ ಇತಿ ಸುವರ್ಗ–ಕಾಮಃ । ಅಸೌ । ವೈ । ಆದಿತ್ಯಃ । ಅರ್ಯಮಾ । ಅರ್ಯಮಣಮ್ । ಏವ । ಸ್ವೇನ । ಭಾಗ ಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ಸುವರ್ಗಮಿತಿ ಸುವಃ – ಗಮ್ । ಲೋಕಮ್ ।

---

ಈ ನಾಲ್ಕನೆಯ ಅನುವಾಕದಲ್ಲಿ ಸುವರ್ಗಕಾಮಾದಿಗಳಿಗಾಗಿ ಇಷ್ಟಿಗಳು ಹೇಳಲ್ಪಟ್ಟಿವೆ.

**ಸ್ವರ್ಗಕಾಮನಾದವನಿಗೆ ವಿಹಿತವಾದ ಇಷ್ಟಿ; ಪ್ರಶಂಸೆ**

| | |
|---|---|
| ಸುವರ್ಗಕಾಮಃ ಅರ್ಯಮ್ಣೇ ಚರುಮ್ ನಿರ್ವಪೇತ್ | ಸ್ವರ್ಗಲೋಕವನ್ನು ಬಯಸುವವನು ಅರ್ಯಮದೇವನಿಗಾಗಿ ಚರುಯಾಗವನ್ನು ಅನುಷ್ಠಿಸಬೇಕು. |
| ಅಸೌ ಆದಿತ್ಯಃ ಅರ್ಯಮಾ ವೈ | ಈ ಸೂರ್ಯದೇವನೇ ಅರ್ಯಮನಾಗಿದ್ದಾನೆ. |
| ಅರ್ಯಮಣಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಅರ್ಯಮದೇವನನ್ನೇ ಯಜಮಾನನು ಹವಿರ್ಭಾಗವನ್ನಿತ್ತು ಸೇವಿಸುತ್ತಾನೆ. |
| ಸಃ ಏವ ಏನಮ್ ಸುವರ್ಗಮ್ ಲೋಕಮ್ | ಆ ಅರ್ಯಮದೇವನೇ ಈ ಯಜಮಾನನ್ನು ಸ್ವರ್ಗಲೋಕಕ್ಕೆ |

---

ಸ್ವರ್ಗಲೋಕಕ್ಕೆ ಹೋಗಬೇಕೆಂದಿರುವವನು ಅರ್ಯಮದೇವನಿಗಾಗಿ ಚರುಯಾಗವನ್ನು ಅನುಷ್ಠಿಸಬೇಕು. ಈ ಆದಿತ್ಯನೇ ಸ್ವರ್ಗಪ್ರಾಪಕನಾದ ಅರ್ಯಮಸ್ವರೂಪನಾಗಿ

ಗಮಯತ್ಯರ್ಯಮ್ಣೇ ಚರುಂ ನಿರ್ವಪೇದ್ಯಃ ಕಾಮಯೇತ

ದಾನಕಾಮಾ ಮೇ ಪ್ರಜಾಃ ಸ್ಯುರಿತ್ಯಸೌ ವಾ

ಆದಿತ್ಯೋಽರ್ಯಮಾ

---

ಗಮಯತಿ । ಅರ್ಯಮ್ಣೇ । ಚರುಮ್ । ನಿರಿತಿ । ವಪೇತ್ । ಯಃ । ಕಾಮಯೇತ ।

ದಾನಕಾಮಾ ಇತಿ ದಾನ–ಕಾಮಾಃ । ಮೇ । ಪ್ರಜಾ ಇತಿ ಪ್ರ–ಜಾಃ । ಸ್ಯುಃ । ಇತಿ । ಅಸೌ ।

ವೈ । ಆದಿತ್ಯಃ । ಅರ್ಯಮಾ ।

---

| | |
|---|---|
| ಗಮಯತಿ | ಒಯ್ಯುತ್ತಾನೆ. |

**ಮತ್ತೊಂದು ಕಾಮನೆಗಾಗಿ ಈ ಇಷ್ಟಿಯ ವಿಧಿ; ಪ್ರಶಂಸೆ**

| | |
|---|---|
| ಯಃ ಮೇ ಪ್ರಜಾಃ ದಾನಕಾಮಾಃ ಸ್ಯುಃ ಇತಿ ಕಾಮಯೇತ | ಬೇರೆಯ ಧನಿಕರು ತನಗೆ ದಾನ ಮಾಡುವ ಮನಸ್ಸುಳ್ಳವರಾಗಬೇಕೆಂದು ಯಾವನು ಬಯಸುತ್ತಾನೆಯೋ ಅವನು |
| ಅರ್ಯಮ್ಣೇ ಚರುಮ್ ನಿರ್ವಪೇತ್ | ಅರ್ಯಮದೇವತೆಗಾಗಿ ಚರುಯಾಗವನ್ನು ಅನುಷ್ಠಿಸಬೇಕು. |
| ಅಸೌ ಆದಿತ್ಯಃ ಅರ್ಯಮಾ ವೈ | ಈ ಸೂರ್ಯನೇ ಅರ್ಯಮನಾಗಿರುತ್ತಾನೆ. |

---

ದ್ದಾನೆ. ಯಜಮಾನನು ಈ ಯಾಗದಿಂದ ಅರ್ಯಮನ ಭಾಗವನ್ನು ಸಮರ್ಪಿಸಿ ಸೇವಿಸುತ್ತಾನೆ. ಇದರಿಂದ ತೃಪ್ತನಾದ ಅರ್ಯಮದೇವನು ಯಜಮಾನನಿಗೆ ಸ್ವರ್ಗಲೋಕವನ್ನು ಕರುಣಿಸುತ್ತಾನೆ.

ತನಗೆ ಬೇರೆಯ ಧನಿಕರಾದ ಪ್ರಜೆಗಳು ದಾನ ಕೊಡಲು ಮುಂದೆ ಬರಬೇಕೆಂದು ಬಯಸುವವನು ಅರ್ಯಮದೇವನಿಗಾಗಿ ಚರುಯಾಗವನ್ನು ಅನುಷ್ಠಿಸಬೇಕು. ಸರ್ವವನ್ನೂ ಕೊಡುವ ಪ್ರಕಾಶಮಾನನಾದ ಸೂರ್ಯನೇ ಅರ್ಯಮನು. ದಾನಶೀಲನು ಲೋಕದಲ್ಲಿ

ಯಃ ಖಲು ವೈ ದದಾತಿ ಸೋಽರ್ಯಮಾಽರ್ಯಮಣಮೇವ ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮೈ [ಏವ (೧) ಅಸ್ಮೈ] ದಾನಕಾಮಾಃ ಪ್ರಜಾಃ ಕರೋತಿ

---

ಯಃ । ಖಲು । ವೈ । ದದಾತಿ । ಸಃ । ಅರ್ಯಮಾ । ಅರ್ಯಮಣಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮೈ । ದಾನಕಾಮಾ ಇತಿ ದಾನ-ಕಾಮಾಃ । ಪ್ರಜಾ ಇತಿ ಪ್ರ-ಜಾಃ । ಕರೋತಿ ।

---

| | |
|---|---|
| ಯಃ ಖಲು ವೈ ದದಾತಿ ಸಃ ಅರ್ಯಮಾ | ಯಾವನು ದಾನ ಕೊಡುತ್ತಾನೆಯೋ ಅವನು ಪ್ರಸಿದ್ಧನಾಗುವುದರಿಂದ ಅರ್ಯಮನೆನಿಸಿ ಕೊಳ್ಳುತ್ತಾನೆ. |
| ಅರ್ಯಮಣಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದಿಂದ ಅರ್ಯಮನಿಗೆ ಹವಿರ್ಭಾಗವನ್ನು ಕೊಟ್ಟು ಸೇವಿಸುತ್ತಾನೆ. |
| ಸಃ ಏವ ಅಸ್ಮೈ ಪ್ರಜಾಃ ದಾನಕಾಮಾಃ ಕರೋತಿ | ಆ ಅರ್ಯಮದೇವನೇ ಈ ಯಜಮಾನನಿಗೆ ದಾನ ಕೊಡಲು ಪ್ರಜೆಗಳು ಮುಂದೆ ಬರುವಂತೆ ಮಾಡುತ್ತಾನೆ. |

---

ಸೂರ್ಯನಂತೆ ಪ್ರಸಿದ್ಧನಾಗುತ್ತಾನೆ. ಈ ಅರ್ಯಮಯಾಗದಿಂದ ಯಜಮಾನನು ಅರ್ಯಮದೇವನಿಗೆ ಹವಿರ್ಭಾಗವನ್ನು ಸಮರ್ಪಿಸಿ ಸೇವಿಸುತ್ತಾನೆ. ತೃಪ್ತನಾದ ಅರ್ಯಮನು ಈ ಯಜಮಾನನಿಗೆ ಪ್ರಜೆಗಳು ದಾನವನ್ನು ನೀಡುವಂತೆ ಪ್ರೇರಿಸುತ್ತಾನೆ. ಈ ಯಾಗದ ಪ್ರಭಾವದಿಂದ ಪ್ರಜೆಗಳು ಈ ಯಜಮಾನನಿಗೆ ದಾನ ಕೊಡುತ್ತಾರೆ.

ದಾನಕಾಮಾ ಅಸ್ಮೈ ಪ್ರಜಾ ಭವಂತ್ಯರ್ಯಮ್ಣೇ ಚರುಂ
ನಿರ್ವಪೇದ್ಯಃ ಕಾಮಯೇತ ಸ್ವಸ್ತಿ ಜನತಾಮಿಯಾಮಿತ್ಯಸೌ
ವಾ ಆದಿತ್ಯೋಽರ್ಯಮಾಽರ್ಯಮಣಮೇವ

---

ದಾನಕಾಮಾ ಇತಿ ದಾನ–ಕಾಮಾಃ । ಅಸ್ಮೈ । ಪ್ರಜಾ ಇತಿ ಪ್ರ–ಜಾಃ । ಭವಂತಿ ।
ಅರ್ಯಮ್ಣೇ । ಚರುಮ್ । ನಿರಿತಿ । ವಪೇತ್ । ಯಃ । ಕಾಮಯೇತ । ಸ್ವಸ್ತಿ । ಜನತಾಮ್ ।
ಇಯಾಮ್ । ಇತಿ । ಅಸೌ । ವೈ । ಆದಿತ್ಯಃ । ಅರ್ಯಮಾ । ಅರ್ಯಮಣಮ್ । ಏವ ।

---

| | |
|---|---|
| ಅಸ್ಮೈ ದಾನಕಾಮಾಃ ಪ್ರಜಾಃ ಭವಂತಿ | ಈ ಯಜಮಾನನಿಗೆ ದಾನ ನೀಡಲು ಪ್ರಜೆಗಳು ಇಚ್ಛೆಯುಳ್ಳವರಾಗುತ್ತಾರೆ. |

**ಮತ್ತೊಂದು ಕಾಮನೆಗಾಗಿ ಅರ್ಯಮಯಾಗವಿಧಿ; ಪ್ರಶಂಸೆ**

| | |
|---|---|
| ಯಃ ಜನತಾಮ್ ಸ್ವಸ್ತಿ ಇಯಾಮ್ ಇತಿ ಕಾಮಯೇತ | ಯಾವನು ಕಾರ್ಯಕ್ಕಾಗಿ ಪ್ರಜಾಸಮೂಹದ ಬಳಿ ಕ್ಷೇಮವಾಗಿ ಹೋಗಿ ಬರುವೆನೆಂದು ಅಪೇಕ್ಷಿಸುವನೋ, [ಅವನು] |
| ಅರ್ಯಮ್ಣೇ ಚರುಮ್ ನಿರ್ವಪೇತ್ | ಅರ್ಯಮದೇವನಿಗಾಗಿ ಚರುಯಾಗವನ್ನು ಅನುಷ್ಠಿಸಬೇಕು. |
| ಅಸೌ ವೈ ಆದಿತ್ಯಃ ಅರ್ಯಮಾ | ಈ ಸರ್ವರಕ್ಷಕನಾದ ಸೂರ್ಯದೇವನೇ ಅರ್ಯಮನು. |
| ಅರ್ಯಮಣಮ್ ಏವ | ಯಜಮಾನನು ಈ ಯಾಗದಿಂದ ಅರ್ಯಮನಿಗೆ |

---

ಯಾವುದಾದರೂ ಕಾರ್ಯಕ್ಕಾಗಿ ಜನಸಮೂಹಕ್ಕೆ ಹೋಗಿ ಕ್ಷೇಮವಾಗಿ ಹಿಂದಿರುಗಿ ಬರಬೇಕೆಂದಿರುವವನು ಅರ್ಯಮದೇವನಿಗಾಗಿ ಚರುಯಾಗವನ್ನು ಅನುಷ್ಠಿಸಬೇಕು. ಲೋಕರಕ್ಷಕನಾದ ಸೂರ್ಯನೇ ಅರ್ಯಮನು. ಈ ಯಾಗದಿಂದ ಯಜಮಾನನು ಅರ್ಯಮ

ಸ್ವೇನ ಭಾಗಧೇಯೇನೋಪಧಾವತಿ ಸ ಏವೈನಂ
ತದ್ಗಮಯತಿ ಯತ್ರ ಜಿಗಮಿಷತೀಂದ್ರೋ ವೈ
ದೇವಾನಾಮಾನುಜಾವರ ಆಸೀತ್ಸ

---

ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ತತ್ । ಗಮಯತಿ । ಯತ್ರ । ಜಿಗಮಿಷತಿ । ಇಂದ್ರಃ । ವೈ । ದೇವಾನಾಮ್ । ಆನುಜಾವರ ಇತ್ಯಾನು-ಜಾವರಃ । ಆಸೀತ್ । ಸಃ ।

---

| | |
|---|---|
| ಸ್ವೇನ ಭಾಗಧೇಯೇನ ಉಪಧಾವತಿ | ತಕ್ಕ ಹವಿರ್ಭಾಗವನ್ನಿತ್ತು ಸೇವಿಸುತ್ತಾನೆ. |
| ಸಃ ಏವ ಏನಮ್ ಯತ್ರ ಜಿಗಮಿಷತಿ ತತ್ ಗಮಯತಿ | ಆ ಅರ್ಯಮನೇ ಈ ಯಜಮಾನನನ್ನು ಕ್ಷೇಮವಾಗಿ ಜನಸಮೂಹಕ್ಕೆ ಹೋಗಿ ಬರುವಂತೆ ಮಾಡುತ್ತಾನೆ. |

**ಶ್ರೇಷ್ಠತೆಯನ್ನು ಪಡೆಯಲು ಐಂದ್ರೇಷ್ಟಿ; ಅರ್ಥವಾದ**

| | |
|---|---|
| ಇಂದ್ರಃ ವೈ ದೇವಾನಾಮ್ ಆನುಜಾವರಃ ಆಸೀತ್ ಸಃ | ಇಂದ್ರನು ದೇವತೆಗಳಲ್ಲಿ ಅತಿ ಕನಿಷ್ಠನಾಗಿದ್ದನು. ಅವನು |

---

ನನ್ನು ತೃಪ್ತಿಪಡಿಸುತ್ತಾನೆ. ಆ ತೃಪ್ತನಾದ ಅರ್ಯಮದೇವನು ಯಜಮಾನನು ಎಲ್ಲಿಗೆ ಹೋಗಬೇಕೆಂದಿರುವನೋ ಅಲ್ಲಿಗೆ ಕ್ಷೇಮವಾಗಿ ಹೋಗಿ ಬರುವಂತೆ ಮಾಡುತ್ತಾನೆ.

ಇಂದ್ರನು ಮೊದಲು ಕನಿಷ್ಠನಾಗಿದ್ದನು. ಅವನು ಶ್ರೇಷ್ಠತೆಯನ್ನು ಪಡೆಯಲು

ಪ್ರಜಾಪತಿಮುಪಾಧಾವತ್ತಸ್ಮಾ ಏತಮೈಂದ್ರಮಾನುಷೂಕ

ಮೇಕಾದಶಕಪಾಲಂ ನಿರವಪತ್ತೇನೈವೈನಮಗ್ರಂ [ನಿಃ (೨)

ಅವಪತ್ತೇನೈವೈನಮಗ್ರಂ] ದೇವತಾನಾಂ ಪರ್ಯಣಯದ್ಬುಧ್ನವತೀ

---

ಪ್ರಜಾಪತಿಮಿತಿ ಪ್ರಜಾ–ಪತಿಮ್ । ಉಪೇತಿ । ಅಧಾವತ್ । ತಸ್ಮೈ । ಏತಮ್ । ಐಂದ್ರಮ್ । ಅನುಷೂಕಮಿತ್ಯಾನು–ಸೂಕಮ್ । ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್ । ನಿರಿತಿ । ಅವಪತ್ । ತೇನ । ಏವ । ಏನಮ್ । ಅಗ್ರಮ್ । ದೇವತಾನಾಮ್ । ಪರೀತಿ । ಅನಯತ್ । ಬುಧ್ನವತೀ ಇತಿ ಬುಧ್ನ–ವತೀ ।

---

| | |
|---|---|
| ಪ್ರಜಾಪತಿಮ್ ಉಪಾಧಾವತ್ | [ಅಗ್ರಸ್ಥಾನವನ್ನು ಹೊಂದಲು] ಪ್ರಜಾಪತಿಯನ್ನು ಆಶ್ರಯಿಸಿದನು. |
| ಸಃ ಏತಮ್ ಐಂದ್ರಮ್ ಅನುಷೂಕಮ್ ಏಕಾದಶಕಪಾಲಮ್ ನಿರವಪತ್ | ಆ ಪ್ರಜಾಪತಿಯು ಇಂದ್ರನಿಗಾಗಿ ಕೂಳೆ ಬತ್ತದ ಅಕ್ಕಿಯಿಂದಾದ ಇಂದ್ರದೇವತಾಕವಾದ, ಏಕಾದಶಕಪಾಲಪುರೋಡಾಶದ ಯಾಗವನ್ನು ಮಾಡಿದನು. |
| ತೇನ ಏವ ಏನಮ್ ದೇವತಾನಾಮ್ ಅಗ್ರಮ್ | ಆ ಯಾಗದಿಂದಲೇ ಇಂದ್ರನನ್ನು ದೇವತೆಗಳಲ್ಲಿ ಅಗ್ರಸ್ಥಾನವನ್ನು ಪಡೆಯುವಂತೆ |
| ಪರಿ ಅನಯತ್ | ಮಾಡಿದನು. |
| ಬುಧ್ನವತೀ | ಈ ಯಾಗದಲ್ಲಿ *ಬುಧ್ನ |

---

ಈ ಯಾಗದಿಂದ ಇಂದ್ರನು ಪ್ರಜಾಪತಿಯನ್ನು ಆಶ್ರಯಿಸಿದನು. ಪ್ರಜಾಪತಿಯು ಇಂದ್ರನಿಗಾಗಿ ಬೆಳೆಯನ್ನು ಕೊಯ್ದ ಮೇಲೆ ಮತ್ತೆ ಚಿಗುರಿ ಫಲಿಸಿದ ಬತ್ತದ ಅಕ್ಕಿಯಿಂದ

---

* ಬುಧ್ನಾದಗ್ರಮ್........ ಚಕಾರ ।

## ಅಗ್ರವತೀ ಯಾಜ್ಯಾನುವಾಕ್ಯೇ ಅಕರೋದ್ಬುಧ್ನಾದೇವೈನಮಗ್ರಂ

## ಪರ್ಯಣಯದ್ಯೋ ರಾಜನ್ಯ ಆನುಜಾವರಃ

---

ಅಗ್ರವತೀ ಇತ್ಯಗ್ರ–ವತೀ । ಯಾಜ್ಯಾನುವಾಕ್ಯೇ ಇತಿ ಯಾಜ್ಯಾ–ಅನುವಾಕ್ಯೇ ।

ಅಕರೋತ್ । ಬುಧ್ನಾತ್ । ಏವ । ಏನಮ್ । ಅಗ್ರಮ್ । ಪರೀತಿ । ಅನಯತ್ ।

ಯಃ । ರಾಜನ್ಯಃ । ಆನುಜಾವರ ಇತ್ಯಾನು–ಜಾವರಃ ।

---

| | |
|---|---|
| ಅಗ್ರವತೀ ಯಾಜ್ಯಾನುವಾಕ್ಯೇ | 'ಅಗ್ರ'* ಎಂಬ ಪದಗಳುಳ್ಳ ಋಕ್ಕುಗಳನ್ನು ಯಾಜ್ಯಾನುವಾಕ್ಯೆಗಳನ್ನಾಗಿ |
| ಅಕರೋತ್ | ಮಾಡಿದನು. |
| ಬುಧ್ನಾತ್ ಏವ ಏನಮ್ ಅಗ್ರಮ್ ಪರ್ಯಣಯತ್ | ಈ ಇಂದ್ರನನ್ನು ಬುಡದಿಂದ ತುದಿಗೆ ಏರುವಂತೆ (ಶ್ರೇಷ್ಠನಾಗುವಂತೆ) ಮಾಡಿದನು. |

**ಯಾಗವಿಧಿ; ಅದರ ಪ್ರಶಂಸೆ**

| | |
|---|---|
| ಯಃ ರಾಜನ್ಯಃ ಆನುಜಾವರಃ | ಯಾವ ರಾಜನು/ಕ್ಷತ್ರಿಯನು ಸಮಾನರಲ್ಲಿ ಕೀಳು |

---

ಆದ, ಏಕಾದಶಕಪಾಲದ್ರವ್ಯವುಳ್ಳ , ಇಂದ್ರದೇವತಾಕವಾದ ಯಾಗವನ್ನು ಮಾಡಿದನು. ದೇವತೆಗಳಲ್ಲಿ ಸರ್ವಶ್ರೇಷ್ಠನಾಗುವಂತೆ ಮಾಡಿದನು. ಬುಧ್ನ (ಮೂಲ), ಅಗ್ರ (ತುದಿ) ಎಂಬ ಪದಗಳಿಂದ ಕೂಡಿದ ಋಕ್ಕುಗಳನ್ನು ಯಾಜ್ಯಾ–ಪುರೋನುವಾಕ್ಯೆಗಳನ್ನಾಗಿ ಮಾಡಿದನು. ಇದರಿಂದ ಇಂದ್ರನು ಮೂಲದಿಂದ ಅಗ್ರವನ್ನು ಹೊಂದುವಂತೆ ಮಾಡಿದನು.

---

* ಬುಧ್ನಾದಗ್ರೇಣ......... ಚಕಾರ । — **ತೈ. ಸಂ. 2.3.14.**

ಸ್ಯಾತ್ತಸ್ಮಾ ಐತಮ್ಮೈಂದ್ರಮಾನುಷೂಕ

ಮೇಕಾದಶಕಪಾಲಂ ನಿರ್ವಪೇದಿಂದ್ರಮೇವ ಸ್ವೇನ

ಭಾಗಧೇಯೇನೋಪಧಾವತಿ

---

ಸ್ಯಾತ್ । ತಸ್ಮೈ । ಐತಮ್ । ಐಂದ್ರಮ್ । ಆನುಷೂಕಮಿತ್ಯಾನು–ಸೂಕಮ್ । ಏಕಾದಶ ಕಪಾಲಮಿತ್ಯೇಕಾದಶ–ಕಪಾಲಮ್ । ನಿರಿತಿ । ವಪೇತ್ । ಇಂದ್ರಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಸ್ಯಾತ್ | ಆಗಿರುತ್ತಾನೆಯೋ |
| ತಸ್ಮೈ ಐತಮ್ ಐಂದ್ರಮ್ ಆನುಷೂಕಮ್ ಏಕಾದಶಕಪಾಲಮ್ ನಿರ್ವಪೇತ್ | ಅವನಿಗಾಗಿ ಇಂದ್ರದೇವತಾಕವಾದ ಕೂಳೆ ಬೆಳೆಯಾಗಿರುವ ಭತ್ತದ ಅಕ್ಕಿಯ ಹಿಟ್ಟಿನ ಈ ಏಕಾದಶಕಪಾಲಪುರೋಡಾಶಯಾಗವನ್ನು ಮಾಡಬೇಕು. |
| ಇಂದ್ರಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದಿಂದ ಹವಿರ್ಭಾಗವನ್ನು ಕೊಟ್ಟು ಇಂದ್ರನನ್ನು ಸೇವಿಸುತ್ತಾನೆ. |

---

ಯಾವ ರಾಜನು/ಕ್ಷತ್ರಿಯನು ಸಮಾನರಲ್ಲಿ ಅತಿ ಕನಿಷ್ಠನಾಗಿ ಇರುತ್ತಾನೆಯೋ ಅವನು ಇಂದ್ರದೇವತೆಗಾಗಿ ಬೆಳೆಯನ್ನು ಕೊಯ್ದ ಮೇಲೆ ಮತ್ತೆ ಕೂಳೆ ಬೆಳೆಯಾಗಿ ಬೆಳೆದ ಬತ್ತದ ಅಕ್ಕಿಯ ಹಿಟ್ಟಿನಿಂದ ಮಾಡಿದ ಏಕಾದಶಕಪಾಲಪುರೋಡಾಶದ್ರವ್ಯದ ಯಾಗವನ್ನು ಮಾಡಬೇಕು. ಇದರಿಂದ ಇಂದ್ರನು ತನ್ನ ಭಾಗವನ್ನು ಪಡೆದು ಸುಪ್ರೀತನಾಗುತ್ತಾನೆ.

ಸ ಏವೈನಮಗ್ರಗ್ಂ ಸಮಾನಾನಾಂ ಪರಿಣಯತಿ

ಬುಧ್ನವತೀ ಅಗ್ರವತೀ ಯಾಜ್ಯಾನುವಾಕ್ಯೇ ಭವತೋ

ಬುಧ್ನಾದೇವೈನಮಗ್ರಂ [ಬುಧ್ನಾದೇವೈನಮಗ್ರಮ್ (೩)

ಪರಿಣಯತ್ಯಾನುಷೂಕೋ] ಪರಿಣಯತ್ಯಾನುಷೂಕೋ

---

ಸಃ । ಏವ । ಏನಮ್ । ಅಗ್ರಮ್ । ಸಮಾನಾನಾಮ್ । ಪರೀತಿ । ನಯತಿ । **ಬುಧ್ನವತೀ ಇತಿ ಬುಧ್ನ–ವತೀ** । ಅಗ್ರವತೀ ಇತ್ಯಗ್ರ–ವತೀ । ಯಾಜ್ಯಾನುವಾಕ್ಯೇ ಇತಿ ಯಾಜ್ಯಾ–ಅನುವಾಕ್ಯೇ । ಭವತಃ । ಬುಧ್ನಾತ್ । ಏವ । ಏನಮ್ । ಅಗ್ರಮ್ । ಪರೀತಿ । ನಯತಿ । **ಆನುಷೂಕ ಇತ್ಯಾನು–ಸೂಕಃ** ।

---

| | |
|---|---|
| **ಸಃ ಏವ ಏನಮ್ ಸಮಾನಾನಾಮ್ ಅಗ್ರಮ್ ಪರಿಣಯತಿ** | ಅವನೇ ಈ ಯಜಮಾನನನ್ನು ಸಮಾನರ ನಡುವೆ ಶ್ರೇಷ್ಠನನ್ನಾಗಿ ಮಾಡುತ್ತಾನೆ. |

**ಯಾಜ್ಯಾ–ಪುರೋನುವಾಕ್ಯಾ ವಿಶೇಷವಿಧಿ; ಪ್ರಶಂಸೆ**

| | |
|---|---|
| ಬುಧ್ನವತೀ ಅಗ್ರವತೀ ಯಾಜ್ಯಾನುವಾಕ್ಯೇ ಭವತಃ ಬುಧ್ನಾತ್ ಏವ ಏನಮ್ ಅಗ್ರಮ್ ಪರಿಣಯತಿ | *'**ಬುಧ್ನ**' '**ಅಗ್ರ**'* ಎಂಬ ಪದಗಳುಳ್ಳ ಯಾಜ್ಯಾನುವಾಕ್ಯೆಗಳನ್ನು ಮಾಡಬೇಕು. ಅಧ್ವರ್ಯುವು ಇದರಿಂದ ಈ ಯಜಮಾನನನ್ನು ಮೂಲದಿಂದ ತುದಿಗೆ ಹೊಂದಿಸುತ್ತಾನೆ. |

---

ಸುಪ್ರೀತನಾಗುತ್ತಾನೆ. ಈ ಯಜಮಾನನನ್ನು ಸಮಾನರಲ್ಲಿ ಶ್ರೇಷ್ಠನನ್ನಾಗಿ ಮಾಡುತ್ತಾನೆ.

'**ಬುಧ್ನ**' '**ಅಗ್ರ**' ಪದಗಳನ್ನು ಹೊಂದಿರುವ ಯಾಜ್ಯಾನುವಾಕ್ಯೆಗಳನ್ನು ಉಪಯೋಗಿಸಬೇಕು.

---

* **ಪುಟ ೫೧೪**

# ಭವತ್ಯೇಷಾ ಹ್ಯೇತಸ್ಯ ದೇವತಾ ಯ ಆನುಜಾವರಃ
# ಸಮೃದ್ಧ್ಯೈ ಯೋ ಬ್ರಾಹ್ಮಣ ಆನುಜಾವರಃ ಸ್ಯಾತ್ತಸ್ಮಾ

---

ಭವತಿ । ಏಷಾ । ಹಿ । ಏತಸ್ಯ । ದೇವತಾ । ಯಃ । ಆನುಜಾವರ ಇತ್ಯಾನು–ಜಾವರಃ ।

ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ । **ಯಃ** । ಬ್ರಾಹ್ಮಣಃ । ಆನುಜಾವರ ಇತ್ಯಾನು–ಜಾವರಃ ।

ಸ್ಯಾತ್ । ತಸ್ಮೈ ।

---

**ಹವಿಸ್ಸಿನ ಮತ್ತು ದೇವತೆಯ ಪ್ರಶಂಸೆ**

| | |
|---|---|
| ಆನುಷೂಕಃ ಭವತಿ | ಕೂಳೆ ಬತ್ತವು ಹವಿಸ್ಸಿನ ಮೂಲದ್ರವ್ಯವಾಗಿದೆ. |
| ಏಷಾ ಹಿ ಏತಸ್ಯ ದೇವತಾ | ಈ ಯಾಗಕ್ಕೆ ಇದೇ (ಈ ಇಂದ್ರನೇ) ದೇವತೆ. |
| ಯಃ ಆನುಜಾವರಃ | ಮೊದಲು ದೇವತೆಗಳಲ್ಲಿ ಕನಿಷ್ಠನಾಗಿದ್ದು [ಅನಂತರ ಶ್ರೇಷ್ಠನಾದವನು ಅವನು]. |
| ಸಮೃದ್ಧ್ಯೈ | ಹೀಗಾಗಿ ಅದು ಫಲಸಮೃದ್ಧಿಗೆ ಕಾರಣವಾಗುತ್ತದೆ. |

**ಬ್ರಾಹ್ಮಣನಿಗೆ ಬಾರ್ಹಸ್ಪತ್ಯಯಾಗವಿಧಿ; ಪ್ರಶಂಸೆ**

| | |
|---|---|
| ಯಃ ಬ್ರಾಹ್ಮಣಃ ಆನುಜಾವರಃ ಸ್ಯಾತ್ | ಯಾವ ಬ್ರಾಹ್ಮಣನು ಸಮಾನರಲ್ಲಿ ಅತಿ ಕನಿಷ್ಠನಾಗಿರುತ್ತಾನೆಯೋ |

---

ಇದರಿಂದ ಯಜಮಾನನನ್ನು ಬುಡದಿಂದ ತುದಿಗೆ ಹೊಂದಿಸಿ ದಂತಾಗುತ್ತದೆ.

ಈ ಯಾಗಕ್ಕೆ ಕೂಳೆಬತ್ತದ ಹವಿಸ್ಸು; ಮೊದಲು ದೇವತೆಗಳಲ್ಲಿ ಹೀನನಾಗಿ ಅನಂತರ ಶ್ರೇಷ್ಠನಾದ ಇಂದ್ರನೇ ದೇವತೆ. ಇವುಗಳು ಫಲಸಮೃದ್ಧಿಗೆ ಕಾರಣಗಳಾಗುತ್ತವೆ.

ಏತಂ ಬಾರ್ಹಸ್ಪತ್ಯಮಾನುಷೂಕಂ ಚರುಂ

ನಿರ್ವಪೇದ್ಬೃಹಸ್ಪತಿಮೇವ ಸ್ವೇನ ಭಾಗಧೇಯೇನೋಪ

ಧಾವತಿ ಸ ಏವೈನಮಗ್ರಗ್ಂ ಸಮಾನಾನಾಂ ಪರಿಣಯತಿ

---

ಏತಮ್ । ಬಾರ್ಹಸ್ಪತ್ಯಮ್ । ಆನುಷೂಕಮಿತ್ಯಾನು–ಸೂಕಮ್ । ಚರುಮ್ । ನಿರಿತಿ । ವಪೇತ್ । ಬೃಹಸ್ಪತಿಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ಸಃ । ಏವ । ಏನಮ್ । ಅಗ್ರಮ್ । ಸಮಾನಾನಾಮ್ । ಪರೀತಿ । ನಯತಿ ।

---

| | |
|---|---|
| ತಸ್ಮೈ ಏತಮ್ ಬಾರ್ಹಸ್ಪತ್ಯಮ್ ಆನುಷೂಕಮ್ ಚರುಮ್ ನಿರ್ವಪೇತ್ | ಅವನಿಗಾಗಿ ಬೃಹಸ್ಪತಿದೇವತಾಕವಾದ, ಕೂಳೆ ಬತ್ತದ ಅಕ್ಕಿಯ ಚರುವುಳ್ಳ ಈ ಯಾಗವನ್ನು ಅನುಷ್ಠಿಸಬೇಕು. |
| ಬೃಹಸ್ಪತಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಬೃಹಸ್ಪತಿದೇವತೆಗೆ ಸಲ್ಲಬೇಕಾದ ಭಾಗವನ್ನು ಕೊಟ್ಟು ಸೇವಿಸುತ್ತಾನೆ. |
| ಸಃ ಏವ ಏನಮ್ ಸಮಾನಾನಾಮ್ ಅಗ್ರಮ್ ಪರಿಣಯತಿ | ಆ ಬೃಹಸ್ಪತಿಯೇ ಈ ಯಜಮಾನನನ್ನೂ ಸಮಾನರ ಮಧ್ಯದಲ್ಲಿ ಶ್ರೇಷ್ಠತೆಯನ್ನೂ ಹೊಂದಿಸುತ್ತಾನೆ. |

---

ಸಮಾನರಲ್ಲಿ ಕನಿಷ್ಠನಾಗಿ ಶ್ರೇಷ್ಠತೆಯನ್ನು ಬಯಸುವ ಬ್ರಾಹ್ಮಣನು ಬೃಹಸ್ಪತಿಗಾಗಿ ಆನುಷೂಕಚರುಯಾಗವನ್ನು ಮಾಡಬೇಕು. ಬೃಹಸ್ಪತಿಯು ತೃಪ್ತನಾಗಿ ಈ

ಬುಧ್ನವತೀ ಅಗ್ರವತೀ ಯಾಜ್ಯಾನುವಾಕ್ಯೇ ಭವತೋ

ಬುಧ್ನಾದೇವೈನಮಗ್ರಂ ಪರಿಣಯತ್ಯಾನುಷೂಕೋ

ಭವತ್ಯೇಷಾ ಹ್ಯೇತಸ್ಯ ದೇವತಾ

---

ಬುಧ್ನವತೀ ಇತಿ ಬುಧ್ನ–ವತೀ। ಅಗ್ರವತೀ ಇತ್ಯಗ್ರ–ವತೀ। ಯಾಜ್ಯಾನುವಾಕ್ಯೇ ಇತಿ ಯಾಜ್ಯಾ–ಅನುವಾಕ್ಯೇ। ಭವತಃ। ಬುಧ್ನಾತ್। ಏವ। ಏನಮ್। ಅಗ್ರಮ್। ಪರೀತಿ। ನಯತಿ। ಆನುಷೂಕ ಇತ್ಯಾನು–ಸೂಕಃ। ಭವತಿ। ಏಷಾ। ಹಿ। ಏತಸ್ಯ। ದೇವತಾ।

---

| | |
|---|---|
| ಬುಧ್ನವತೀ ಅಗ್ರವತೀ ಯಾಜ್ಯಾನುವಾಕ್ಯೇ ಭವತಃ | ಬುಧ್ನವತೀ ಮತ್ತು ಅಗ್ರವತಿಗಳಾದ ಯಾಜ್ಯಾನುವಾಕ್ಯಗಳು ಈ ಯಾಗದಲ್ಲಿ ಇರುತ್ತವೆ. |
| ಏನಮ್ ಬುಧ್ನಾತ್ ಅಗ್ರಮ್ ಪರಿಣಯತಿ ಏವ | ಬೃಹಸ್ಪತಿದೇವತೆಯು ಯಾಜ್ಯಾನುವಾಕ್ಯೆಗಳಿಂದ ಸುಪ್ರೀತನಾಗಿ ಯಜಮಾನನು ಶ್ರೇಷ್ಠನಾಗುವಂತೆ ಮಾಡುತ್ತಾನೆ. |
| ಆನುಷೂಕಃ ಭವತಿ | ಕೂಳೆ ಬತ್ತದ ಅಕ್ಕಿಯ ಚರುವು ಈ ಯಾಗದಲ್ಲಿರುತ್ತದೆ. |

---

ಯಜಮಾನನನ್ನು ಶ್ರೇಷ್ಠನನ್ನಾಗಿ ಮಾಡುತ್ತಾನೆ. ಯಾಜ್ಯಾ–ಪುರೋನುವಾಕ್ಯೆಗಳೂ ಅಗ್ರಪ್ರಾಪ್ತಿಗೆ ಸಾಧನವಾಗುತ್ತವೆ. ದ್ರವ್ಯ–ದೇವತೆಗಳೂ ಬೇಗನೆ ಫಲಸಮೃದ್ಧಿಗೆ ಕಾರಣವಾಗುತ್ತವೆ.

ಯ ಅನುಜಾವರಃ ಸಮೃಧ್ಯೈ ॥೨೪-4॥

[ಏವ ನಿರಗ್ರಮೇತಸ್ಯ ಚತ್ವಾರಿ ಚ ।]

---

ಯಃ । ಅನುಜಾವರ ಇತ್ಯನು-ಜಾವರಃ । ಸಮೃಧ್ಯಾ ಇತಿ ಸಮ್ - ಋಧ್ಯೈ ॥4॥

---

ಯಃ* ಅನುಜಾವರಃ
ಏಷಾ ಹಿ ಏತಸ್ಯ ದೇವತಾ
ಸಮೃಧ್ಯೈ

ಕೂಳೆ ಬತ್ತದ ಚರುವೂ, ಹೀನನಾಗಿ ಬಳಿಕ ಶ್ರೇಷ್ಠನಾದ *ಬೃಹಸ್ಪತಿಯೂ ದ್ರವ್ಯ-ದೇವತೆಗಳಾಗಿರುವುದು ಫಲಸಮೃದ್ಧಿಗೆ ಕಾರಣವಾಗುತ್ತದೆ.

* * *

## ಚತುರ್ಥಾನುವಾಕವಿಷಯಸಂಗ್ರಹ

**ಸ್ವರ್ಗಕಾಮೋ ದಾನಕಾಮಃ ಸಭಾಂ ಪ್ರಾಪ್ತುಂ ಯ ಇಚ್ಛತಿ ।**
**ರಾಜನ್ಯೋ ಬ್ರಾಹ್ಮಣಶ್ಚ ದ್ವೌ ಯೌ ಸ್ಯಾತಾಮನುಜಾವರೌ ॥**
**ತುರ್ಯೇಽನುವಾಕ ಏತೇಷಾಮಾಮ್ನಾತಾ ಇಷ್ಟಯಃ ಕ್ರಮಾತ್ ॥**

ಸ್ವರ್ಗವನ್ನು ಬಯಸುವವನಿಗೆ, ಬೇರೆಯ ಧನಿಕರು ದಾನ ಮಾಡುವಂತಾಗುವಂತೆ ಬಯಸುವವನಿಗೆ, ಕಾರ್ಯಕ್ಕಾಗಿ ಜನಸಮೂಹದ ಬಳಿ ಹೋಗಲು ಅಪೇಕ್ಷಿಸುವವನಿಗೆ, ತಾನು ಕನಿಷ್ಠನಾಗಿದ್ದು ಶ್ರೇಷ್ಠತೆಯನ್ನು ಇಚ್ಛಿಸುವ ಕ್ಷತ್ರಿಯ ಹಾಗೂ ಬ್ರಾಹ್ಮಣನಿಗೆ ಈ ನಾಲ್ಕನೆಯ ಅನುವಾಕದಲ್ಲಿ ಇಷ್ಟಿಗಳು ಹೇಳಲ್ಪಟ್ಟಿವೆ.

* * *

---

* ಇಲ್ಲಿ ಬೃಹಸ್ಪತಿಗೆ ಸಂಬಂಧಿಸಿದ ಉಪಾಖ್ಯಾನವು ಇಲ್ಲಿ ಶ್ರುತಿಯಲ್ಲಿ ಪಠಿತವಾಗಿಲ್ಲ, ಆದರೆ 'ಅನುಜಾವರ' ಎಂಬ ಶಬ್ದವಿರುವುದರಿಂದ ಹಾಗೆ ಊಹಿಸಿಕೊಳ್ಳಬಹುದು.

## || ಪಂಚಮೋಽನುವಾಕಃ ||

ಪ್ರಜಾಪತೇಸ್ತ್ರಯಸ್ತ್ರಿಗ್ಂಶದ್ದುಹಿತರ ಆಸನ್ತಾಃ

ಸೋಮಾಯ ರಾಜ್ಞೇಽದದಾತ್ತಾಸಾಗ್ಂ

ಪ್ರಜಾಪತೇರಿತಿ ಪ್ರಜಾ–ಪತೇಃ। ತ್ರಯಸ್ತ್ರಿಗ್ಂಶದಿತಿ ತ್ರಯಃ–ತ್ರಿಗ್ಂಶತ್। ದುಹಿತರಃ। ಆಸನ್। ತಾಃ। ಸೋಮಾಯ। ರಾಜ್ಞೇ। ಅದದಾತ್।

**ಈ ಐದನೆಯ ಅನುವಾಕದಲ್ಲಿ ಕ್ಷಯರೋಗಪೀಡಿತನಿಗೆ ರೋಗಪರಿಹಾರಾರ್ಥವಾಗಿ ಇಷ್ಟಿಯು ಹೇಳಲ್ಪಟ್ಟಿದೆ.**

| | |
|---|---|
| **ಪ್ರಜಾಪತೇಃ ತ್ರಯಸ್ತ್ರಿಗ್ಂಶತ್ ದುಹಿತರಃ ಆಸನ್** | ಪ್ರಜಾಪತಿ ಬ್ರಹ್ಮನಿಗೆ *ಮೂವತ್ತಮೂರು (33) ಹೆಣ್ಣು ಮಕ್ಕಳಿದ್ದರು. |
| **ತಾಃ ಸೋಮಾಯ ರಾಜ್ಞೇ ಅದದಾತ್** | ಆ ಹೆಣ್ಣುಮಕ್ಕಳನ್ನು ರಾಜನಾದ ಸೋಮನಿಗೆ ಕೊಟ್ಟನು. |

ಪ್ರಜಾಪತಿಬ್ರಹ್ಮನಿಗೆ ಮೂವತ್ತುಮೂರು ಹೆಣ್ಣುಮಕ್ಕಳಿದ್ದರು. ಆ ಹೆಣ್ಣುಮಕ್ಕಳನ್ನು ರಾಜನಾದ ಸೋಮನಿಗೆ ಕೊಟ್ಟನು. ಆ ಸೋಮನು ರೋಹಿಣಿಯೊಡನೆ ಮಾತ್ರ

---

* ಅಶ್ವಿನೀ ಮುಂತಾದ ಪ್ರಸಿದ್ಧ ಇಪ್ಪತ್ತೇಳು ನಕ್ಷತ್ರಗಳಲ್ಲಿ ಕೃತ್ತಿಕೆಯನ್ನು ಬಿಟ್ಟರೆ ಇಪ್ಪತ್ತಾರು ಆಗುತ್ತವೆ. ಇವುಗಳ ಅಭಿಮಾನಿದೇವತೆಗಳು ಹಾಗೂ **ಅಂಬಾ, ದುಲಾ, ನಿತತ್ನಿ, ಅಭ್ರಯಂತೀ, ಮೇಘಯಂತೀ, ವರ್ಷಯಂತೀ, ಚುಪುಣೀಕಾ** – ಈ ಏಳು ಕೃತ್ತಿಕೆಗಳು. ಹೀಗೆ 33. ಇದು ಒಂದು ಪಕ್ಷ.

* ಇಪ್ಪತ್ತೇಳು ನಕ್ಷತ್ರಾಭಿಮಾನಿದೇವತೆಗಳು. ಋಧ್ಯಾದಿಗಳು ಆರು. ಹೀಗೆ 33. ಇದು ಒಂದು ಮತ.

* ಕೃತ್ತಿಕೆಗಳು 6. ಅಭಿಜಿತ್ ಸೇರಿಸಿ ಇಪ್ಪತ್ತೇಳು ನಕ್ಷತ್ರಾಭಿಮಾನಿದೇವತೆಗಳು. ಹೀಗೆ 33. ಇದು ಒಂದು ಮತ. (26+7, 27+6, 6+1+26).

ರೋಹಿಣೀಮುಪೈತ್ತಾ ಈರ್ಷ್ಯಂತೀಃ ಪುನರಗಚ್ಛನ್ತಾ

ಅನ್ವೈತ್ತಾಃ ಪುನರಯಾಚತ ತಾ ಅಸ್ಮೈ ನ

ಪುನರದದಾತ್ಸೋಽಬ್ರವೀದೃತಮಮೀಷ್ವ ಯಥಾ ಸಮಾವಚ್ಛ

---

ತಾಸಾಮ್ । ರೋಹಿಣೀಮ್ । ಉಪೇತಿ । ಐತ್ । ತಾಃ । ಈರ್ಷ್ಯಂತೀಃ । ಪುನಃ । ಅಗಚ್ಛನ್ನ್ । ತಾಃ । ಅನ್ವಿತಿ । ಐತ್ । ತಾಃ । ಪುನಃ । ಅಯಾಚತ । ತಾಃ । ಅಸ್ಮೈ । ನ । ಪುನಃ । ಅದದಾತ್ । ಸಃ । ಅಬ್ರವೀತ್ । ಋತಮ್ । ಅಮೀಷ್ವ । ಯಥಾ । ಸಮಾವಚ್ಛ ಇತಿ ಸಮಾವತ್–ಶಃ ।

---

| | |
|---|---|
| ತಾಸಾಮ್ ರೋಹಿಣೀಮ್ ಉಪೈತ್ | ಸೋಮನು ಅವರೆಲ್ಲರ ಪೈಕಿ ರೋಹಿಣಿಯೊಡನೆ ಸೇರುತ್ತಿದ್ದನು. |
| ತಾಃ | ಆ ಉಳಿದ ಹೆಣ್ಣುಮಕ್ಕಳು |
| ಈರ್ಷ್ಯಂತೀಃ ಪುನಃ ಅಗಚ್ಛನ್ನ್ | ಅಸೂಯೆ ಹೊಂದಿದವರಾಗಿ ಪ್ರಜಾಪತಿಯ ಬಳಿಗೇ ಮತ್ತೆ ಬಂದರು. |
| ತಾಃ ಅನ್ವೈತ್ | ಸೋಮನೂ ಅವರನ್ನು ಅನುಸರಿಸಿ ಬಂದನು. |
| ತಾಃ ಪುನಃ ಅಯಾಚತ | ಅವರನ್ನು ಮತ್ತೆ ಕಳುಹಿಸಬೇಕೆಂದು ಕೇಳಿದನು. |
| ಅಸ್ಮೈ ತಾಃ ಪುನಃ ನ ಅದದಾತ್ | [ಆದರೆ ಪ್ರಜಾಪತಿಯು] ಮತ್ತೆ ಆ ಹೆಣ್ಣು ಮಕ್ಕಳನ್ನು ಕೊಡಲಿಲ್ಲ. |

## ಮುಂದುವರಿದ ಉಪಾಖ್ಯಾನ

| | |
|---|---|
| ಸಃ | ಆ ಪ್ರಜಾಪತಿಯು |
| ಯಥಾ ಸಮಾವಚ್ಛಃ | 'ಈ ಹೆಣ್ಣುಮಕ್ಕಳೆಲ್ಲರನ್ನೂ ಸಮಾನವಾಗಿ |

---

ಸೇರುತ್ತಿದ್ದುದರಿಂದ ಉಳಿದ ಹೆಣ್ಣುಮಕ್ಕಳು ಪ್ರಜಾಪತಿಯ ಬಳಿಗೆ ಹಿಂದಿರುಗಿ ಬಂದರು. ಅವರನ್ನು ಅನುಸರಿಸಿ ಬಂದ ಸೋಮನು ಮತ್ತೆ ಅವರನ್ನು ಕಳಿಸಲು ಕೇಳಿದನು.

ಉಪ್ಪೈಷ್ಯಾಮ್ಯಥ ತೇ ಪುನರ್ದಾಸ್ಯಾಮೀತಿ

ಸ ಋತಮಾಮೀತ್ತಾ ಅಸ್ಮೈ ಪುನರದದಾತ್ತಾಸಾಗ್ಂ

ರೋಹಿಣೀಮೇವೋಪ್ರೈತ್ತಂ

---

ಉಪ್ಪೈಷ್ಯಾಮೀತ್ಯುಪ–ಏಷ್ಯಾಮಿ। ಅಥ। ತೇ। ಪುನಃ। ದಾಸ್ಯಾಮಿ। ಇತಿ। ಸಃ। ಋತಮ್।

ಆಮೀತ್। ತಾಃ। ಅಸ್ಮೈ। ಪುನಃ। ಅದದಾತ್। ತಾಸಾಮ್। ರೋಹಿಣೀಮ್। ಏವ।

ಉಪೇತಿ। ಐತ್। ತಮ್।

---

| | |
|---|---|
| ಉಪ್ಪೈಷ್ಯಾಮಿ ಋತಮ್ ಆಮೀತ್ವ | ನೋಡಿಕೊಳ್ಳುವೆನು' ಎಂದು ಪ್ರಮಾಣ ಮಾಡು. |
| ಅಥ ತೇ ಪುನಃ ದಾಸ್ಯಾಮಿ [ಇತಿ] ಅಬ್ರವೀತ್ | ಅನಂತರ ನಿನಗೆ ಮತ್ತೆ ಅವರನ್ನು ಕೊಡುತ್ತೇನೆ' ಎಂದು ಹೇಳಿದನು. |
| ಸಃ ಋತಮ್ ಆಮೀತ್ | ಆ ಸೋಮನು ಹಾಗೆಯೇ ಪ್ರತಿಜ್ಞೆ ಮಾಡಿದನು. |
| ತಾಃ ಅಸ್ಮೈ ಪುನಃ ಅದದಾತ್ | ಬಳಿಕ ಪ್ರಜಾಪತಿಯು ಸೋಮನಿಗೆ ಅವರೆಲ್ಲರನ್ನೂ ಮತ್ತೆ ಕೊಟ್ಟನು. |

**ಸೋಮನಿಗೆ ಕ್ಷಯರೋಗಪ್ರಾಪ್ತಿ**

| | |
|---|---|
| ತಾಸಾಮ್ ರೋಹಿಣೀಮ್ ಏವ ಉಪ ಐತ್ ತಮ್ | ಆದರೆ ಸೋಮನು ಮೊದಲಿನಂತೆ ರೋಹಿಣಿಯನ್ನೇ ಸೇರುತ್ತಿದ್ದನು. |

---

ಎಲ್ಲರನ್ನೂ ಸಮಾನವಾಗಿ ಕಾಣುವೆನೆಂದು ಪ್ರತಿಜ್ಞೆ ಮಾಡಿದರೆ ಪುನಃ ಕಳುಹಿಸುವುದಾಗಿ ಪ್ರಜಾಪತಿಯು ಹೇಳಿದನು. ಅದರಂತೆ ಸೋಮನು ಪ್ರತಿಜ್ಞೆ ಮಾಡಿದನು. ಪ್ರಜಾಪತಿಯು ಅವರೆಲ್ಲರನ್ನೂ ಮತ್ತೆ ಸೋಮನಿಗೆ ಕೊಟ್ಟನು. ಅವನನ್ನು

[ರೋಹಿಣೇಮೋವೋಪ (೧) ಐತ್ತಂ] ಯಕ್ಷ್ಮ

ಆರ್ಚ್ಛದ್ರಾಜಾನಂ ಯಕ್ಷ್ಮ ಆರದಿತಿ ತದ್ರಾಜ

ಯಕ್ಷ್ಮಸ್ಯ ಜನ್ಮ ಯತ್ಪಾಪೀಯಾನಭವತ್ತತ್ಪಾಪಯಕ್ಷ್ಮಸ್ಯ

---

ಯಕ್ಷ್ಮಃ। ಆರ್ಚ್ಛತ್। ರಾಜಾನಮ್। ಯಕ್ಷ್ಮಃ। ಆರತ್। ಇತಿ। ತತ್। ರಾಜಯಕ್ಷ್ಮಸ್ಯೇತಿ ರಾಜ–ಯಕ್ಷ್ಮಸ್ಯ। ಜನ್ಮ। ಯತ್। ಪಾಪೀಯಾನ್। ಅಭವತ್। ತತ್। ಪಾಪಯಕ್ಷ್ಮಸ್ಯೇತಿ ಪಾಪ–ಯಕ್ಷ್ಮಸ್ಯ।

---

| | |
|---|---|
| ಯಕ್ಷ್ಮ ಆರ್ಚ್ಛತ್ | ಕ್ಷಯರೋಗವು ಪೀಡಿಸಿತು. |
| ರಾಜಾನಮ್ ಯಕ್ಷ್ಮಃ ಆರತ್ ಇತಿ ತತ್ ರಾಜಯಕ್ಷ್ಮಸ್ಯ ಜನ್ಮ | ಸೋಮರಾಜನಿಗೆ ಕ್ಷಯರೋಗವು ಪ್ರಾಪ್ತವಾದುದರಿಂದ, ಈ ರೋಗಕ್ಕೆ *ರಾಜಯಕ್ಷ್ಮವೆಂದು ಹೆಸರಾಯಿತು. |
| ಯತ್ ಪಾಪೀಯಾನ್ ಅಭವತ್, ತತ್ ಪಾಪಯಕ್ಷ್ಮಸ್ಯ (ಜನ್ಮ) | ಯಾವ ಕಾರಣದಿಂದ ರೋಗಗಳಲ್ಲಿ ಅತ್ಯಂತ ಪೀಡಾಕರವಾಯಿತೋ ಅದರಿಂದ *ಪಾಪ ಯಕ್ಷ್ಮವೆಂದು ಪರಿಗಣಿಸಲ್ಪಟ್ಟಿತು. |

---

ಆ ಸೋಮನು ಪ್ರತಿಜ್ಞೆಯನ್ನು ಮಾಡಿ ಮತ್ತೆ ಅವರನ್ನು ಪಡೆದರೂ ಮೊದಲಿನಂತೆ ರೋಹಿಣಿಯನ್ನೇ ಸೇರುತ್ತಿದ್ದನು. ಈ ಸತ್ಯೋಲ್ಲಂಘನೆಯ ದೋಷದಿಂದ ಅವನನ್ನು ಕ್ಷಯರೋಗವು ಸೇರಿ ಪೀಡಿಸಿತು. ರಾಜನಾದ ಸೋಮನಿಗೆ ಬಂದುದರಿಂದ

---

* ರಾಜಯಕ್ಷ್ಮ, ಪಾಪಯಕ್ಷ್ಮ, ಜಾಯೇನ್ಯ – ಈ ಮೂರು ಕ್ಷಯರೋಗಭೇದಗಳು.

ಯಜ್ಜಾಯಾಭ್ಯೋಽವಿಂದತ್ತಜ್ಜಾಯೇನ್ಯಸ್ಯ ಯ

ಏವಮೇತೇಷಾಂ ಯಕ್ಷ್ಮಾಣಾಂ ಜನ್ಮ ವೇದ ನೈನಮೇತೇ

ಯಕ್ಷ್ಮಾ ವಿಂದಂತಿ

---

ಯತ್ । ಜಾಯಾಭ್ಯಃ । ಅವಿಂದತ್ । ತತ್ । ಜಾಯೇನ್ಯಸ್ಯ । ಯಃ । ಏವಮ್ । ಏತೇಷಾಮ್ । ಯಕ್ಷ್ಮಾಣಾಮ್ । ಜನ್ಮ । ವೇದ । ನ । ಏನಮ್ । ಏತೇ । ಯಕ್ಷ್ಮಾಃ । ವಿಂದಂತಿ ।

---

| | |
|---|---|
| ಯತ್ ಜಾಯಾಭ್ಯಃ ಅವಿಂದತ್ ತತ್ ಜಾಯೇನ್ಯಸ್ಯ (ಜನ್ಮ) | ಯಾವ ಕಾರಣದಿಂದ ಪತ್ನಿಯರ ನಿಮಿತ್ತದಿಂದ ಹುಟ್ಟಿತೋ ಅವರಿಂದ ಅದು 'ಜಾಯೇನ್ಯ' ಎನಿಸಿತು. |
| ಯಃ ಏವಮ್ ಏತೇಷಾಮ್ ಯಕ್ಷ್ಮಾಣಾಮ್ ಜನ್ಮ ವೇದ ಏನಮ್ ಏತೇ ಯಕ್ಷ್ಮಾಃ ನ ವಿಂದಂತಿ | ಯಾವನು ಈ ರೋಗಗಳ ಜನ್ಮವೃತ್ತಾಂತವನ್ನು ಅರಿತಿರುವನೋ ಅವನನ್ನು ಈ ರೋಗಗಳು ಹೊಂದಿ ಪೀಡಿಸುವುದಿಲ್ಲ. |

---

ಕ್ಷಯರೋಗವು **'ರಾಜಯಕ್ಷ್ಮ'**ವೆಂದು ಪ್ರಸಿದ್ಧವಾಯಿತು. ರೋಗಗಳಲ್ಲೆಲ್ಲಾ ಅತ್ಯಂತ ಪೀಡಾಕರವಾದುದರಿಂದ **'ಪಾಪಯಕ್ಷ್ಮ'**ವೆಂದು ಪ್ರಸಿದ್ಧಿಯನ್ನು ಪಡೆಯಿತು. ಜಾಯೆಯರ (ಪತ್ನಿ) ನಿಮಿತ್ತದಿಂದ ಉಂಟಾದುದರಿಂದ ಇದು **'ಜಾಯೇನ್ಯ'**ವೆಂಬ ಹೆಸರನ್ನೂ ಪಡೆಯಿತು. ಯಾವನು ಈ ರೋಗಗಳ ಹುಟ್ಟಿನ ವಿಷಯವನ್ನು ತಿಳಿದಿರುತ್ತಾನೆಯೋ ಅವನಿಗೆ ಈ ರೋಗಗಳು ಬರುವುದಿಲ್ಲ*

---

* ಶ್ರುತಿಯಲ್ಲಿ ಈ ರೀತಿ ಜ್ಞಾನದ ಪ್ರಶಂಸಾವಾಕ್ಯಗಳು ಬರುತ್ತವೆ. ಅರಿತವನು ಇಂತಹ ಜ್ಞಾನದಿಂದ ತಪ್ಪನ್ನು ಎಸಗುವುದಿಲ್ಲ, ಒಳ್ಳೆಯ ರೀತಿಯಲ್ಲಿಯೆ ನಡೆದುಕೊಳ್ಳುತ್ತಾನೆ' ಎಂಬುದು ತಾತ್ಪರ್ಯ. ಹೀಗೆ ಇದು ಜ್ಞಾನಪ್ರಶಂಸಾಮಾತ್ರವೆಂದು ಮೀಮಾಂಸಾಶಾಸ್ತ್ರದ ಸಿದ್ಧಾಂತವಿದೆ.

ಸ ಏತಾ ಏವ ನಮಸ್ಯನ್ನುಪಾಧಾವತ್ತಾ ಅಬ್ರುವನ್ವರಂ

ವೃಣಾಮಹೈ ಸಮಾವಚ್ಛ ಏವ ನ ಉಪಾಯ ಇತಿ ತಸ್ಮಾ

ಏತಮಾದಿತ್ಯಂ [ಏತಮ್ (೨) ಆದಿತ್ಯಂ] ಚರುಂ

ನಿರವಪನ್ತೇನೈವೈನಂ

---

**ಸಃ** । ಏತಾಃ । ಏವ । ನಮಸ್ಯನ್ನ್ । ಉಪೇತಿ । ಅಧಾವತ್ । ತಾಃ । ಅಬ್ರುವನ್ನ್ । ವರಮ್ । ವೃಣಾಮಹೈ । ಸಮಾವಚ್ಛ ಇತಿ ಸಮಾವತ್–ಶಃ । ಏವ । ನಃ । ಉಪೇತಿ । ಅಯಃ । ಇತಿ । ತಸ್ಮೈ । ಏತಮ್ । ಆದಿತ್ಯಮ್ । ಚರುಮ್ । ನಿರಿತಿ । ಅವಪನ್ನ್ । ತೇನ । ಏವ । ಏನಮ್ ।

---

**ಈ ರೋಗಪರಿಹಾರದ ವಿವರಣೆ**

| | |
|---|---|
| ಸಃ ಏತಾಃ ಏವ ನಮಸ್ಯನ್ನ್ ಉಪಾಧಾವತ್ | ಆ ಸೋಮರಾಜನು ಈ ನಕ್ಷತ್ರದೇವತೆಗಳಾದ ಪತ್ನಿಯರನ್ನೇ ಸಮಾಧಾನ ಪಡಿಸುತ್ತಾ ಅವರ ಬಳಿ ಹೋದನು. |
| ತಾಃ ಸಮಾವಚ್ಛಃ ಏವ ನಃ ಉಪ ಅಯಃ ಇತಿ ವರಮ್ ವೃಣಾಮಹೈ [ಇತಿ] ಅಬ್ರುವನ್ನ್ | ಅವರು 'ನಮ್ಮನ್ನು ಸಮಾನರಾಗಿಯೇ ನೋಡಿಕೊಳ್ಳಬೇಕು' ಎಂಬ ವರವನ್ನು ಕೇಳುತ್ತೇವೆ ಎಂದರು. [ಸೋಮನು ಅದನ್ನು ಅಂಗೀಕರಿಸಿದನು]. |
| ತಸ್ಮೈ ಏತಮ್ ಆದಿತ್ಯಮ್ ಚರುಮ್ ನಿರವಪನ್ನ್ | ಆ ಸೋಮನಿಗಾಗಿ ಆದಿತ್ಯದೇವತಾಕವಾದ ಚರುದ್ರವ್ಯಯಾಗವನ್ನು ಅನುಷ್ಠಿಸಿದರು. |
| ತೇನ ಏವ ಏನಮ್ ಪಾಪಾತ್ ಸ್ರಾಮಾತ್ ಅಮುಂಚನ್ನ್ | ಈ ಯಾಗದಿಂದಲೇ ಸೋಮನನ್ನು ಆ ಭಯಂಕರಕ್ಷಯರೋಗದಿಂದ ಬಿಡುಗಡೆ ಮಾಡಿದರು. |

---

ರೋಗಪರಿಹಾರಕ್ಕಾಗಿ ಸೋಮನು ಪತ್ನಿಯರ ಬಳಿಗೇ ಹೋದನು. ಅವರು ತಮ್ಮೆಲ್ಲರನ್ನೂ ಸಮಾನವಾಗಿ ನೋಡಿಕೊಳ್ಳುವಂತೆ ಪ್ರತಿಜ್ಞೆ ಮಾಡುವ ವರವನ್ನು

ಪಾಪಾತ್ಸ್ರಾಮಾದಮುಂಚನ್ ಯಃ ಪಾಪಯಕ್ಷ್ಮಗೃಹೀತಃ

ಸ್ಯಾತ್ತಸ್ಮಾ ಏತಮಾದಿತ್ಯಂ ಚರುಂ ನಿರ್ವಪೇದಾದಿತ್ಯಾನೇವ

ಸ್ವೇನ ಭಾಗಧೇಯೇನೋಪಧಾವತಿ

---

ಪಾಪಾತ್ । ಸ್ರಾಮಾತ್ । ಅಮುಂಚನ್ನ್ । ಯಃ । ಪಾಪಯಕ್ಷ್ಮಗೃಹೀತ ಇತಿ ಪಾಪ ಯಕ್ಷ್ಮ–ಗೃಹೀತಃ । ಸ್ಯಾತ್ । ತಸ್ಮೈ । ಏತಮ್ । ಆದಿತ್ಯಮ್ । ಚರುಮ್ । ನಿರಿತಿ । ವಪೇತ್ । ಆದಿತ್ಯಾನ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

**ಯಾಗವಿಧಿ; ಪ್ರಶಂಸೆ**

| | |
|---|---|
| ಯಃ ಪಾಪಯಕ್ಷ್ಮಗೃಹೀತಃ ಸ್ಯಾತ್ | ಯಾವನು ಕ್ಷಯರೋಗಪೀಡಿತನಾಗಿರುತ್ತಾನೆಯೋ |
| ತಸ್ಮೈ ಏತಮ್ ಆದಿತ್ಯಮ್ ಚರುಮ್ ನಿರ್ವಪೇತ್ | ಅವನಿಗಾಗಿ ಈ ಆದಿತ್ಯಚರುಯಾಗವನ್ನು ಮಾಡಬೇಕು./ಅವನು ಈ ಯಾಗವನ್ನು ಅನುಷ್ಠಿಸಬೇಕು. |
| ಆದಿತ್ಯಾನ್ ಏವ ಸ್ವೇನ ಭಾಗಧೇಯೇನ ಉಪಧಾವತಿ | [ಯಜಮಾನನು ಈ ಯಾಗದಿಂದ] ಆದಿತ್ಯರಿಗೆ ತಕ್ಕ ಭಾಗವನ್ನಿತ್ತು ಸೇವಿಸುತ್ತಾನೆ. |

---

ಕೇಳಿದರು. ಸೋಮನು ಸಮ್ಮತಿಸಿದನು. ಬಳಿಕ ಸೋಮನ ಪತ್ನಿಯರು ಸೋಮನಿಗಾಗಿ ಆದಿತ್ಯಚರುಯಾಗವನ್ನು ಮಾಡಿಸಿದರು. ಯಾಗದ ಪ್ರಭಾವದಿಂದ ಸೋಮನನ್ನು ಪಾಪದಿಂದಲೂ, ಪಾಪದಿಂದ ಉಂಟಾದ ಕ್ಷಯರೋಗದಿಂದಲೂ ಮುಕ್ತನನ್ನಾಗಿ ಮಾಡಿದರು.

ಕ್ಷಯರೋಗಪೀಡಿತನಾದವನು ಈ *ಆದಿತ್ಯಚರುಯಾಗವನ್ನು ಅನುಷ್ಠಿಸಬೇಕು.

---

* ಕೆಲವೆಡೆ ಆದಿತ್ಯಶಬ್ದವು ಅದಿತಿದೇವತಾಕವೆಂಬ ಅರ್ಥವನ್ನು ಕೊಡುತ್ತದೆ. ಇಲ್ಲಿ ಅರ್ಥವಾದಕ್ಕೆ ಅನುಸಾರವಾಗಿ ಆದಿತ್ಯದೇವತಾಕವೆಂಬ ಅರ್ಥವನ್ನು ಕೊಡುತ್ತದೆ.

ತ ಏವೈನಂ ಪಾಪಾತ್ಸ್ರಾಮಾನ್ಮುಂಚಂತ್ಯಮಾವಾಸ್ಯಾಯಾಂ

ನಿರ್ವಪೇದಮುಮೇವೈನಮಾಪ್ಯಾಯಮಾನ

ಮನ್ವಾಪ್ಯಾಯಯತಿ

---

ತೇ । ಏವ । ಏನಮ್ । ಪಾಪಾತ್ । ಸ್ರಾಮಾತ್ । ಮುಂಚಂತಿ । **ಅಮಾವಾಸ್ಯಾಯಾಮಿತ್ಯಮಾ–ವಾಸ್ಯಾಯಾಮ್** । ನಿರಿತಿ । ವಪೇತ್ । ಅಮುಮ್ । ಏವ । ಏನಮ್ । ಆಪ್ಯಾಯಮಾನಮಿತ್ಯಾ–ಪ್ಯಾಯಮಾನಮ್ । ಅನು । ಏತಿ । ಪ್ಯಾಯಯತಿ ।

| | |
|---|---|
| ತೇ ಏನಮ್ ಪಾಪಾತ್ ಸ್ರಾಮಾತ್ ಮುಂಚಂತಿ ಏವ | ಆ ಆದಿತ್ಯರು ಈ ಯಜಮಾನನನ್ನು ಪಾಪದ ಫಲವಾಗಿ ಬಂದಿರುವ ಕ್ಷಯರೋಗದಿಂದ ಬಿಡಿಸುತ್ತಾರೆ. |

**ಅಮಾವಾಸ್ಯಾಕಾಲವಿಧಾನ; ಫಲ**

| | |
|---|---|
| ಅಮಾವಾಸ್ಯಾಯಾಮ್ | ಅಮಾವಾಸ್ಯೆಯಲ್ಲಿ |
| ನಿರ್ವಪೇತ್ | ಈ ಯಾಗವನ್ನು ಅನುಷ್ಠಿಸಬೇಕು. |
| ಅಮುಮ್ ಏನಮ್ ಆಪ್ಯಾಯಮಾನಮ್ ಏವ ಅನು ಆಪ್ಯಾಯಯತಿ | ಈ ಯಾಗವು ಶುಕ್ಲಪಕ್ಷದಲ್ಲಿ ತುಂಬಿಕೊಳ್ಳುವ ಚಂದ್ರನಂತೆಯೇ ಈ ಯಜಮಾನನನ್ನು ಕ್ಷಯರೋಗಮುಕ್ತನಾಗಿ ದಿನದಿಂದ ದಿನವೂ ವರ್ಧಿಸುವಂತೆ ಮಾಡುತ್ತದೆ. |

---

ಇದರಿಂದ ಆದಿತ್ಯರು ತಮ್ಮ ಭಾಗವನ್ನು ಪಡೆದು ಸುಪ್ರೀತರಾಗುತ್ತಾರೆ. ಅವರೇ ಈ ಯಜಮಾನನನ್ನು ರೋಗದಿಂದಲೂ ಪಾಪದಿಂದಲೂ ವಿಮುಕ್ತನಾಗುವಂತೆ ಮಾಡುತ್ತಾರೆ.

ಇಷ್ಟಿಗಳನ್ನು ಪೌರ್ಣಮಾಸೀ ಅಥವಾ ಅಮಾವಾಸ್ಯೆಯಲ್ಲಿ ಅನುಷ್ಠಿಸಬಹುದು. ಆದರೆ ಈ ಆದಿತ್ಯೇಷ್ಟಿಯನ್ನು ಅಮಾವಾಸ್ಯೆಯಲ್ಲಿ ಅನುಷ್ಠಿಸಬೇಕು. ಶುಕ್ಲಪಕ್ಷದಲ್ಲಿ ಚಂದ್ರನು ದಿನದಿನವೂ ವೃದ್ಧಿ ಹೊಂದುವಂತೆ ಈ ಯಾಗದ ಪ್ರಭಾವದಿಂದ ಯಜಮಾನನು ರೋಗಮುಕ್ತನಾಗುತ್ತಾ ದಿನದಿನವೂ ಅಭಿವೃದ್ಧಿಯನ್ನು ಹೊಂದುವಂತೆ ಆಗುತ್ತದೆ.

नवोनवो भवति जायमान इति

पुरोनुवाक्या भवत्यायुरेवास्मिन्तया दधाति

यमादित्या अग्ंशुमाप्याययन्तीति

---

नवोनव इति नवः – नवः। भवति। जायमानः। इति। पुरोनुवाक्येति पुरः – अनुवाक्या। भवति। आयुः। एव। अस्मिन्न्। तया। दधाति। यम्। आदित्याः। अग्ंशुम्। आप्याययन्तीत्या–प्याययन्ति। इति।

---

**ಪುರೋನುವಾಕ್ಯಾವಿಧಿ; ಆದರ ಫಲ**

| | |
|---|---|
| ನವೋನವೋ ಭವತಿ ಜಾಯಮಾನಃ ಇತಿ ಪುರೋನುವಾಕ್ಯಾ ಭವತಿ ತಯಾ ಅಸ್ಮಿನ್ ಆಯುಃ ಏವ ದಧಾತಿ | *'**ನವೋನವಃ**' ಎಂಬ ಋಕ್ಕು ಪುರೋನುವಾಕ್ಯೆಯಾಗುತ್ತದೆ. ಹೋತೃವು ಆ ಋಕ್ಕಿನಿಂದ ಈ ಯಜಮಾನನಲ್ಲಿ ದೀರ್ಘಾಯುಸ್ಸನ್ನು ಉಂಟುಮಾಡುತ್ತಾನೆ. |

**ಯಾಜ್ಯಾವಿಧಿ; ಫಲ**

| | |
|---|---|
| ಯಮ್ ಆದಿತ್ಯಾಃ ಅಗ್ಂಶುಮ್ ಆಪ್ಯಾಯಯಂತಿ ಇತಿ | ಆದಿತ್ಯರು ಯಾವ ಚಂದ್ರನ ಕಲೆಯನ್ನು ವೃದ್ಧಿಗೊಳಿಸುತ್ತಾರೆಯೋ ಎಂದು ಹೇಳುವ *'**ಯಮಾದಿತ್ಯಾಃ**' ಎಂಬ |

---

ಈ ಯಾಗದಲ್ಲಿ '**ನವೋ ನವಃ**' ಎಂಬ ಋಕ್ಕು ಪುರೋನುವಾಕ್ಯೆಯಾಗುತ್ತದೆ. ಆ ಋಕ್ಕಿನಲ್ಲಿ '**ಚಂದ್ರಮಾಸ್ತಿರತಿ ದೀರ್ಘಮಾಯುಃ**' ಎಂದಿದೆ. ಚಂದ್ರನು ದೀರ್ಘಾಯುಸ್ಸನ್ನು ಕೊಡುತ್ತಾನೆ ಎಂದು ಆದರ ಅರ್ಥ. ಈ ಮಂತ್ರಾನುಸಾರವಾಗಿ ಯಜಮಾನನಲ್ಲಿ ದೀರ್ಘಾಯುಸ್ಸು ಉಂಟಾಗುತ್ತದೆ.

---

* **ತೈ. ಸಂ. 2.4.14**

ಯಾಜ್ಯೈ ವೈನಮೇತಯಾ ಪ್ಯಾಯಯತಿ ॥೨೬–5॥

[ಏವೋಪ್ಯೈತ್ರವುಸ್ಕಿನ್ತ್ರಯೋದಶ ಚ ।]

---

ಯಾಜ್ಯಾ । ಏತಿ । ಏವ । ಏನಮ್ । ಏತಯಾ । ಪ್ಯಾಯಯತಿ ॥5॥

---

| | |
|---|---|
| ಯಾಜ್ಯಾ | ಋಕ್ಕು ಯಾಜ್ಯೆಯಾಗುತ್ತದೆ. |
| ಏನಮ್ ಏತಯಾ ಆ ಪ್ಯಾಯಯತಿ ಏವ | ಈ ಋಕ್ಕಿನಿಂದ ಯಜಮಾನನನ್ನು ಪ್ರತಿದಿನವೂ ವೃದ್ಧಿಗೊಳಿಸಿದಂತಾಗುತ್ತದೆ. |

---

**'ಯಮಾದಿತ್ಯಾः.....'** ಎಂದು ಆರಂಭಗೊಳ್ಳುವ ಋಕ್ಕು ಯಾಜ್ಯೆಯಾಗಿರುತ್ತದೆ. ಸೂರ್ಯನು ಚಂದ್ರನನ್ನು ವೃದ್ಧಿಗೊಳಿಸುತ್ತಾನೆ ಎಂದು ಹೇಳುವ ಮಂತ್ರದ ಪ್ರಭಾವದಿಂದ ಯಜಮಾನನು ಪ್ರತಿದಿನವೂ ವೃದ್ಧಿ ಹೊಂದುತ್ತಾನೆ.

* * *

## ಪಂಚಮಾನುವಾಕವಿಷಯಸಂಗ್ರಹ

**ಇಷ್ಟಿರ್ಯಕ್ಷ್ಮಗೃಹೀತಸ್ಯ ಪಂಚಮೇ ಸಮುದೀರಿತಾ ॥**

ಕ್ಷಯರೋಗಪೀಡಿತನಾದವನಿಗೆ ಪರಿಹಾರಾರ್ಥವಾದ ಇಷ್ಟಿಯು ಈ ಐದನೆಯ ಅನುವಾಕದಲ್ಲಿ ಹೇಳಲ್ಪಟ್ಟಿದೆ.

* * *

## ॥ ಷಷ್ಠೋಽನುವಾಕಃ ॥

ಪ್ರಜಾಪತಿರ್ದೇವೇಭ್ಯೋಽನ್ನಾದ್ಯಂ

ವ್ಯಾದಿಶತ್ಸೋಽಬ್ರವೀದ್ಯದಿಮಾನ್ಲೋಕಾನಭ್ಯತಿರಿಚ್ಯಾತೈ

---

**ಪ್ರಜಾಪತಿರಿತಿ ಪ್ರಜಾ–ಪತಿಃ** । ದೇವೇಭ್ಯಃ । ಅನ್ನಾದ್ಯಮಿತ್ಯನ್ನ–ಅದ್ಯಮ್ । ವ್ಯಾದಿಶದಿತಿ ವಿ–ಆದಿಶತ್ । ಸಃ । ಅಬ್ರವೀತ್ । ಯತ್ । ಇಮಾನ್ । ಲೋಕಾನ್ । ಅಭೀತಿ । ಅತಿರಿಚ್ಯಾತಾ ಇತ್ಯತಿ–ರಿಚ್ಯಾತೈ ।

---

**ಈ ಆರನೆಯ ಅನುವಾಕದಲ್ಲಿ ಅನ್ನಾದ್ಯಕಾಮನಿಗೆ ವಿಹಿತವಾದ ಇಷ್ಟಿಯು ಹೇಳಲ್ಪಟ್ಟಿದೆ.**

### ಅನ್ನಾದ್ಯಕಾಮನಿಗೆ ಇಷ್ಟಿವಿಧಿ; ಅದರ ಪ್ರಸ್ತಾವ

| | |
|---|---|
| **ಪ್ರಜಾಪತಿಃ ದೇವೇಭ್ಯಃ ಅನ್ನಾದ್ಯಮ್ ವ್ಯಾದಿಶತ್** | ಪ್ರಜಾಪತಿಯು ದೇವತೆಗಳಿಗೆ ತಿನ್ನಲು ಯೋಗ್ಯವಾದ ಅನ್ನವನ್ನು 'ಇದು ನಿನಗೆ' 'ಇದು ನಿನಗೆ' ಎಂದು ವಿಭಾಗ ಮಾಡಿದನು. |
| **ಸಃ** | ಆ ಪ್ರಜಾಪತಿಯು |
| **ಯತ್ ಇಮಾನ್ ಲೋಕಾನ್ ಅಭ್ಯತಿರಿಚ್ಯಾತೈ** | ಯಾವ ಅನ್ನವು ಈ ಲೋಕಗಳನ್ನು ವ್ಯಾಪಿಸಿ ಹೆಚ್ಚಾಗಿ ಉಳಿಯುತ್ತದೆಯೋ |

---

ಪ್ರಜಾಪತಿದೇವನು ತಿನ್ನಲು ಅರ್ಹವಾದ ಅನ್ನವನ್ನು ವಿಭಾಗ ಮಾಡಿ ದೇವತೆಗಳಿಗೆ ಕೊಟ್ಟನು. ಅನಂತರ **ಇಂದ್ರರಾಜ, ಇಂದ್ರಾಧಿರಾಜ, ಇಂದ್ರಸ್ವರಾಜ** ಎಂದು ಲೋಕಪಾಲಕರ ಹೆಸರಿನಿಂದ ಪ್ರಸಿದ್ಧವಾದ ಈ ಲೋಕಗಳನ್ನು ಯಾವ ಅನ್ನರಸವು

ತನ್ಮಮಾಸದಿತಿ ತದಿಮಾನ್ಲೋಕಾನಭ್ಯತ್ಯರಿಚ್ಯತೇಂದ್ರಗ್ಂ

ರಾಜಾನಮಿಂದ್ರಮಧಿರಾಜಮಿಂದ್ರಗ್ಗ್ಂ ಸ್ವರಾಜಾನಂ ತತೋ

ವೈ ಸ ಇಮಾನ್ಲೋಕಾಗ್ಂಸ್ತ್ರೇಧಾಽದುಹತ್ತ್ರಿಧಾತೋ

---

ತತ್ । ಮಮ । ಅಸತ್ । ಇತಿ । ತತ್ । ಇಮಾನ್ । ಲೋಕಾನ್ । ಅಭಿ । ಅತೀತಿ । ಅರಿಚ್ಯತ । ಇಂದ್ರಮ್ । ರಾಜಾನಮ್ । ಇಂದ್ರಮ್ । ಅಧಿರಾಜಮಿತ್ಯಧಿ–ರಾಜಮ್ । ಇಂದ್ರಮ್ । ಸ್ವರಾಜಾನಮಿತಿ ಸ್ವ–ರಾಜಾನಮ್ । ತತಃ । ವೈ । ಸಃ । ಇಮಾನ್ । ಲೋಕಾನ್ । ತ್ರೇಧಾ । ಅದುಹತ್ । ತತ್ । ತ್ರಿಧಾತೋರಿತಿ ತ್ರಿ–ಧಾತೋಃ ।

---

| | |
|---|---|
| ತತ್ ಮಮ ಅಸತ್ ಇತಿ ಅಬ್ರವೀತ್ | ಅದು ನನಗೆ ಆಗಲಿ ಎಂದು ಹೇಳಿದನು. |
| ತತ್ ಇಂದ್ರಮ್ ರಾಜಾನಮ್ ಇಂದ್ರಮ್ ಅಧಿರಾಜಮ್ ಇಂದ್ರಮ್ ಸ್ವರಾಜಾನಮ್ ಇಮಾನ್ ಲೋಕಾನ್ ಅಭಿ ಅತಿ ಅರಿಚ್ಯತ | ಆ ಅನ್ನವು *ಇಂದ್ರರಾಜ, *ಇಂದ್ರಾಧಿರಾಜ, *ಇಂದ್ರಸ್ವರಾಜ ಎಂಬ ಈ ಮೂರು ಲೋಕಗಳನ್ನೂ ವ್ಯಾಪಿಸಿ, ಹೆಚ್ಚಾಗಿ ಉಳಿಯಿತು. |
| ತತಃ ವೈ ಸಃ ಇಮಾನ್ ಲೋಕಾನ್ ತ್ರೇಧಾ ಅದುಹತ್ | ಅನಂತರ ಪ್ರಜಾಪತಿಯು ಈ ಲೋಕಗಳನ್ನು (ಸಾರವನ್ನು) ಮೂರು ಪ್ರಕಾರವಾಗಿ ಕಡೆದನು. |

---

ವ್ಯಾಪಿಸಿ ಅಧಿಕವಾಗಿ ಉಳಿಯುತ್ತದೆಯೋ, ಅದು ನನ್ನದಾಗಲಿ ಎಂದು ಹೇಳಿದನು. ಅನಂತರ ಈ ಲೋಕಗಳನ್ನು ಮೂರು ಪ್ರಕಾರವಾಗಿ ಕಡೆದು, ಸಾರವನ್ನು ಸಂಗ್ರಹಿಸಿದನು.

---

* ಆ ದೇವತೆಗಳು ಪಾಲಕರಾದುದರಿಂದ ಆ ಲೋಕಗಳಿಗೂ ಅದೇ ಹೆಸರು.

ಸ್ತ್ರಿಧಾತುತ್ವಂ ಯಂ ಕಾಮಯೇತಾನ್ನಾದಃ ಸ್ಯಾದಿತಿ

ತಸ್ಮಾ ಏತಂ ತ್ರಿಧಾತುಂ ನಿರ್ವಪೇದಿಂದ್ರಾಯ ರಾಜ್ಞೇ

ಪುರೋಡಾಶಮೇಕಾದಶಕಪಾಲ [(ಪುರೋಡಾಶಮ್ (೧)

ಏಕಾದಶಕಪಾಲ...] ಮಿಂದ್ರಾಯಾ–

---

ತ್ರಿಧಾತುತ್ವಮಿತಿ ತ್ರಿಧಾತು–ತ್ವಮ್ । **ಯಮ್** । ಕಾಮಯೇತ । ಅನ್ನಾದ ಇತ್ಯನ್ನ–ಅದಃ । ಸ್ಯಾತ್ । ಇತಿ । ತಸ್ಮೈ । ಏತಮ್ । ತ್ರಿಧಾತುಮಿತಿ ತ್ರಿ–ಧಾತುಮ್ । ನಿರಿತಿ । ವಪೇತ್ । ಇಂದ್ರಾಯ । ರಾಜ್ಞೇ । ಪುರೋಡಾಶಮ್ । ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್ । ಇಂದ್ರಾಯ ।

---

| | |
|---|---|
| **ತತ್ ತ್ರಿಧಾತೋಃ ತ್ರಿಧಾತುತ್ವಮ್** | ಹೀಗೆ ಮೂರು ಲೋಕಗಳ ಸಾರವಾದುದರಿಂದ ಈ ಮೂರು ದೇವತೆಗಳನ್ನು ಹೊಂದಿರುವ ಯಾಗವೂ ತ್ರಿಧಾತುವೇ. |

**ತ್ರಿಧಾತುಯಾಗವಿಧಿ; ಪ್ರಶಂಸೆ**

| | |
|---|---|
| **ಯಂ ಅನ್ನಾದಃ ಸ್ಯಾತ್ ಇತಿ ಕಾಮಯೇತ** | ಅಧ್ವರ್ಯುವು ಯಾವ ಯಜಮಾನನನ್ನು ಅನ್ನವನ್ನು ತಿನ್ನುವ ಶಕ್ತಿಯುಳ್ಳವನಾಗಬೇಕೆಂದು ಬಯಸುವನೋ |
| **ತಸ್ಮೈ ಏತಮ್ ತ್ರಿಧಾತುಮ್ ನಿರ್ವಪೇತ್** | ಅವನಿಗಾಗಿ ಈ ತ್ರಿಧಾತುಯಾಗವನ್ನು ಮಾಡಬೇಕು. |
| **ಇಂದ್ರಾಯ ರಾಜ್ಞೇ ಏಕಾದಶಕಪಾಲಮ್ ಪುರೋಡಾಶಮ್** | ಇಂದ್ರರಾಜನಿಗಾಗಿ ಏಕಾದಶಕಪಾಲ ಪುರೋಡಾಶವನ್ನೂ |
| **ಇಂದ್ರಾಯ ಅಧಿರಾಜಾಯ** | ಅಧಿರಾಜನಾದ ಇಂದ್ರನಿಗಾಗಿ, |

---

ಈ ಲೋಕಗಳ ಮೂರು ವಿಧವಾದ ಸಾರಸಂಗ್ರಹವೇ ಈ ಯಾಗರೂಪವಾಗಿದೆ. ಆದುದರಿಂದ ಈ ಯಾಗಕ್ಕೆ '**ತ್ರಿಧಾತು**' ಎಂಬ ಹೆಸರು ಅನ್ವರ್ಥವಾಗಿದೆ. ಯಾವ

ಧಿರಾಜಾಯೇಂದ್ರಾಯ ಸ್ವರಾಜ್ಞೇಽಯಂ ವಾ ಇಂದ್ರೋ

ರಾಜಾಽಯಮಿಂದ್ರೋಽಧಿರಾಜೋಽಸಾವಿಂದ್ರಃ

ಸ್ವರಾಡಿಮಾನೇವ

---

ಅಧಿರಾಜಾಯೇತ್ಯಧಿ–ರಾಜಾಯ। ಇಂದ್ರಾಯ। ಸ್ವರಾಜ್ಞ ಇತಿ ಸ್ವ–ರಾಜ್ಞೇ। **ಅಯಮ್**। ವೈ। ಇಂದ್ರಃ। ರಾಜಾ। ಅಯಮ್। ಇಂದ್ರಃ। ಅಧಿರಾಜ ಇತ್ಯಧಿ–ರಾಜಃ। ಅಸೌ। ಇಂದ್ರಃ। ಸ್ವರಾಡಿತಿ ಸ್ವ–ರಾಟ್। ಇಮಾನ್। ಏವ।

---

| | |
|---|---|
| ಇಂದ್ರಾಯ ಸ್ವರಾಜ್ಞೇ (ಏಕಾದಶ ಕಪಾಲಮ್ ಪುರೋಡಾಶಮ್ ನಿರ್ವಪೇತ್) | ಸ್ವರಾಜನಾದ ಇಂದ್ರನಿಗಾಗಿಯೂ ಏಕಾದಶ ಕಪಾಲಪುರೋಡಾಶಯಾಗವನ್ನು ನಿರ್ವಾಪ ಮಾಡಿ ಯಾಗವನ್ನು ಮಾಡಬೇಕು. |

**ಈ ತ್ರಿಧಾತುಯಾಗದ ಪ್ರಶಂಸೆ**

| | |
|---|---|
| **ಅಯಮ್ ವೈ ಇಂದ್ರಃ ರಾಜಾ** | ಈ ಇಂದ್ರರಾಜನೇ ಭೂಲೋಕವಾಗಿರುತ್ತಾನೆ. |
| **ಅಯಮ್ ಇಂದ್ರಃ ಅಧಿರಾಜಃ** | ಈ ಅಧಿರಾಜೇಂದ್ರನು ಅಂತರಿಕ್ಷಲೋಕವಾಗಿರುತ್ತಾನೆ. |
| **ಅಸೌ ಇಂದ್ರಃ ಸ್ವರಾಟ್** | ಈ ಸ್ವರಾಡಿಂದ್ರನು ಸ್ವರ್ಗಲೋಕವಾಗಿರುತ್ತಾನೆ. |
| **ಇಮಾನ್ ಏವ ಲೋಕಾನ್** | ಈ ಲೋಕಾಧಿಪತಿಗಳಿಗೆ |

---

ಯಜಮಾನನನ್ನು ಅಧ್ವರ್ಯುವು ಅನ್ನವನ್ನು ತಿನ್ನುವ ಶಕ್ತಿಯುಳ್ಳವನಾಗಬೇಕೆಂದು ಬಯಸುತ್ತಾನೆಯೋ ಆ ಯಜಮಾನನಿಗಾಗಿ ಈ ತ್ರಿಧಾತುಯಾಗವನ್ನು ಮಾಡಲು ಹವಿರ್ನಿರ್ವಾಪವನ್ನು ಮಾಡಿ ಯಾಗವನ್ನು ಮಾಡಬೇಕು*. ಈ ತ್ರಿಧಾತುಯಾಗವು

---

* ಅಧ್ವರ್ಯುವು ನಿರ್ವಾಪ ಮಾಡಬೇಕೆಂಬ ವಚನಕ್ಕೆ ಯಜಮಾನನು ಯಾಗ ಮಾಡಬೇಕೆಂದೇ ಅರ್ಥ.

ಋತ್ವಿಜರು ಯಾಗಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಮಾಡಿದರೂ ಯಜಮಾನನೇ ಮುಖ್ಯ ಯಾಗಕರ್ತನಾಗಿದ್ದಾನೆ.

ಲೋಕಾನ್ತ್ಸ್ವೇನ ಭಾಗಧೇಯೇನೋಪಧಾವತಿ ತ

ಏವಾಸ್ಮಾ ಅನ್ನಂ ಪ್ರಯಚ್ಛಂತ್ಯನ್ನಾದ ಏವ ಭವತಿ

---

ಲೋಕಾನ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।
ತೇ । ಏವ । ಅಸ್ಮೈ । ಅನ್ನವಮ್ । ಪ್ರೇತಿ । ಯಚ್ಛಂತಿ । ಅನ್ನಾದ ಇತ್ಯನ್ನ – ಅದಃ ।
ಏವ । ಭವತಿ ।

---

| | |
|---|---|
| ಸ್ವೇನ ಭಾಗಧೇಯೇನ ಉಪಧಾವತಿ | ಈ ಯಾಗದ ಹವಿರ್ಭಾಗವನ್ನರ್ಪಿಸಿ, ಯಜಮಾನನು ಇವರನ್ನು ಸೇವಿಸುತ್ತಾನೆ. |
| ತೇ ಏವ ಅಸ್ಮೈ ಅನ್ನವ್ ಪ್ರಯಚ್ಛಂತಿ | ಆ ಲೋಕಪಾಲಕರಾದ ದೇವತೆಗಳೇ ಈ ಯಜಮಾನನಿಗೆ ಮೂರು ಲೋಕಗಳಲ್ಲಿಯೂ ಅನ್ನಸಮೃದ್ಧಿಯನ್ನು ಕೊಡುತ್ತಾರೆ. |
| ಅನ್ನಾದಃ ಏವ ಭವತಿ | ಯಜಮಾನನು ಅನ್ನಾದನೇ ಆಗುತ್ತಾನೆ. |

---

ಮೂರು ದೇವತೆಗಳುಳ್ಳದ್ದಾಗಿದೆ. ಮೂರು ಲೋಕಗಳು ಆ ಹೆಸರಿನಿಂದಲೇ ಪ್ರಸಿದ್ಧವಾಗಿವೆ. ಇಂದ್ರರಾಜನಿಗಾಗಿ ಏಕಾದಶಕಪಾಲಪುರೋಡಾಶಯಾಗ, ಇಂದ್ರಾಧಿರಾಜನಿಗೆ ಮತ್ತೊಂದು ಏಕಾದಶಕಪಾಲಪುರೋಡಾಶಯಾಗ, ಇಂದ್ರಸ್ವರಾಜನಿಗಾಗಿ ಇನ್ನೊಂದು – ಹೀಗೆ ಮೂರು ಯಾಗಗಳನ್ನು ಅನುಷ್ಠಿಸಬೇಕು.

ಅನ್ನಾದನಶಕ್ತಿಯನ್ನು ಬಯಸುವವನು ಈ ತ್ರಿಧಾತುಯಾಗವನ್ನು ಮಾಡಬೇಕು.

ಇಂದ್ರರಾಜನಿಗೆ ಒಂದು ಏಕಾದಶಕಪಾಲಪುರೋಡಾಶಯಾಗ, ಇಂದ್ರಾಧಿರಾಜನಿಗೆ ಇನ್ನೊಂದು, ಇಂದ್ರಸ್ವರಾಜನಿಗೆ ಮತ್ತೊಂದು – ಹೀಗೆ ಯಾಗವನ್ನು ಮಾಡಬೇಕು. ಈ ಮೂವರು ಕ್ರಮವಾಗಿ ಭೂಲೋಕ, ಅಂತರಿಕ್ಷಲೋಕ ಮತ್ತು ಸ್ವರ್ಗಲೋಕಕ್ಕೆ ಒಡೆಯರು. ಯಜಮಾನನು ಈ ಹವಿರ್ಯಾಗದಿಂದ ಈ ಲೋಕಾಧಿಪತಿಗಳನ್ನು ಸೇವಿಸುತ್ತಾನೆ. ತೃಪ್ತರಾದ ಆ ಇಂದ್ರರಾಜಾದಿಗಳು ಈ ಯಜಮಾನನಿಗೆ ಅನ್ನಸಮೃದ್ಧಿಯನ್ನು ಕೊಡುತ್ತಾರೆ. ಯಜಮಾನನು ಅನ್ನಾದನೇ ಆಗುತ್ತಾನೆ.

ಯಥಾ ವತ್ಸೇನ ಪ್ರತ್ತಾಂ ಗಾಂ ದುಹ ಏವಮೇವೇ

ಮಾನ್ಲೋಕಾನ್ಪ್ರತ್ತಾನ್ಕಾಮಮನ್ನಾದ್ಯಂ ದುಹ ಉತ್ತಾನೇಷು

ಕಪಾಲೇಷ್ವಧಿಶ್ರಯತ್ಯಯಾತಯಾಮತ್ವಾಯ

---

**ಯಥಾ** । ವತ್ಸೇನ । ಪ್ರತ್ತಾಮ್ । ಗಾಮ್ । ದುಹೇ । ಏವಮ್ । ಏವ । ಇಮಾನ್ । ಲೋಕಾನ್ । ಪ್ರತ್ತಾನ್ । ಕಾಮಮ್ । ಅನ್ನಾದ್ಯಮಿತ್ಯನ್ನ-ಅದ್ಯಮ್ । ದುಹೇ । **ಉತ್ತಾನೇಷ್ವಿತ್ಯುತ್-ತಾನೇಷು** । ಕಪಾಲೇಷು । ಅಧೀತಿ । ಶ್ರಯತಿ । ಅಯಾತಯಾಮತ್ವಾಯೇತ್ಯಯಾತಯಾಮ-ತ್ವಾಯ ।

---

**ಯಾಗಪ್ರಶಂಸೆ**

| | |
|---|---|
| ಯಥಾ ವತ್ಸೇನ ಪ್ರತ್ತಾಮ್ ಗಾಮ್ ದುಹೇ | ಹೇಗೆ ಕರುವನ್ನು ಬಿಟ್ಟಾಗ ಹಾಲನ್ನು ಸುರಿಸಲು ಆರಂಭಿಸುವ ಹಸುವನ್ನು ಹಾಲು ಕರೆಯುತ್ತಾರೆಯೋ |
| ಏವಮ್ ಏವ ಇಮಾನ್ ಲೋಕಾನ್ ಪ್ರತ್ತಾನ್ ಕಾಮಮ್ ಅನ್ನಾದ್ಯಮ್ ದುಹೇ | ಹಾಗೆಯೇ ಈ ತ್ರಿಧಾತುಯಾಗದಿಂದ ತೃಪ್ತರಾದ ಲೋಕಾಧಿಪತಿಗಳ ಅನುಗ್ರಹದಿಂದ ಯಜಮಾನನು ತನಗೆ ಅಭಿಮತವಾದ ಅನ್ನಾದ್ಯವನ್ನು ಯಥೇಚ್ಛವಾಗಿ ಪಡೆಯುತ್ತಾನೆ. |

**ಯಾಗದಲ್ಲಿ ವಿಶೇಷವಿಧಾನ; ಪ್ರಶಂಸೆ**

| | |
|---|---|
| ಅಯಾತಯಾಮತ್ವಾಯ ಉತ್ತಾನೇಷು ಕಪಾಲೇಷು ಅಧಿಶ್ರಯತಿ | ಪುರೋಡಾಶವು ಗತಸಾರವಾಗದೆ ಇರುವುದಕ್ಕಾಗಿ ಊರ್ಧ್ವಮುಖವಾಗಿರುವ ಕಪಾಲಗಳಲ್ಲಿ ಪುರೋಡಾಶವನ್ನು ಬೇಯಿಸಬೇಕು. |

---

ಲೋಕದಲ್ಲಿ ಜನರು ಹಾಲು ಕರೆಯುವ ಮೊದಲು ಕರುವನ್ನು ಹಾಲು ಕುಡಿಯಲು ಬಿಟ್ಟು, ಹಾಲು ಸುರಿಸಲು ಆರಂಭಿಸುವ ಹಸುವನ್ನು ಕರೆಯುತ್ತಾರಷ್ಟೆ. ಹಾಗೆಯೇ ಈ ತ್ರಿಧಾತುಯಾಗದಿಂದ ತೃಪ್ತರಾದ ತ್ರಿಲೋಕಾಧಿಪತಿಗಳ ಅನುಗ್ರಹದಿಂದ ತನಗೆ ಬೇಕಾದ ಅನ್ನಸಮೃದ್ಧಿಯನ್ನು ಯಜಮಾನನು ಪಡೆಯುತ್ತಾನೆ.

ಪ್ರಕೃತಿಯಾಗದಲ್ಲಿ ಅಧೋಮುಖವಾದ ಕಪಾಲಗಳಲ್ಲಿ ಪಾಕವಿದ್ದರೆ ಈ ತ್ರಿಧಾತು

ತ್ರಯಃ ಪುರೋಡಾಶಾ ಭವಂತಿ ತ್ರಯ ಇಮೇ ಲೋಕಾ

ಏಷಾಂ ಲೋಕಾನಾಮಾಪ್ತ್ಯಾ ಉತ್ತರಉತ್ತರೋ

ಜ್ಯಾಯಾನ್ಭವತ್ಯೇವಮಿವ ಹೀಮೇ ಲೋಕಾಃ ಸಮೃಧ್ಯೈ

---

ತ್ರಯಃ । ಪುರೋಡಾಶಾಃ । ಭವಂತಿ । ತ್ರಯಃ । ಇಮೇ । ಲೋಕಾಃ । ಏಷಾಮ್ ।
ಲೋಕಾನಾಮ್ । ಆಪ್ತ್ಯೈ । ಉತ್ತರಉತ್ತರ ಇತ್ಯುತ್ತರಃ –ಉತ್ತರಃ । ಜ್ಯಾಯಾನ್ ।
ಭವತಿ । ಏವಮ್ ।ಇವ । ಹಿ । ಇಮೇ । ಲೋಕಾಃ । ಸಮೃಧ್ಯಾ ಇತಿ ಸಮ್–ಋಧ್ಯೈ ।

---

| | |
|---|---|
| ತ್ರಯಃ ಪುರೋಡಾಶಾಃ ಭವಂತಿ | ಈ ತ್ರಿಧಾತುಯಾಗದಲ್ಲಿ ಮೂರು ಏಕಾದಶಕಪಾಲಪುರೋಡಾಶಗಳಿವೆ. |
| ಇಮೇ ಲೋಕಾಃ ತ್ರಯಃ | ಲೋಕಗಳೂ ಮೂರಿವೆ. |
| ಏಷಾಮ್ ಲೋಕಾನಾಮ್ ಆಪ್ತ್ಯೈ | ಈ ತ್ರಿತ್ವಸಂಖ್ಯೆಯು ಮೂರು ಲೋಕಗಳನ್ನು ಹೊಂದಲು ಸಾಧನವಾಗುತ್ತದೆ. |
| ಉತ್ತರಉತ್ತರಃ ಜ್ಯಾಯಾನ್ ಭವತಿ | ಮುಂದುಮುಂದಿನ ಪುರೋಡಾಶವು ಮೊದಲನೆಯವುಗಳಿಗಿಂತ ದೊಡ್ಡದೊಡ್ಡದಾಗಿರುತ್ತದೆ. |
| ಏವಮ್ ಇವ ಹಿ ಇಮೇ ಲೋಕಾಃ | ಹೀಗೆಯೇ ಲೋಕಗಳಲ್ಲಿಯೂ ಮೇಲುಮೇಲಿನ ಲೋಕಗಳು ದೊಡ್ಡವುಗಳಾಗಿವೆ. |
| ಸಮೃಧ್ಯೈ | ಆದುದರಿಂದ ಫಲವೃದ್ಧಿಗೆ ಇದು ಸಾಧನವಾಗುತ್ತದೆ. |

---

ಯಾಗದಲ್ಲಿ ಊರ್ಧ್ವಮುಖವಾದ ಕಪಾಲಗಳಲ್ಲಿ ಪುರೋಡಾಶಶ್ರಪಣವನ್ನು ಮಾಡಬೇಕು. ಇದರಿಂದ ಸಾರವು ನಾಶವಾಗದೆ ಇರುತ್ತದೆ. ತ್ರಿಧಾತುಯಾಗದಲ್ಲಿಮೂರು ಪುರೋಡಾಶಗಳಿವೆ. ಲೋಕಗಳೂ ಮೂರು. ಈ ಮೂರೆಂಬ ಸಂಖ್ಯೆಯು ಮೂರು ಲೋಕಗಳಲ್ಲಿರುವ ಅನ್ನದ ಸಮೃದ್ಧಿಯನ್ನು ಪಡೆಯಲು ಸಾಧನವಾಗುತ್ತದೆ. ಈ

ಸರ್ವೇಷಾಮಭಿಗಮಯನ್ನವದ್ಯತ್ಯಛಂಬಟ್ಕಾರಂ

ವ್ಯತ್ಯಾಸಮನ್ವಾಹಾನಿರ್ದಾಹಾಯ ||೨೮–6||

**[ಪುರೋಡಾಶಂ ತ್ರಯಃ ಷಡ್ವಿಗ್ಂಶತಿಶ್ಚ ।]**

---

ಸರ್ವೇಷಾಮ್ । ಅಭಿಗಮಯನ್ನಿತ್ಯಭಿ–ಗಮಯನ್ನ್ । ಅವೇತಿ । ದ್ಯತಿ । ಅಛಂಬಟ್ಕಾರಮಿತ್ಯಛಂಬಟ್–ಕಾರಮ್ । ವ್ಯತ್ಯಾಸಮಿತಿ ವಿ–ಅತ್ಯಾಸಮ್ । ಅನ್ವಿತಿ । ಆಹ । ಅನಿರ್ದಾಹಾಯೇತ್ಯನಿಃ – ದಾಹಾಯ ||6||

---

**ಯಾಜ್ಯಾ–ಪುರೋನುವಾಕ್ಯೆಗಳಲ್ಲಿ ವಿಶೇಷವಿಧಾನ; ಪ್ರಶಂಸೆ.**

| | |
|---|---|
| ಅಭಿಗಮಯನ್ ಸರ್ವೇಷಾಮ್ ಅವದ್ಯತಿ | ಎಲ್ಲ ಪುರೋಡಾಶಗಳಲ್ಲಿಯೂ ಮೊದಲು ದಕ್ಷಿಣಾರ್ಧ ಅನಂತರ ಮಧ್ಯ, ಅನಂತರ ಉತ್ತರಾರ್ಧ ಈ ಕ್ರಮದಂತೆ ಅನುಸರಿಸುತ್ತಾ |
| ಅವದ್ಯತಿ | ಹೋಮಕ್ಕಾಗಿ ಅವದಾನವನ್ನು ಮಾಡಬೇಕು. |
| ಅಛಂಬಟ್ಕಾರಮ್ | ಇದು ಯಾವುದೂ ವ್ಯರ್ಥವಾಗದಿರುವಂತೆ ಮಾಡುತ್ತದೆ. |
| ಅನಿರ್ದಾಹಾಯ ವ್ಯತ್ಯಾಸಮ್ ಅನ್ವಾಹ | ಯಾಜ್ಯಾ–ಪುರೋನುವಾಕ್ಯೆಗಳನ್ನು ವ್ಯತ್ಯಾಸ ಮಾಡಿ ಹೇಳಬೇಕು. ಇದು ಹವಿಸ್ಸುಗಳು ನಾಶವಾಗದಿರುವಿಕೆಗೆ ಕಾರಣವಾಗುತ್ತದೆ. |

---

ಪುರೋಡಾಶಗಳಲ್ಲಿ ಮೇಲುಮೇಲಿನ ಪುರೋಡಾಶವು ಕೆಳಗಿನ ಪುರೋಡಾಶಕ್ಕಿಂತ ದೊಡ್ಡದಾಗಿರುತ್ತದೆ. ಹೀಗೆಯೇ ಲೋಕಗಳಲ್ಲಿಯೂ ಮೇಲುಮೇಲಿನ ಲೋಕಗಳು ದೊಡ್ಡವಾಗಿರುತ್ತವೆ. ಇದು ಫಲಸಮೃದ್ಧಿಗೆ ಕಾರಣವಾಗುತ್ತದೆ.

ಈ ಯಾಗದಲ್ಲಿ ಯಾಜ್ಯಾ–ಪುರೋನುವಾಕ್ಯೆಗಳನ್ನು ವ್ಯತ್ಯಾಸ ಮಾಡಿ ಹೇಳಬೇಕು.

ಮೊದಲನೆಯ ಯಾಗಕ್ಕೆ *'**ಪ್ರಾಚ್ಯಾಂ ದಿಶಿ**' ಎಂಬ ಋಕ್ ಪುರೋನುವಾಕ್ಯೆ ಯಾಗುತ್ತದೆ. *'**ಇಂದ್ರೋ ಜಯಾತಿ**' ಎಂಬ ಋಕ್ಕು ಯಾಜ್ಯೆಯಾಗುತ್ತದೆ. ಎರಡನೆಯ ಯಾಗಕ್ಕೆ ಮೊದಲನೆಯ ಯಾಗದ ಯಾಜ್ಯೆಯಾದ '**ಇಂದ್ರೋ ಜಯಾತಿ**' ಎಂಬ ಋಕ್ಕೇ ಪುರೋನುವಾಕ್ಯೆಯಾಗುವುದು. *'**ಅಸ್ಯೇ ದೇವ**' ಎಂಬ ಋಕ್ಕು ಯಾಜ್ಯೆ ಯಾಗುವುದು. ಮೂರನೆಯ ಯಾಗಕ್ಕೆ 'ಎರಡನೆಯ ಯಾಗದ ಯಾಜ್ಯೆಯಾದ '**ಅಸ್ಯೇ ದೇವ**' ಎಂಬ ಋಕ್ಕೇ ಪುರೋನುವಾಕ್ಯೆಯಾಗುವುದು ಮತ್ತು ಮೊದಲನೆಯ ಯಾಗದ ಪುರೋನುವಾಕ್ಯೆಯಾದ '**ಪ್ರಾಚ್ಯಾಂ ದಿಶಿ**' ಎಂಬ ಋಕ್ಕೇ ಯಾಜ್ಯೆಯಾಗುವುದು. ವ್ಯತ್ಯಾಸವೆಂದರೆ ವಿನಿಮಯ. ಇದು ಹವಿಸ್ಸುಗಳ ನಾಶವಾಗದಿರುವುದಕ್ಕೆ ಕಾರಣವಾಗುತ್ತದೆ.

* * *

## ಷಷ್ಠಾನುವಾಕವಿಷಯಸಂಗ್ರಹ

**ಷಷ್ಠೇಽನ್ನಾದನಕಾಮಸ್ಯ ತ್ರಿಧಾತುರ್ಯಾಗ ಈರಿತಃ ॥**

ಈ ಆರನೆಯ ಅನುವಾಕದಲ್ಲಿ ಅನ್ನಾದ್ಯಕಾಮನಿಗೆ ತ್ರಿಧಾತುಯಾಗವು ಹೇಳಲ್ಪಟ್ಟಿದೆ.

* * *

* ತೈ.ಸಂ. 2.4.14

## ॥ ಸಪ್ತಮೋಽನುವಾಕಃ ॥

ದೇವಾಸುರಾಃ ಸಂಯತ್ತಾ ಆಸನ್ತಾನ್ದೇವಾನಸುರಾ ಅಜಯನ್ತೇ

ದೇವಾಃ ಪರಾಜಿಗ್ಯಾನಾ ಅಸುರಾಣಾಂ ವೈಶ್ಯಮುಪಾಯನ್ತೇಭ್ಯ

ಇಂದ್ರಿಯಂ ವೀರ್ಯಮಪಾಕ್ರಾಮತ್ತದಿಂದ್ರೋಽಚಾಯತ್ತ

---

**ದೇವಾಸುರಾ ಇತಿ ದೇವ–ಅಸುರಾಃ** । ಸಂಯತ್ತಾ ಇತಿ ಸಮ್–ಯತ್ತಾಃ । ಆಸನ್ । ತಾನ್ । ದೇವಾನ್ । ಅಸುರಾಃ । ಅಜಯನ್ । ತೇ । ದೇವಾಃ । ಪರಾಜಿಗ್ಯಾನಾ ಇತಿ ಪರಾ–ಜಿಗ್ಯಾನಾಃ । ಅಸುರಾಣಾಮ್ । ವೈಶ್ಯಮ್ । ಉಪೇತಿ । ಆಯನ್ । ತೇಭ್ಯಃ । ಇಂದ್ರಿಯಮ್ । ವೀರ್ಯಮ್ । ಅಪೇತಿ । ಅಕ್ರಾಮತ್ । ತತ್ । ಇಂದ್ರಃ । ಅಚಾಯತ್ । ತತ್ ।

---

**ಸರ್ವಪೃಷ್ಠಾಯಾಗದ ವಿಧಿಯ ಉಪಾಖ್ಯಾನ**

| | |
|---|---|
| ದೇವಾಸುರಾಃ ಸಂಯತ್ತಾಃ ಆಸನ್ | (ಒಂದು ಕಾಲದಲ್ಲಿ) ದೇವಾಸುರರು ಯುದ್ಧದಲ್ಲಿ ತೊಡಗಿದರು. |
| ತಾನ್ ದೇವಾನ್ ಅಸುರಾಃ ಅಜಯನ್ | ಆ ದೇವತೆಗಳನ್ನು ಅಸುರರು ಜಯಿಸಿದರು. |
| ತೇ ಪರಾಜಿಗ್ಯಾನಾಃ ದೇವಾಃ ಅಸುರಾಣಾಮ್ ವೈಶ್ಯಮ್ ಉಪಾಯನ್ | ಆ ದೇವತೆಗಳು ಪರಾಜಿತರಾಗಿ ಅಸುರರ ಪ್ರಜೆಗಳಾಗಿ ಅಧೀನತೆಯನ್ನು ಹೊಂದಿದರು. |
| ತೇಭ್ಯಃ ಇಂದ್ರಿಯಮ್ | ಆ ದೇವತೆಗಳ ಬಳಿಯಿಂದ ಇಂದ್ರಿಯ ಶಕ್ತಿಯೂ |

---

ಒಮ್ಮೆ ದೇವತೆಗಳಿಗೂ ದಾನವರಿಗೂ ನಡೆದ ಯುದ್ಧದಲ್ಲಿ ಅಸುರರು ವಿಜಯಿಗಳಾದರು. ದೇವತೆಗಳು ಸೋತು ದಾನವರ ಪ್ರಜೆಗಳಾಗಿ ನಡೆದುಕೊಳ್ಳಬೇಕಾಯಿತು.

–ದನ್ವಪಾಕ್ರಾಮತ್ತ ದವರುಧಂ ನಾಶಕ್ನೋತ್ತದಸ್ಮಾ

ದಭ್ಯರ್ಧೋಽಚರತ್ಸ ಪ್ರಜಾಪತಿಮುಪಾ

ಧಾವತ್ತಮೇತಯಾ

---

ಅನು । ಅಪೇತಿ । ಅಕ್ರಾಮತ್ । ತತ್ । ಅವರುಧಮಿತ್ಯವ– ರುಧಮ್ । ನ ।

ಅಶಕ್ನೋತ್ । ತತ್ । ಅಸ್ಮಾತ್ । ಅಭ್ಯರ್ಧ ಇತ್ಯಭಿ–ಅರ್ಧಃ । ಅಚರತ್ । ಸಃ ।

ಪ್ರಜಾಪತಿಮಿತಿ ಪ್ರಜಾ–ಪತಿಮ್ । ಉಪೇತಿ । ಅಧಾವತ್ । ತಮ್ । ಏತಯಾ ।

---

| | |
|---|---|
| ವೀರ್ಯಮ್ ಅಪಾಕ್ರಾಮತ್ | ದೇಹಸಾಮರ್ಥ್ಯವೂ ದೂರವಾಗಿ ಹೋಯಿತು. |
| ತತ್ ಇಂದ್ರಃ ಅಚಾಯತ್ | ಅದನ್ನು ಇಂದ್ರನು ತಿಳಿದುಕೊಂಡನು. |
| ತತ್ ಅನು ಅಪಾಕ್ರಾಮತ್ | ಆ ಇಂದ್ರಿಯ–ವೀರ್ಯಗಳನ್ನು ಇಂದ್ರನು ಹಿಂಬಾಲಿಸಿದನು. |
| ತತ್ ಅವರುಧಮ್ ನ ಅಶಕ್ನೋತ್ | ಆದರೆ ಆ ಇಂದ್ರಿಯ–ವೀರ್ಯಗಳನ್ನು ಹೊಂದಲು ಇಂದ್ರನು ಅಸಮರ್ಥನಾದನು. |
| ತತ್ ಅಸ್ಮಾತ್ ಅಭ್ಯರ್ಧಃ ಅಚರತ್ | ಆಗ ಇಂದ್ರನು ಆ ಇಂದ್ರಿಯ–ವೀರ್ಯಗಳ ಅರ್ಧಭಾಗವನ್ನು ಹೊಂದಿ ಸಂಚರಿಸಿದನು. |

**ಪ್ರಜಾಪತಿಯು ಇಂದ್ರನಿಗಾಗಿ ಮಾಡಿದ ಸರ್ವಪೃಷ್ಠಾಯಾಗ; ಫಲ**

| | |
|---|---|
| ಸಃ ಪ್ರಜಾಪತಿಮ್ ಉಪಾಧಾವತ್ | ಆ ಇಂದ್ರನು (ಉಳಿದರ್ಧದ ಪ್ರಾಪ್ತಿಗಾಗಿ) ಪ್ರಜಾಪತಿಬ್ರಹ್ಮನನ್ನು ಆಶ್ರಯಿಸಿದನು. |
| ತಮ್ ಏತಯಾ | ಆ ಇಂದ್ರನಿಂದ ಈ |

---

ದೇವತೆಗಳ ಇಂದ್ರಿಯಶಕ್ತಿಯೂ ದೇಹಶಕ್ತಿಯೂ ಕ್ಷೀಣವಾಗಿ ಹೋಯಿತು. ಇಂದ್ರನು ಇದನ್ನು ತಿಳಿದು, ಹೊರಟು ಹೋಗಿದ್ದ ದೇವತೆಗಳ ಇಂದ್ರಿಯ–ವೀರ್ಯಶಕ್ತಿಯನ್ನು ಮತ್ತೆ ಪಡೆಯಲು ಯತ್ನಿಸಿದನು. ಅವುಗಳಲ್ಲಿ ಅರ್ಧಭಾಗವನ್ನು ಮಾತ್ರ ಪಡೆದನು. ಸಂಪೂರ್ಣವಾಗಿ ಇಂದ್ರಿಯ ವೀರ್ಯಗಳನ್ನು ಪಡೆಯಲು ಸಮರ್ಥನಾಗಲಿಲ್ಲ.

ಸರ್ವಪೃಷ್ಠಯಾಽಯಾಜಯತ್ತಯೈವಾಸ್ಮಿನ್ನಿಂದ್ರಿಯಂ ವೀರ್ಯಮದಧಾದ್ಯ ಇಂದ್ರಿಯಕಾಮೋ [ಇಂದ್ರಿಯ ಕಾಮಃ (೧)] ವೀರ್ಯಕಾಮಃ ಸ್ಯಾತ್ತಮೇತಯಾ

---

ಸರ್ವಪೃಷ್ಠಯೇತಿ ಸರ್ವ–ಪೃಷ್ಠಯಾ । ಅಯಾಜಯತ್ । ತಯಾ । ಏವ । ಅಸ್ಮಿನ್ನ್ । ಇಂದ್ರಿಯಮ್ । ವೀರ್ಯಮ್ । ಅದಧಾತ್ । ಯಃ । ಇಂದ್ರಿಯಕಾಮ ಇತೀಂದ್ರಿಯ–ಕಾಮಃ । ವೀರ್ಯಕಾಮ ಇತಿ ವೀರ್ಯ–ಕಾಮಃ । ಸ್ಯಾತ್ । ತಮ್ । ಏತಯಾ ।

---

| | |
|---|---|
| ಸರ್ವಪೃಷ್ಠಯಾ ಅಯಾಜಯತ್ | ಸರ್ವಪೃಷ್ಠಾಯಾಗವನ್ನು ಮಾಡಿಸಿದನು. |
| ತಯಾ ಏವ ಅಸ್ಮಿನ್ | ಆ ಯಾಗದಿಂದಲೇ ಪ್ರಜಾಪತಿಯು ಈ ಇಂದ್ರನಲ್ಲಿ |
| ಇಂದ್ರಿಯಮ್ ವೀರ್ಯಮ್ ಅದಧಾತ್ | ಇಂದ್ರಿಯ–ವೀರ್ಯಗಳು ಸಂಪೂರ್ಣವಾಗಿ ಇರುವಂತೆ ಮಾಡಿದನು. |

**ಸರ್ವಪೃಷ್ಠಾಯಾಗದ ವಿಧಿ; ಅದರ ಪ್ರಶಂಸೆ**

| | |
|---|---|
| ಯಃ ಇಂದ್ರಿಯಕಾಮಃ ವೀರ್ಯಕಾಮಃ ಸ್ಯಾತ್ | ಯಾವ ಯಜಮಾನನು ಇಂದ್ರಿಯಸಾಮರ್ಥ್ಯವನ್ನೂ, ದೇಹಶಕ್ತಿಯನ್ನೂ ಬಯಸುತ್ತಾನೆಯೋ |
| ತಮ್ ಏತಯಾ | ಅವನಿಂದ ಈ |

---

ಪ್ರಜಾಪತಿಬ್ರಹ್ಮನು ಇಂದ್ರನು *ಸರ್ವಪೃಷ್ಠಾಯಾಗವನ್ನು ಮಾಡುವಂತೆ ಮಾಡಿದನು. ಪ್ರಜಾಪತಿಯು ಈ ಯಾಗದ ಪ್ರಭಾವದಿಂದ ಇಂದ್ರನಲ್ಲಿ ಇಂದ್ರಿಯ– ವೀರ್ಯಗಳು ಮತ್ತೆ ಸಂಪೂರ್ಣವಾಗಿ ನೆಲೆಸುವಂತೆ ಮಾಡಿದನು.

---

* ಸೋಮಯಾಗದಲ್ಲಿ ರಥಂತರ, ಬೃಹತ್, ವೈರೂಪ, ವೈರಾಜ, ಶಾಕ್ವರ ಮತ್ತು ರೈವತ – ಈ ಆರು ಹೆಸರಿನಿಂದ ಕೂಡಿರುವ ಆರು ಸ್ತೋತ್ರಗಳು ಇವೆ. ಅವುಗಳಿಗೆ ಪೃಷ್ಠಸ್ತೋತ್ರಗಳೆಂದು ಹೆಸರು. ಆ ಸ್ತೋತ್ರದ ಅಭಿಮಾನಿದೇವತೆಗಳನ್ನು ಆ ರಾಥಂತರಾದಿ ಹೆಸರುಗಳಿಂದಲೇ ಹೇಳಲಾಗಿರುವುದರಿಂದ ಈ ಯಾಗದಲ್ಲಿ ಆ ಸ್ತೋತ್ರಗಳನ್ನು ಹೇಳಬೇಕಾಗಿಲ್ಲ. ಹೀಗಾಗಿ ಈ ಯಾಗಕ್ಕೆ '**ಸರ್ವಪೃಷ್ಠೇಷ್ಟಿ**' ಎಂದು ಹೆಸರಾಗಿದೆ.

ಸರ್ವಪೃಷ್ಠಯಾ ಯಾಜಯೇದೇತಾ ಏವ ದೇವತಾಃ

ಸ್ವೇನ ಭಾಗಧೇಯೇನೋಪಧಾವತಿ ತಾ

ಏವಾಸ್ಮಿನ್ನಿಂದ್ರಿಯಂ ವೀರ್ಯಂ ದಧತಿ

---

ಸರ್ವಪೃಷ್ಠಯೇತಿ ಸರ್ವ–ಪೃಷ್ಠಯಾ । ಯಾಜಯೇತ್ । ಏತಾಃ । ಏವ । ದೇವತಾಃ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ । ತಾಃ । ಏವ । ಅಸ್ಮಿನ್ನ್ । ಇಂದ್ರಿಯಮ್ । ವೀರ್ಯಮ್ । ದಧತಿ ।

---

| | |
|---|---|
| ಸರ್ವಪೃಷ್ಠಯಾ ಯಾಜಯೇತ್ | ಸರ್ವಪೃಷ್ಠಾಯಾಗವನ್ನು ಮಾಡಿಸಬೇಕು. |
| ಏತಾಃ ಏವ ದೇವತಾಃ | [ಯಜಮಾನನು ಈ ಹವಿರ್ಭಾಗವನ್ನು ಕೊಡುವುದರಿಂದ] ಈ ಇಂದ್ರರಾಥಂತರಾದಿ ದೇವತೆಗಳನ್ನು |
| ಸ್ವೇನ ಭಾಗಧೇಯೇನ ಉಪಧಾವತಿ | ಅವರ ಹವಿರ್ಭಾಗವನ್ನಿತ್ತು ಸೇವಿಸುತ್ತಾನೆ. |
| ತಾಃ ಏವ ಅಸ್ಮಿನ್ ಇಂದ್ರಿಯಮ್ ವೀರ್ಯಂ ದಧತಿ | ಆ ದೇವತೆಗಳೇ ತೃಪ್ತರಾಗಿ ಈ ಯಜಮಾನನಲ್ಲಿ ಇಂದ್ರಿಯಶಕ್ತಿಯೂ ದೇಹಶಕ್ತಿಯೂ ನೆಲೆಸುವಂತೆ ಮಾಡುತ್ತಾರೆ. |

---

ಇಂದ್ರಿಯಶಕ್ತಿಯನ್ನೂ, ವೀರ್ಯಶಕ್ತಿಯನ್ನೂ ಬಯಸುವವನು ಈ ಸರ್ವಪೃಷ್ಠಾ ಯಾಗವನ್ನು ಮಾಡಬೇಕು. ಯಜಮಾನನು ಈ ಯಾಗದ ಹವಿಸ್ಸನ್ನು ಕೊಡುವುದರಿಂದ ಇಂದ್ರರಾಥಂತರಾದಿ ದೇವತೆಗಳನ್ನು ತೃಪ್ತಿಪಡಿಸುತ್ತಾನೆ. ಆ ದೇವತೆಗಳು ಪ್ರಸನ್ನರಾಗಿ ಯಜಮಾನನಿಗೆ ಇಂದ್ರಿಯ ವೀರ್ಯಶಕ್ತಿಗಳನ್ನು ಕೊಡುತ್ತಾರೆ.

**ಯದಿಂದ್ರಾಯ ರಾಥಂತರಾಯ ನಿರ್ವಪತಿ ಯದೇವಾಗ್ನೇ ಸ್ತೇಜಸ್ತದೇವಾವರುಂಧೇ ಯದಿಂದ್ರಾಯ ಬಾರ್ಹತಾಯ ಯದೇವೇಂದ್ರಸ್ಯ ತೇಜಸ್ತದೇವಾವರುಂಧೇ ಯದಿಂದ್ರಾಯ ವೈರೂಪಾಯ ಯದೇವ ಸವಿತುಸ್ತೇಜಸ್ತದೇವಾವರುಂಧೇ**

---

**ಯತ್** । ಇಂದ್ರಾಯ । ರಾಥಂತರಾಯೇತಿ ರಾಥಮ್–ತರಾಯ । ನಿರ್ವಪತೀತಿ ನಿಃ–ವಪತಿ । ಯತ್ । ಏವ । ಅಗ್ನೇಃ । ತೇಜಃ । ತತ್ । ಏವ । ಅವೇತಿ । ರುಂಧೇ । ಯತ್ । ಇಂದ್ರಾಯ । ಬಾರ್ಹತಾಯ । ಯತ್ । ಏವ । ಇಂದ್ರಸ್ಯ । ತೇಜಃ । ತತ್ । ಏವ । ಅವೇತಿ । ರುಂಧೇ । ಯತ್ । ಇಂದ್ರಾಯ । ವೈರೂಪಾಯ । ಯತ್ । ಏವ । ಸವಿತುಃ । ತೇಜಃ । ತತ್ । ಏವ । ಅವೇತಿ । ರುಂಧೇ ।

---

**ಯಾಗಫಲದ ವಿವರಣೆ**

| | |
|---|---|
| ಯತ್ ಇಂದ್ರಾಯ ರಾಥಂತರಾಯ ನಿರ್ವಪತಿ | ರಥಂತರಸ್ತೋತ್ರಾಭಿಮಾನಿಯಾದ ದೇವತೆ ಇಂದ್ರನಿಗಾಗಿ ಯಾಗ ಮಾಡುವುದೆಂಬುದು |
| ಯತ್ ಅಗ್ನೇಃ ಏವ ತೇಜಃ ತತ್ ಅವರುಂಧೇ ಏವ | ಅದರಿಂದ ಯಾವ ಅಗ್ನಿಯ ತೇಜಸ್ಸಿದೆಯೋ, ಅದನ್ನೇ ಯಜಮಾನನು ಪಡೆಯುತ್ತಾನೆ. |
| ಯತ್ ಇಂದ್ರಾಯ ಬಾರ್ಹತಾಯ [ನಿರ್ವಪತಿ] | ಬೃಹತ್ಸ್ತೋತ್ರಾಭಿಮಾನಿಯಾದ ಇಂದ್ರನಿಗಾಗಿ ಯಾಗ ಮಾಡುವುದರಿಂದ |
| ಯತ್ ಇಂದ್ರಸ್ಯ ಏವ ತೇಜಃ ತತ್ ಏವ ಅವರುಂಧೇ | ಇಂದ್ರನ ತೇಜಸ್ಸನ್ನು ಯಜಮಾನನು ಪಡೆಯುತ್ತಾನೆ. |
| ಯತ್ ಇಂದ್ರಾಯ ವೈರೂಪಾಯ [ನಿರ್ವಪತಿ] | ವೈರೂಪಸಾಮಾಭಿಮಾನಿದೇವತೆಯಾದ ಇಂದ್ರನಿಗೆ ಯಾಗ ಮಾಡುವುದರಿಂದ |
| ಯತ್ ಸವಿತುಃ ಏವ ತೇಜಃ ತತ್ ಏವ ಅವರುಂಧೇ, | ಸವಿತೃದೇವನ ತೇಜಸ್ಸು ಯಾವುದುಂಟೋ ಅದನ್ನೇ ಪಡೆಯುತ್ತಾನೆ. |

[ತೇಜಸ್ತತ್ (೨) ಏವಾವರುಂಧೇ] ಯದಿಂದ್ರಾಯ

ವೈರಾಜಾಯ ಯದೇವ ಧಾತುಸ್ತೇಜಸ್ತದೇವಾವರುಂಧೇ

ಯದಿಂದ್ರಾಯ ಶಾಕ್ವರಾಯ

---

ಯತ್ । ಇಂದ್ರಾಯ । ವೈರಾಜಾಯ । ಯತ್ । ಏವ । ಧಾತುಃ । ತೇಜಃ । ತತ್ ।

ಏವ । ಅವೇತಿ । ರುಂಧೇ । ಯತ್ । ಇಂದ್ರಾಯ । ಶಾಕ್ವರಾಯ ।

---

| | |
|---|---|
| **ಯತ್ ಇಂದ್ರಾಯ ವೈರಾಜಾಯ [ನಿರ್ವಪತಿ]** | ವೈರಾಜಸಾಮಾಭಿಮಾನಿದೇವತೆಯಾದ ಇಂದ್ರನಿಗಾಗಿ ಯಾಗ ಮಾಡುವುದರಿಂದ |
| **ಯತ್ ಧಾತುಃ ಏವ ತೇಜಃ ತತ್ ಏವ ಅವರುಂಧೇ** | ಧಾತೃದೇವನ ತೇಜಸ್ಸನ್ನೇ [ಆದರಿಂದ] ಪಡೆಯುತ್ತಾನೆ. |
| **ಯತ್ ಇಂದ್ರಾಯ ಶಾಕ್ವರಾಯ [ನಿರ್ವಪತಿ]** | ಶಾಕ್ವರಸಾಮಾಭಿಮಾನಿದೇವತೆಯಾದ ಇಂದ್ರನಿಗಾಗಿ ಹವಿಸ್ಸನ್ನು ಅರ್ಪಿಸುವುದರಿಂದ |

---

ರಾಥಂತರೇಂದ್ರನ ಅನುಗ್ರಹದಿಂದ ಅಗ್ನಿಯ ತೇಜಸ್ಸನ್ನೂ, ಬಾರ್ಹತೇಂದ್ರನ ಅನುಗ್ರಹದಿಂದ ಇಂದ್ರನ ತೇಜಸ್ಸನ್ನೂ, ವೈರೂಪೇಂದ್ರನ ಅನುಗ್ರಹದಿಂದ ಸವಿತೃ ದೇವನ ತೇಜಸ್ಸನ್ನೂ, ವೈರಾಜೇಂದ್ರನ ಅನುಗ್ರಹದಿಂದ ಧಾತೃದೇವನ ತೇಜಸ್ಸನ್ನೂ, ಶಾಕ್ವರೇಂದ್ರನ ಅನುಗ್ರಹದಿಂದ ಮರುದ್ದೇವತೆಗಳ ತೇಜಸ್ಸನ್ನೂ, ರೈವತೇಂದ್ರನ ಪ್ರಸಾದದಿಂದ ಬೃಹಸ್ಪತಿಯ ತೇಜಸ್ಸನ್ನೂ ಯಜಮಾನನು ಪಡೆಯುತ್ತಾನೆ. ಲೋಕದಲ್ಲಿ ತೇಜಸ್ಸುಗಳು ಇಷ್ಟೇ. ಅವೆಲ್ಲವನ್ನೂ ಯಾಗದೇವತೆಗಳ ಪ್ರಸಾದದಿಂದ ಯಜಮಾನನು ಪಡೆಯುತ್ತಾನೆ. ಅವನು ಇಂದ್ರಿಯಶಕ್ತಿಯುಳ್ಳವನೂ, ದೇಹಶಕ್ತಿಯುಳ್ಳವನೂ ಆಗುತ್ತಾನೆ.

ಯದೇವ ಮರುತಾಂ ತೇಜಸ್ತದೇವಾವರುಂಧೇ

ಯದಿಂದ್ರಾಯ ರೈವತಾಯ ಯದೇವ ಬೃಹಸ್ಪತೇಸ್ತೇಜಸ್ತ

ದೇವಾವರುಂಧ ಏತಾವಂತಿ ವೈ ತೇಜಾಗ್ಂಸಿ

ತಾನ್ಯೇವಾವರುಂಧ

---

ಯತ್ । ಏವ । ಮರುತಾಮ್ । ತೇಜಃ । ತತ್ । ಏವ । ಅವೇತಿ । ರುಂಧೇ । ಯತ್ ।

ಇಂದ್ರಾಯ । ರೈವತಾಯ । ಯತ್ । ಏವ । ಬೃಹಸ್ಪತೇಃ । ತೇಜಃ । ತತ್ । ಏವ ।

ಅವೇತಿ । ರುಂಧೇ । ಏತಾವಂತಿ । ವೈ । ತೇಜಾಗ್ಂಸಿ । ತಾನಿ । ಏವ । ಅವೇತಿ । ರುಂಧೇ ।

---

| | |
|---|---|
| ಯತ್ ಮರುತಾಮ್ ಏವ<br>ತೇಜಃ ತತ್ ಏವ ಅವರುಂಧೇ | ಯಜಮಾನನು ಮರುದ್ದೇವತೆಗಳ ತೇಜಸ್ಸನ್ನೇ ಪಡೆಯುತ್ತಾನೆ. |
| ಯತ್ ಇಂದ್ರಾಯ<br>ರೈವತಾಯ [ನಿರ್ವಪತಿ]<br>ಯತ್ ಬೃಹಸ್ಪತೇಃ ಏವ<br>ತೇಜಃ ತತ್ ಏವ ಅವರುಂಧೇ | ರೈವತಸಾಮಾಭಿಮಾನಿದೇವತೆಯಾದ ಇಂದ್ರನಿಗೆ ಹವಿಸ್ಸನ್ನು ಅರ್ಪಿಸುವುದರಿಂದ ಯಾವ ಬೃಹಸ್ಪತಿಯ ತೇಜಸ್ಸುಂಟೋ ಅದನ್ನೇ ಯಜಮಾನನು ಪಡೆಯುತ್ತಾನೆ. |
| ಏತಾವಂತಿ ವೈ ತೇಜಾಗ್ಂಸಿ ತಾನಿ<br>ಏವ ಅವರುಂಧೇ | ತೇಜಸ್ಸುಗಳು ಇಷ್ಟೇ ಆಗಿವೆ. ಅವುಗಳೆಲ್ಲ ವನ್ನೂ ಯಜಮಾನನು ಹೊಂದುತ್ತಾನೆ. |

---

ಮೇಲ್ಮುಖವಾದ ಕಪಾಲಗಳಲ್ಲಿ ಪುರೋಡಾಶವನ್ನು ಬೇಯಿಸಬೇಕು. ಇದರಿಂದ ಪುರೋಡಾಶದ ಸಾರವು ನಾಶವಾಗದಂತಾಗುತ್ತದೆ. ಪುರೋಡಾಶವು ದ್ವಾದಶಕಪಾಲ ವಾದುದರಿಂದ ಎಲ್ಲಾ ದೇವತೆಗಳನ್ನೂ ತೃಪ್ತಿಪಡಿಸಬಲ್ಲುದು. ಹವಿಸ್ಸನ್ನು ಒಂದೇ ಕಡೆ

ಉತ್ತಾನೇಷು ಕಪಾಲೇಷ್ವಧಿಶ್ರಯತ್ಯಯಾತಯಾಮತ್ವಾಯ

ದ್ವಾದಶಕಪಾಲಃ ಪುರೋಡಾಶೋ [ಪುರೋಡಾಶಃ (೩) ಭವತಿ]

ಭವತಿ ವೈಶ್ವದೇವತ್ವಾಯ ಸಮಂತಂ ಪರ್ಯವದ್ಯತಿ

---

**ಉತ್ತಾನೇಷ್ವಿತ್ಯುತ್–ತಾನೇಷು** । ಕಪಾಲೇಷು । ಅಧೀತಿ । ಶ್ರಯತಿ । ಅಯಾತಯಾಮತ್ವಾಯೇತ್ಯಯಾತಯಾಮ – ತ್ವಾಯ । ದ್ವಾದಶಕಪಾಲ ಇತಿ ದ್ವಾದಶ – ಕಪಾಲಃ । ಪುರೋಡಾಶಃ । ಭವತಿ । ವೈಶ್ವದೇವತ್ವಾಯೇತಿ ವೈಶ್ವದೇವ – ತ್ವಾಯ । ಸಮಂತಮಿತಿ ಸಮ್–ಅಂತಮ್ । ಪರ್ಯವದ್ಯತೀತಿ ಪರಿ–ಅವದ್ಯತಿ ।

---

**ಈ ಯಾಗದಲ್ಲಿ ವಿಶೇಷವಿಧಾನ; ಪ್ರಶಂಸೆ**

| | |
|---|---|
| ಉತ್ತಾನೇಷು ಕಪಾಲೇಷು ಅಧಿಶ್ರಯತಿ | ಊರ್ಧ್ವಮುಖವಾಗಿರುವ ಕಪಾಲಗಳಲ್ಲಿ ಪುರೋಡಾಶದ ಪಾಕವನ್ನು ಮಾಡಬೇಕು. |
| ಅಯಾತಯಾಮತ್ವಾಯ | ಇದು ಸಾರವು ಹಾಗೆಯೇ ಉಳಿದು ಪುರೋಡಾಶದಲ್ಲಿ ನೀರಸದೋಷವು ಬರದಿರುವುದಕ್ಕೆ ಕಾರಣವಾಗುತ್ತದೆ. |
| ದ್ವಾದಶಕಪಾಲಃ ಪುರೋಡಾಶಃ ಭವತಿ | ಈ ಸರ್ವಪೃಷ್ಠಾಯಾಗದಲ್ಲಿ ದ್ವಾದಶಕಪಾಲಗಳಲ್ಲಿ ಪಕ್ವವಾದ ಪುರೋಡಾಶವು ಯಾಗಹವಿಸ್ಸಾಗಿದೆ. |
| ವೈಶ್ವದೇವತ್ವಾಯ | ಇಂದ್ರರಾಥಂತರಾದಿ ಸಮಸ್ತದೇವತೆಗಳಿಗೂ ಪ್ರಿಯವಾಗಲು ಈ ಹವಿಸ್ಸು ತಕ್ಕುದಾಗಿದೆ. |
| ಸಮಂತಮ್ ಪರ್ಯವದ್ಯತಿ | ಪೂರ್ವಾರ್ಧದಿಂದ ಆರಂಭಿಸಿ, ಪ್ರದಕ್ಷಿಣವಾಗಿ ಉತ್ತರಾರ್ಧದವರೆಗೂ ಸುತ್ತಲೂ ಅವದಾನ ಮಾಡಬೇಕು. |

---

ತೆಗೆಯದೆ ಸುತ್ತಲೂ ತೆಗೆದು ಹೋಮವನ್ನು ಮಾಡಬೇಕು. ಇದರಿಂದ ಯಜಮಾನನಲ್ಲಿ ಇಂದ್ರಿಯಶಕ್ತಿಯನ್ನೂ, ದೇಹಸಾಮರ್ಥ್ಯವನ್ನೂ ಎಲ್ಲಾ ಕಡೆಗಳಲ್ಲಿಯೂ ಉಂಟು

# ಸಮಂತಮೇವೇಂದ್ರಿಯಂ ವೀರ್ಯಂ ಯಜಮಾನೇ

# ದಧಾತಿ ವ್ಯತ್ಯಾಸಮನ್ವಾಹಾನಿರ್ದಾಹಾಯಾಶ್ವ ಋಷಭೋ

---

ಸಮಂತಮಿತಿ ಸಮ್-ಅಂತಮ್ । ಏವ । ಇಂದ್ರಿಯಮ್ । ವೀರ್ಯಮ್ । ಯಜಮಾನೇ । ದಧಾತಿ । ವ್ಯತ್ಯಾಸಮಿತಿ ವಿ-ಅತ್ಯಾಸಮ್ । ಅನ್ವಿತಿ । ಆಹ । ಅನಿರ್ದಾಹಾಯೇತ್ಯನಿಃ-ದಾಹಾಯ । ಅಶ್ವಃ । ಋಷಭಃ ।

---

| | |
|---|---|
| ಸಮಂತಮ್ ಏವ ಇಂದ್ರಿಯಮ್ ವೀರ್ಯಮ್ ಯಜಮಾನೇ ದಧಾತಿ | ಇದು ಯಜಮಾನನಲ್ಲಿ ಸುತ್ತಲೂ ಇಂದ್ರಿಯ ಶಕ್ತಿಯನ್ನೂ ದೇಹಸಾಮರ್ಥ್ಯವನ್ನೂ ಉಂಟುಮಾಡುತ್ತದೆ. |
| *ವ್ಯತ್ಯಾಸಮ್ ಅನ್ವಾಹ | ಯಾಜ್ಯಾ-ಪುರೋನುವಾಕ್ಯೆಗಳನ್ನು *ವ್ಯತ್ಯಾಸವಾಗಿ ಹೇಳಬೇಕು. |
| ಅನಿರ್ದಾಹಾಯ | ಯಾಜ್ಯಾ-ಪುರೋನುವಾಕ್ಯೆಗಳ ನ್ಯೂನತೆ ಇಲ್ಲದಿರಲು ಇದು ಸಾಧನವಾಗುತ್ತದೆ. |

**ವಿಶೇಷದಕ್ಷಿಣಾವಿಧಿ; ಅದರ ಪ್ರಶಂಸೆ**

| | |
|---|---|
| ಅಶ್ವಃ, ಋಷಭಃ | ಗಂಡು ಕುದುರೆಯೂ, ಹೋರಿಯೂ |

---

ಮಾಡಿದಂತಾಗುತ್ತದೆ. ಯಾಜ್ಯಾ ಪುರೋನುವಾಕ್ಯೆಗಳನ್ನು ವ್ಯತ್ಯಾಸ ಮಾಡಿ ಹೇಳಬೇಕು.

---

* ಯಾಜ್ಯಾ-ಪುರೋನುವಾಕ್ಯೆಗಳ ವ್ಯತ್ಯಾಸವು ಹೀಗೆ;
ಇಲ್ಲಿ ಆರು ಋಕ್ಕುಗಳಿವೆ. ಆರು ಯಾಗಗಳಿವೆ.

| ಯಾಗ | ಪುರೋನುವಾಕ್ಯೆ | ಯಾಜ್ಯಾನುವಾಕ್ಯೆ |
|---|---|---|
| ಪ್ರಥಮ | *ಅಭಿ ತ್ವಾ ಶೂರ... | ತ್ವಾಮಿದ್ಧಿ.. |
| ದ್ವಿತೀಯ | *ತ್ವಾಮಿದ್ಧಿ.. | ಯದ್ದ್ಯಾವ ಇಂದ್ರ... |
| ತೃತೀಯ | *ಯದ್ದ್ಯಾವ ಇಂದ್ರ... | ಪಿಬಾ ಸೋಮಮಿಂದ್ರ... |
| ಚತುರ್ಥ | *ಪಿಬಾ ಸೋಮಮಿಂದ್ರ... | ಕದಾ ಚನ... |
| ಪಂಚಮ | *ಕದಾ ಚನ... | ರೇವತೀರ್ನಃ |
| ಷಷ್ಠ | *ರೇವತೀರ್ನಃ | ಅಭಿ ತ್ವಾ ಶೂರ... |

* ತೈ.ಸಂ. 2.4.14 / 1.4.22

# ವೃಷ್ಣಿರ್ಬಸ್ತಸ್ಸಾ ದಕ್ಷಿಣಾ ವೃಷತ್ವಾಯೈತಯೈವ
# ಯಜೇತಾಭಿಶಸ್ಯಮಾನ ಏತಾಶ್ಚೇದ್ವಾ ಅಸ್ಯ ದೇವತಾ

---

ವೃಷ್ಣಿಃ । ಬಸ್ತಃ । ಸಾ । ದಕ್ಷಿಣಾ । ವೃಷತ್ವಾಯೇತಿ ವೃಷ-ತ್ವಾಯ । ಏತಯಾ । ಏವ । ಯಜೇತ । ಅಭಿಶಸ್ಯಮಾನ ಇತ್ಯಭಿ-ಶಸ್ಯಮಾನಃ । ಏತಾಃ । ಚ । ಇತ್ । ವೈ । ಅಸ್ಯ । ದೇವತಾಃ ।

---

| | |
|---|---|
| ವೃಷ್ಣಿಃ ಬಸ್ತಃ ಸಾ ದಕ್ಷಿಣಾ | ಟಗರೂ, ಹೋತವೂ ಈ ಯಾಗದ ದಕ್ಷಿಣೆಯಾಗಿದೆ. |
| ವೃಷತ್ವಾಯ | (ಆ ದಕ್ಷಿಣೆಯು) ಯಜಮಾನನ ಇಂದ್ರಿಯ ವೀರ್ಯಶಕ್ತಿಗಳಿಗೆ ಕಾರಣವಾಗುತ್ತದೆ. |

**ಮಿಥ್ಯಾಪವಾದಕ್ಕೆ ಗುರಿಯಾದವನಿಗೆ ವಿಹಿತವಾದ ಇದೇ ಇಷ್ಟಿ**

| | |
|---|---|
| ಅಭಿಶಸ್ಯಮಾನಃ | ಮಿಥ್ಯಾಪವಾದಕ್ಕೆ ಗುರಿಯಾದವನು |
| ಏತಯಾ ಏವ ಯಜೇತ | ಈ ಸರ್ವಪೃಷ್ಠಾಯಾಗವನ್ನೇ ಮಾಡಬೇಕು. |
| ಏತಾಃ ಚ ಇತ್ ವೈ ದೇವತಾಃ ಅಸ್ಯ | ಈ ರಾಥಂತರಾದಿದೇವತೆಗಳೇ ಈ ಯಜಮಾನನು ಸಮರ್ಪಿಸುವ ಪುರೋಡಾಶ ರೂಪವಾದ |

---

ಹೀಗೆ ಮಾಡುವುದರಿಂದ ಮಂತ್ರಗಳಿಲ್ಲದೆ ಹವಿಸ್ಸು ನಾಶವಾಗದಂತೆ ಆಗುತ್ತದೆ. ಗಂಡುಕುದುರೆ, ಹೋರಿ, ಟಗರು, ಹೋತಗಳು ಈ ಯಾಗದ ದಕ್ಷಿಣೆಯಾಗಿವೆ. ಇವು ಪ್ರಜೋತ್ಪಾದನಸಮರ್ಥಗಳಾದುದರಿಂದ ಯಜಮಾನನಲ್ಲಿಯೂ ಇಂದ್ರಿಯ ವೀರ್ಯಶಕ್ತಿಗೆ ಕಾರಣವಾಗುತ್ತವೆ.

ವೃಥಾಪವಾದಕ್ಕೆ ಗುರಿಯಾದವನು ಈ ಸರ್ವಪೃಷ್ಠಾಯಾಗವನ್ನು ಅನುಷ್ಠಿಸಬೇಕು.

ಅನ್ನಮದನ್ತ್ಯದನ್ತ್ಯುವೇವಾಸ್ಯ ಮನುಷ್ಯಾಃ ॥೩.೨–7॥

[ಇಂದ್ರಿಯಕಾವಃ ಸವಿತುಸ್ತೇಜಸ್ತತ್ಪುರೋಡಾಶೋಽಷ್ಟಾತ್ರಿಗ್ಂಶಚ್ಚ ।]

---

ಅನ್ನಮ್ । ಅದಂತಿ । ಅದಂತಿ । ಉ । ಏವ । ಅಸ್ಯ । ಮನುಷ್ಯಾಃ ॥7॥

---

ಅನ್ನಮ್ ಅದಂತಿ — ಅನ್ನವನ್ನು ತಿನ್ನುತ್ತಾನೆ (ಅಂದಮೇಲೆ)

ಮನುಷ್ಯಾಃ ಉ ಅಸ್ಯ ಅದಂತಿ ಏವ — ಮನುಷ್ಯರು ಈ ಯಜಮಾನನ ಅನ್ನವನ್ನು ಬಹಿಷ್ಕರಿಸದೇ ತಿಂದೇ ತಿನ್ನುತ್ತಾರೆ.

---

ಈ ಯಾಗದ ಹವಿಸ್ಸನ್ನು ದೇವತೆಗಳೇ ಸ್ವೀಕರಿಸುತ್ತಾರೆಂದಮೇಲೆ ಮನುಷ್ಯರೂ ಬಹಿಷ್ಕರಿಸದೇ ಈ ಯಜಮಾನನ ಅನ್ನವನ್ನು ತಿಂದೇ ತಿನ್ನುತ್ತಾರೆ.

* * *

# ಸಪ್ತಮಾನುವಾಕವಿಷಯಸಂಗ್ರಹ

**ಸಪ್ತಮೇ ಸರ್ವಪೃಷ್ಠೋಕ್ತಾ ವೀರ್ಯಕಾಮಾಭಿಶಸ್ತಯೋಃ ।**

ಈ ಏಳನೆಯ ಅನುವಾಕದಲ್ಲಿ ವೀರ್ಯಕಾಮನಾದವನಿಗೂ, ಮಿಥ್ಯಾಪವಾದಕ್ಕೆ ಗುರಿಯಾದವನಿಗೂ ಸರ್ವಪೃಷ್ಠೇಷ್ಟಿಯು ಹೇಳಲ್ಪಟ್ಟಿತು.

## ಅನುವಾಕದ ವಿಶೇಷವಿಷಯಗಳು

### ಮೀಮಾಂಸಾ

**1. ಸರ್ವಪೃಷ್ಠಾಯಾಗದಲ್ಲಿ ಸ್ವಿಷ್ಟಕೃದಾದಿಗಳು ಎಷ್ಟು ಬಾರಿ ?**

**(ಜೈ.ಸೂ. 3.5.6–7)**

ಈ ಸರ್ವಪೃಷ್ಠಾಯಾಗದಲ್ಲಿ ಇಂದ್ರರಾಥಂತರಾದಿಯಾಗಿ ಆರು ದೇವತೆಗಳಿದ್ದರೂ ದ್ವಾದಶಕಪಾಲಪುರೋಡಾಶವು ಒಂದೇ ಇರುತ್ತದೆ. **'ಸಮಂತಂ ಪರ್ಯವದ್ಯತಿ'** ಎಂಬ ವಚನದಂತೆ ಅವದಾನವನ್ನು ಬೇರೆ ಬೇರೆಯಾಗಿ ಮಾಡಬೇಕು. ಸ್ವಿಷ್ಟಕೃದಾದಿಗಳನ್ನು ಬೇರೆ ಬೇರೆಯಾಗಿ ಆರು ಬಾರಿ ಮಾಡಬೇಕೆ ? ಇದು ಇಲ್ಲಿನ **ಸಂಶಯ.**

ದೇವತೆಗಳು ಬೇರೆಬೇರೆಯಾದುದರಿಂದ ಕರ್ಮಗಳೂ ಬೇರೆಬೇರೆಯಾಗುತ್ತವೆ. ಆದುದರಿಂದ ಆರು ಬಾರಿ ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಶೇಷವು ಒಂದೇ ಆದುದರಿಂದ ಒಂದೇ ಸ್ವಿಷ್ಟಕೃತ್ ಯಾಗವನ್ನು ಅನುಷ್ಠಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

* * *

## ॥ ಅಷ್ಟಮೋಽನುವಾಕಃ ॥

ರಜನೋ ವೈ ಕೌಣೇಯಃ ಕ್ರತುಜಿತಂ ಜಾನಕಿಂ

ಚಕ್ಷುರ್ವನ್ಯಮಯಾತ್ತಸ್ಮೈ ಏತಾಮಿಷ್ಟಿಂ ನಿರವಪದಗ್ನಯೇ

ಭ್ರಾಜಸ್ವತೇ ಪುರೋಡಾಶಮಷ್ಟಾಕಪಾಲಗ್ಂ

---

ರಜನಃ । ವೈ । ಕೌಣೇಯಃ । ಕ್ರತುಜಿತಮಿತಿ ಕ್ರತು–ಜಿತಮ್ । ಜಾನಕಿಮ್ । ಚಕ್ಷುರ್ವನ್ಯಮಿತಿ ಚಕ್ಷುಃ–ವನ್ಯಮ್ । ಅಯಾತ್ । ತಸ್ಮೈ । ಏತಾಮ್ । ಇಷ್ಟಿಮ್ । ನಿರಿತಿ । ಅವಪತ್ । ಅಗ್ನಯೇ । ಭ್ರಾಜಸ್ವತೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ– ಕಪಾಲಮ್ ।

---

### ಚಕ್ಷುಷ್ಕಾಮನಿಗೆ ವಿಹಿತವಾದ ಇಷ್ಟಿ; ಅರ್ಥವಾದ

| | |
|---|---|
| ಕೌಣೇಯಃ ವೈ ರಜನಃ | ಕುಣಿಯ ಮಗನಾದ ರಜನಮುನಿಯು |
| ಜಾನಕಿಮ್ ಕ್ರತುಜಿತಮ್ ಚಕ್ಷುರ್ವನ್ಯಮ್ ಅಯಾತ್ | ನೇತ್ರರೋಗವನ್ನು ಪರಿಹರಿಸಿ, ದೃಷ್ಟಿಯನ್ನು ಕೊಡಬಲ್ಲ ಜನಕಮುನಿಯ ಮಗನಾದ ಕ್ರತುಜಿತನ ಬಳಿ ಹೋದನು. |
| ತಸ್ಮೈ ಏತಾಮ್ ಇಷ್ಟಿಮ್ ನಿರವಪತ್ | ಕ್ರತುಜಿತನು ರಜನಮುನಿಯಿಂದ ಈ ದೃಷ್ಟಿಕಾಮೇಷ್ಟಿಯನ್ನು ಮಾಡಿಸಿದನು. |
| ಅಗ್ನಯೇ ಭ್ರಾಜಸ್ವತೇ ಪುರೋಡಾಶಮ್ ಅಷ್ಟಾಕಪಾಲಮ್ | ಭ್ರಾಜಸ್ವಂತನಾದ ಅಗ್ನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನೂ, |

---

ಕುಣಿಯ ಮಗನಾದ ರಜನನೆಂಬ ಮುನಿಯು ದೃಷ್ಟಿಪಾಟವವನ್ನು ಉಂಟು ಮಾಡಲು ಶಕ್ತನಾದ ಜನಕನ ಮಗನಾದ ಕ್ರತುಜಿತನೆಂಬ ಮುನಿಯ ಬಳಿಗೆ ಒಳ್ಳೆಯ ಕಣ್ಣಿನ ಶಕ್ತಿಯನ್ನು ಬಯಸಿ ಬಂದನು. ಅವನಿಗಾಗಿ ಆ ಕ್ರತುಜಿತನು ಭ್ರಾಜಸ್ವಂತನಾದ ಅಗ್ನಿಯನ್ನು ಉದ್ದೇಶಿಸಿ ಅಷ್ಟಾಕಪಾಲಪುರೋಡಾಶಯಾಗವನ್ನೂ,

ಸೌರ್ಯಂ ಚರುಮಗ್ನಯೇ ಭ್ರಾಜಸ್ವತೇ ಪುರೋಡಾಶ ಮಷ್ಟಾಕಪಾಲಂ ತಯೈವಾಸ್ಮಿಂಶ್ಚಕ್ಷುರದಧಾದ್ಯಶ್ಚಕ್ಷುಷ್ಕಾಮ ಸ್ಸ್ಯಾತ್ತಸ್ಮಾ ಏತಾಮಿಷ್ಟಿಂ ನಿರ್ವಪೇದಗ್ನಯೇ ಭ್ರಾಜಸ್ವತೇ

---

ಸೌರ್ಯಮ್। ಚರುಮ್। ಅಗ್ನಯೇ। ಭ್ರಾಜಸ್ವತೇ। ಪುರೋಡಾಶಮ್। ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್। ತಯಾ। ಏವ। ಅಸ್ಮಿನ್ನ್। ಚಕ್ಷುಃ। ಅದಧಾತ್। ಯಃ। ಚಕ್ಷುಷ್ಕಾಮ ಇತಿ ಚಕ್ಷುಃ–ಕಾಮಃ। ಸ್ಯಾತ್। ತಸ್ಮೈ। ಏತಾಮ್। ಇಷ್ಟಿಮ್। ನಿರಿತಿ। ವಪೇತ್। ಅಗ್ನಯೇ। ಭ್ರಾಜಸ್ವತೇ।

---

| | |
|---|---|
| ಸೌರ್ಯಮ್ ಚರುಮ್ | ಸೂರ್ಯನಿಗಾಗಿ ಚರುಯಾಗವನ್ನೂ |
| ಅಗ್ನಯೇ ಭ್ರಾಜಸ್ವತೇ ಪುರೋಡಾಶಮ್ ಅಷ್ಟಾಕಪಾಲಮ್ | ಭ್ರಾಜಸ್ವಂತನಾದ ಅಗ್ನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನೂ [ಮಾಡಬೇಕು]. [ಮಾಡಿದನು]. |
| ತಯಾ ಏವ ಅಸ್ಮಿನ್ ಚಕ್ಷುಃ ಅದಧಾತ್ | ಈ ಮೂರು ಹವಿಸ್ಸುಗಳುಳ್ಳ ಇಷ್ಟಿಯಿಂದಲೇ ಈ ರಜನಮುನಿಯಲ್ಲಿ ಒಳ್ಳೆಯ ಕಣ್ಣುಗಳನ್ನು ಉಂಟು ಮಾಡಿದನು. |

**ಯಾಗವಿಧಿ**

| | |
|---|---|
| ಯಃ ಚಕ್ಷುಷ್ಕಾಮಃ ಸ್ಯಾತ್ ತಸ್ಮೈ ಏತಾಮ್ ಇಷ್ಟಿಮ್ ನಿರ್ವಪೇತ್ | ಯಾವನು ಒಳ್ಳೆಯ ಕಣ್ಣುಗಳನ್ನು ಬಯಸುತ್ತಾನೆಯೋ ಅವನಿಗಾಗಿ ಈ ಯಾಗವನ್ನು ಅನುಷ್ಠಿಸಬೇಕು. |
| ಅಗ್ನಯೇ ಭ್ರಾಜಸ್ವತೇ | ಭ್ರಾಜಸ್ವಂತನಾದ ಅಗ್ನಿಗಾಗಿ |

---

ಸೂರ್ಯನಿಗಾಗಿ ಚರುಯಾಗವನ್ನೂ, ಭ್ರಾಜಸ್ವಂತನಾದ ಅಗ್ನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನೂ ಮಾಡಿಸಿದನು. ಇದು ಮೂರು ಹವಿಸ್ಸುಗಳನ್ನೊಳಗೊಂಡ

## ಪುರೋಡಾಶಮಷ್ಟಾಕಪಾಲಗ್ಂ ಸೌರ್ಯಂ ಚರುಮಗ್ನಯೇ ಭ್ರಾಜಸ್ವತೇ ಪುರೋಡಾಶಮಷ್ಟಾಕಪಾಲ ಮಗ್ನೇರ್ವೈ ಚಕ್ಷುಷಾ ಮನುಷ್ಯಾ ವಿಪಶ್ಯಂತಿ

---

ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ– ಕಪಾಲಮ್ । ಸೌರ್ಯಮ್ । ಚರುಮ್ । ಅಗ್ನಯೇ । ಭ್ರಾಜಸ್ವತೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ । ಅಗ್ನೇಃ । ವೈ । ಚಕ್ಷುಷಾ । ಮನುಷ್ಯಾಃ । ವೀತಿ । ಪಶ್ಯಂತಿ ।

---

| | |
|---|---|
| ಅಷ್ಟಾಕಪಾಲಮ್ ಪುರೋಡಾಶಮ್ | ಅಷ್ಟಾಕಪಾಲಪುರೋಡಾಶಯಾಗವನ್ನೂ |
| ಸೌರ್ಯಮ್ ಚರುಮ್ | ಸೂರ್ಯದೇವನಿಗಾಗಿ ಚರುಯಾಗವನ್ನೂ |
| ಅಗ್ನಯೇ ಭ್ರಾಜಸ್ವತೇ ಪುರೋಡಾಶಮ್ ಅಷ್ಟಾಕಪಾಲಮ್ | ಭ್ರಾಜಸ್ವಂತನಾದ ಅಗ್ನಿದೇವನಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನೂ [ಮಾಡಬೇಕು]. |

**ಯಾಗದ ಪ್ರಶಂಸೆ**

| | |
|---|---|
| ಅಗ್ನೇಃ ಚಕ್ಷುಷಾ ಮನುಷ್ಯಾಃ ವಿಪಶ್ಯಂತಿ ವೈ | ಅಗ್ನಿಯ ಜ್ವಾಲೆಯಂತೆ ಅನಿತ್ಯವಾದ ಕಣ್ಣಿನ ಪ್ರಕಾಶದಿಂದ ಮನುಷ್ಯರು ನೋಡುತ್ತಾರೆ. |

---

ಇಷ್ಟಿಯಾಗಿದೆ. ಈ ಯಾಗದಿಂದ ಸುಪ್ರೀತರಾದ ಅಗ್ನಿ–ಸೂರ್ಯರ ಅನುಗ್ರಹದಿಂದ ರಜನಮುನಿಗೆ ಒಳ್ಳೆಯ ದೃಷ್ಟಿಪಾಟವವನ್ನು ಉಂಟುಮಾಡಿದನು.

ಒಳ್ಳೆಯ ದೃಷ್ಟಿಪಾಟವವನ್ನು ಬಯಸುವವನು ಮೊದಲಿನಲ್ಲಿ ಮತ್ತು ಕಡೆಯಲ್ಲಿ ಭ್ರಾಜಸ್ವಂತನಾದ ಅಗ್ನಿಗಾಗಿ ಅಷ್ಟಾಕಪಾಲಪುರೋಡಾಶಯಾಗ, ಮಧ್ಯದಲ್ಲಿ ಸೂರ್ಯನಿಗಾಗಿ ಚರುಯಾಗ – ಹೀಗೆ ಮೂರು ಹವಿಸ್ಸುಗಳುಳ್ಳ ಇಷ್ಟಿಯನ್ನು ಮಾಡಬೇಕು. [ವಿಧಿ]

[ವಿ(೧) ಪಶ್ಯಂತಿ] ಸೂರ್ಯಸ್ಯ ದೇವಾ ಅಗ್ನಿಂ ಚೈವ ಸೂರ್ಯಂ
ಚ ಸ್ವೇನ ಭಾಗಧೇಯೇನೋಪಧಾವತಿ ತಾವೇವಾಸ್ಮಿ-
ಞ್ಚಕ್ಷುರ್ಧತ್ತಶ್ಚಕ್ಷುಷ್ಮಾನೇವ ಭವತಿ ಯದಾಗ್ನೇಯೌ

---

ಸೂರ್ಯಸ್ಯ । ದೇವಾಃ । ಅಗ್ನಿಮ್ । ಚ । ಏವ । ಸೂರ್ಯಮ್ । ಚ । ಸ್ವೇನ । ಭಾಗ
ಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ತೌ । ಏವ । ಅಸ್ಮಿನ್ । ಚಕ್ಷುಃ ।
ಧತ್ತಃ । ಚಕ್ಷುಷ್ಮಾನ್ । ಏವ । ಭವತಿ । **ಯತ್** । ಆಗ್ನೇಯೌ ।

---

| | |
|---|---|
| ಸೂರ್ಯಸ್ಯ [ಚಕ್ಷುಷಾ] ದೇವಾಃ [ವಿಪಶ್ಯಂತಿ] | ಸೂರ್ಯನ ಪ್ರಕಾಶದಂತೆ ನಿತ್ಯಪ್ರಕಾಶವುಳ್ಳ ಕಣ್ಣಿನಿಂದ ಅನಿಮಿಷರಾದ [ರೆಪ್ಪೆಯಿಲ್ಲದ] ದೇವತೆಗಳು ನೋಡುತ್ತಾರೆ. |
| ಅಗ್ನಿಮ್ ಚ ಸೂರ್ಯಮ್ ಚೈವ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ಈ ಯಾಗದ ಹವಿಃಪ್ರದಾನದಿಂದ ಅಗ್ನಿಯನ್ನೂ ಸೂರ್ಯನನ್ನೂ ಸೇವಿಸುತ್ತಾನೆ. |
| ತೌ ಏವ ಅಸ್ಮಿನ್ ಚಕ್ಷುಃ ಧತ್ತಃ | ಆ ಅಗ್ನಿ-ಸೂರ್ಯರೇ ಈ ಯಜಮಾನನಲ್ಲಿ ಪ್ರಕಾಶಯುಕ್ತವಾದ ಕಣ್ಣುಗಳನ್ನುಂಟು ಮಾಡುತ್ತಾರೆ. |
| ಚಕ್ಷುಷ್ಮಾನ್ ಏವ ಭವತಿ | ಯಜಮಾನನು ಚಕ್ಷುಷ್ಮಂತನೇ ಆಗುತ್ತಾನೆ. |

**ಯಾಗಪ್ರಶಂಸೆ**

| | |
|---|---|
| ಯತ್ ಆಗ್ನೇಯೌ ಭವತಃ | ಅಗ್ನಿದೇವತಾಕವಾದ ಎರಡು ಯಾಗಗಳೆಂಬುದು ಯಾವುದುಂಟೋ |

---

ಅಗ್ನಿರೂಪವಾದ ಕಣ್ಣುಗಳಿಂದ ಮನುಷ್ಯರು ನೋಡುತ್ತಾರೆ. ಸೂರ್ಯನೆಂಬ ಕಣ್ಣಿನಿಂದ ದೇವತೆಗಳು ನೋಡುತ್ತಾರೆ. ಈ ಮೂರು ಹವಿಸ್ಸುಗಳುಳ್ಳ ಇಷ್ಟಿಯಿಂದ ಅಗ್ನಿ-ಸೂರ್ಯರು ಸುಪ್ರೀತರಾಗುತ್ತಾರೆ. ಕಣ್ಣಿನ ದೋಷಗಳನ್ನು ಪರಿಹರಿಸಿ ಒಳ್ಳೆಯ ದೃಷ್ಟಿಯನ್ನು ಕೊಡುತ್ತಾರೆ. ಯಜಮಾನನು ಕಣ್ಣಿನ ದೋಷವಿಲ್ಲದವನಾಗಿ ದೃಷ್ಟಿಪಾಟವವನ್ನು ಪಡೆದು ಚಕ್ಷುಷ್ಮಂತನಾಗುತ್ತಾನೆ.

ಭವತಶ್ಚಕ್ಷುಷೀ ಏವಾಸ್ಮಿನ್ತತ್ಪ್ರತಿದಧಾತಿ ಯತ್ಸೌರ್ಯೋ ನಾಸಿಕಾಂ

ತೇನಾಭಿತಸ್ಸೌರ್ಯಮಾಗ್ನೇಯೌ ಭವತಸ್ತಸ್ಮಾದಭಿತೋ

ನಾಸಿಕಾಂ ಚಕ್ಷುಷೀ ತಸ್ಮಾನ್ನಾಸಿಕಯಾ ಚಕ್ಷುಷೀ ವಿಧೃತೇ

---

ಭವತಃ। ಚಕ್ಷುಷೀ ಇತಿ। ಏವ। ಅಸ್ಮಿನ್ನ್। ತತ್। ಪ್ರತೀತಿ। ದಧಾತಿ। ಯತ್। ಸೌರ್ಯಃ।
ನಾಸಿಕಾಮ್। ತೇನ। ಅಭಿತಃ। ಸೌರ್ಯಮ್। ಆಗ್ನೇಯೌ। ಭವತಃ। ತಸ್ಮಾತ್। ಅಭಿತಃ।
ನಾಸಿಕಾಮ್। ಚಕ್ಷುಷೀ ಇತಿ। ತಸ್ಮಾತ್। ನಾಸಿಕಯಾ। ಚಕ್ಷುಷೀ ಇತಿ। ವಿಧೃತೇ ಇತಿ
ವಿ–ಧೃತೇ।

---

| | |
|---|---|
| ತತ್ ಅಸ್ಮಿನ್ ಚಕ್ಷುಷೀ ಏವ ಪ್ರತಿದಧಾತಿ | ಅದು ಈ ಯಜಮಾನನಲ್ಲಿ ದೃಷ್ಟಿದೋಷವನ್ನು ದೂರ ಮಾಡಿ ಉತ್ತಮವಾದ ಎರಡು ಕಣ್ಣುಗಳನ್ನು ನೀಡುತ್ತದೆ. |
| ಯತ್ ಸೌರ್ಯಃ ನಾಸಿಕಾಮ್ ತೇನ | ಸೂರ್ಯದೇವತಾಕವಾದ ಯಾವ ಯಾಗವುಂಟೋ ಅದರಿಂದ [ಕಣ್ಣಿಗೆ ಆಧಾರವಾದ] ಮೂಗನ್ನು ಈ ಯಾಗವು ಉಂಟುಮಾಡುತ್ತದೆ. |
| ಸೌರ್ಯಮ್ ಅಭಿತಃ ಆಗ್ನೇಯೌ ಭವತಃ | ಸೌರ್ಯಯಾಗದ ಮೊದಲಿನಲ್ಲಿಯೂ ಕೊನೆಯಲ್ಲಿಯೂ ಆಗ್ನೇಯಯಾಗಗಳಿವೆ. |
| ತಸ್ಮಾತ್ ನಾಸಿಕಾಮ್ ಅಭಿತಃ ಚಕ್ಷುಷೀ ತಸ್ಮಾತ್ ನಾಸಿಕಯಾ ಚಕ್ಷುಷೀ ವಿಧೃತೇ | ಆದುದರಿಂದ ಮೂಗಿನ ಉಭಯಪಾರ್ಶ್ವಗಳಲ್ಲಿಯೂ ಕಣ್ಣುಗಳಿವೆ. ಆದುದರಿಂದಲೇ ಮೂಗಿನಿಂದ ಕಣ್ಣುಗಳು ಧರಿಸಲ್ಪಟ್ಟಿವೆ. |

---

ಎರಡು ಆಗ್ನೇಯಯಾಗಗಳು ಎರಡು ಕಣ್ಣುಗಳನ್ನು ಕೊಡುತ್ತವೆ. ಮಧ್ಯದಲ್ಲಿರುವ ಸೌರ್ಯಯಾಗವು ಮೂಗನ್ನು ಕೊಡುತ್ತದೆ. ಆದರಂತೆಯೇ ಲೋಕದಲ್ಲಿಯೂ ಕಣ್ಣುಗಳಿಗೆ ಮೂಗು ಆಧಾರವಾಗಿದೆ.

ಸಮಾನೀ ಯಾಜ್ಯಾನುವಾಕ್ಯೇ ಭವತಃ ಸಮಾನಗ್ಂ

ಹಿ ಚಕ್ಷುಃ ಸಮೃದ್ಧ್ಯಾ ಉದು ತ್ಯಂ ಜಾತವೇದಸಗ್ಂ

ಸಪ್ತ ತ್ವಾ ಹರಿತೋ ರಥೇ

---

**ಸಮಾನೀ ಇತಿ** । ಯಾಜ್ಯಾನುವಾಕ್ಯೇ ಇತಿ ಯಾಜ್ಯಾ–ಅನುವಾಕ್ಯೇ । ಭವತಃ । ಸಮಾನಮ್ । ಹಿ । ಚಕ್ಷುಃ । ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ । **ಉದಿತಿ** । ಉ । ತ್ಯಮ್ । ಜಾತವೇದಸಮಿತಿ ಜಾತ–ವೇದಸಮ್ । **ಸಪ್ತ** । ತ್ವಾ । ಹರಿತಃ । ರಥೇ ।

---

**ಯಾಗಕ್ಕೆ ಸಂಬಂಧಿಸಿದ ವಿಶೇಷವಿಧಿ; ಪ್ರಶಂಸೆ**

| | |
|---|---|
| ಸಮಾನೀ ಯಾಜ್ಯಾನುವಾಕ್ಯೇ ಭವತಃ | ಆಗ್ನೇಯಯಾಗಗಳಿಗೆ ***'ಉದಗ್ನೇ ಶುಚಯಃ' *'ವಿ ಜ್ಯೋತಿಷಾ ಬೃಹತಾ'** ಎಂಬ ಪುರೋನುವಾಕ್ಯೆ – ಯಾಜ್ಯಾನುವಾಕ್ಯೆಗಳು ಸಮಾನವಾಗಿವೆ. |
| ಸಮಾನಮ್ ಹಿ ಚಕ್ಷುಃ ಸಮೃದ್ಧ್ಯೈ | ಎರಡು ಕಣ್ಣುಗಳೂ ಸಮಾನವಾಗಿಯೇ ಇವೆಯಷ್ಟೆ. ಆದುದರಿಂದ ಇದು ಕಣ್ಣುಗಳ ಸಮಾನವಾದ ದೃಷ್ಟಿಪಾಟವಕ್ಕೆ ಕಾರಣವಾಗುತ್ತದೆ. |

**ಈ ಯಾಗದಲ್ಲಿ ಇನ್ನೊಂದು ವಿಶೇಷವಿಧಿ; ಪ್ರಶಂಸೆ**

| | |
|---|---|
| *ಉದು ತ್ಯಮ್ ಜಾತವೇದಸಮ್ *ಸಪ್ತ ತ್ವಾ ಹರಿತೋ ರಥೇ | **'ಉದು ತ್ಯಮ್' 'ಸಪ್ತ ತ್ವಾ'** |

---

ಆಗ್ನೇಯಯಾಗಗಳಿಗೆ ಪುರೋನುವಾಕ್ಯೆ – ಯಾಜ್ಯಾನುವಾಕ್ಯೆಗಳು ಸಮಾನವಾಗಿವೆ. ಇದು ಸಮಾನವಾದ ದೃಷ್ಟಿಪಾಟವವನ್ನು ಉಂಟುಮಾಡುತ್ತದೆ.

ಅಧ್ವರ್ಯುವು ಯಜಮಾನನಿಗೆ

---

* ತೈ.ಸಂ. 1.4.43; 2.4.14;

ಚಿತ್ರಂ ದೇವಾನಾಮುದಗಾದನೀಕಮಿತಿ ಪಿಂಡಾನ್ಪ್ರಯಚ್ಛತಿ

ಚಕ್ಷುರೇವಾಸ್ಮೈ ಪ್ರಯಚ್ಛತಿ ಯದೇವ ತಸ್ಯ ತತ್ ||೩೪–8||

[ಏ ಹ್ಯಷ್ಟಾವಿಗ್ಂಶತಿಶ್ಚ ।]

---

ಚಿತ್ರಮ್ । ದೇವಾನಾಮ್ । ಉದಿತಿ । ಅಗಾತ್ । ಅನೀಕಮ್ । ಇತಿ । ಪಿಂಡಾನ್ । ಪ್ರೇತಿ । ಯಚ್ಛತಿ । ಚಕ್ಷುಃ । ಏವ । ಅಸ್ಮೈ । ಪ್ರೇತಿ । ಯಚ್ಛತಿ । ಯತ್ । ಏವ । ತಸ್ಯ । ತತ್ ||8||

---

| | |
|---|---|
| *ಚಿತ್ರಮ್ ದೇವಾನಾಮ್ ಉದ್ ಅಗಾತ್ ಅನೀಕಮ್ ಇತಿ ಪಿಂಡಾನ್ ಪ್ರಯಚ್ಛತಿ | **ಚಿತ್ರಂ ದೇವಾನಾಮ್'** ಮಂತ್ರಗಳಿಂದ ಸೌರ್ಯಚರುವಿನಿಂದ ಮೂರು ಉಂಡೆಗಳನ್ನು ಮಾಡಿ ಅಧ್ವರ್ಯುವು ಯಜಮಾನನಿಗೆ ಕೊಡಬೇಕು. |
| ಚಕ್ಷುಃ ಏವ ಅಸ್ಮೈ ಪ್ರಯಚ್ಛತಿ ತಸ್ಯ ಯತ್ ತತ್ ಏವ | ಮೊದಲಿನ ದೃಢಪ್ರಕಾಶವುಳ್ಳ ಕಣ್ಣುಗಳನ್ನೇ ಕೊಟ್ಟಂತಾಗುತ್ತದೆ. |

---

**'ಉದು ತ್ಯಮ್' 'ಸಪ್ತ ತ್ವಾ' ಚಿತ್ರಮ್ ದೇವಾನಾಮ್'** ಮಂತ್ರಗಳಿಂದ ಸೌರ್ಯ ಚರುವಿನ ಮೂರು ಉಂಡೆಗಳನ್ನು ನೀಡಬೇಕು. ಇದರಿಂದ ಕಣ್ಣಿನ ರೋಗವು ಬರುವ ಮೊದಲು ಇದ್ದ ಚೆನ್ನಾದ ಕಣ್ಣುಗಳನ್ನೇ ನೀಡಿದಂತಾಗುತ್ತದೆ.

* * *

## ಅಷ್ಟಮಾನುವಾಕವಿಷಯಸಂಗ್ರಹ

**ಅಷ್ಟಮೇ ದೃಷ್ಟಿಕಾಮಸ್ಯ ತ್ರಿಹವಿಷ್ಕೇಷ್ಟಿರೀರಿತಾ ।**

ಈ ಎಂಟನೆಯ ಅನುವಾಕದಲ್ಲಿ ದೃಷ್ಟಿಪಾಟವವನ್ನು ಬಯಸುವವನಿಗಾಗಿ ಮೂರು ಹವಿಸ್ಸಿನ ಇಷ್ಟಿಯು ಹೇಳಲ್ಪಟ್ಟಿದೆ.

---

* ತೈ.ಸಂ. 1.4.43.

## ॥ ನವಮೋऽನುವಾಕಃ ॥

**ಧ್ರುವೋऽಸಿ ಧ್ರುವೋऽಹಗ್ಂ ಸಜಾತೇಷು**

**ಭೂಯಾಸಂ ಧೀರಶ್ಚೇತ್ತಾ ವಸುವಿದ್ಧ್ರುವೋऽಸಿ**

---

**ಪ॥** **ಧ್ರುವಃ** । ಅಸಿ । ಧ್ರುವಃ । ಅಹಮ್ । ಸಜಾತೇಷ್ವಿತಿ ಸ–ಜಾತೇಷು । ಭೂಯಾಸಮ್ । ಧೀರಃ । ಚೇತ್ತಾ । ವಸುವಿದಿತಿ ವಸು–ವಿತ್ । **ಧ್ರುವಃ** । ಅಸಿ ।

---

**ಈ ಒಂಬತ್ತನೆಯ ಅನುವಾಕದಲ್ಲಿ ಸಾಂಗ್ರಹಣೇಷ್ಟಿಯನ್ನು ವಿಧಾನ ಮಾಡ ಲಾಗಿದೆ. ಆ ಇಷ್ಟಿಯಲ್ಲಿ ಪರಿಧಿಗಳನ್ನು ಇಡಲು ಪ್ರಕೃತಿಯಾಗದಿಂದ ಅತಿದೇಶದ ಮೂಲಕ ಮಂತ್ರಗಳು ಪ್ರಾಪ್ತವಾಗುವುವು. ಅವುಗಳ ಸ್ಥಾನದಲ್ಲಿ ಈ ಇಷ್ಟಿಗಾಗಿ ಬೇರೆಯ ಮಂತ್ರಗಳು ಶ್ರುತಿಯಲ್ಲಿ ಇವೆ. ಅವೇ 'ಧ್ರುವೋऽಸಿ' ಮುಂತಾದ ಮೂರು ಮಂತ್ರಗಳು.**

| **ಮಂತ್ರ** | **ವಿನಿಯೋಗ** |
| --- | --- |
| **ಧ್ರುವೋऽಸಿ......... ವಸುವಿತ್ ।** | ಮಧ್ಯಮಪರಿಧಿಯನ್ನು ಇಡಲು |
| **ಧ್ರುವೋऽಸಿ.... ಉಗ್ರಃ... ವಸುವಿತ್ ।** | ದಕ್ಷಿಣಪರಿಧಿಯನ್ನು ಇಡಲು |

---

❖ **ಧ್ರುವಃ ಅಸಿ** = [ಎಲೈ ಮಧ್ಯಮಪರಿಧಿಯೇ! ನೀನು] ಸ್ಥಿರನಾಗಿರುತ್ತೀಯೆ; **ಅಹಮ್** = [ನಿನ್ನನ್ನು ಇಡುವುದರಿಂದ] ನಾನೂ; **ಸಜಾತೇಷು** = ಜ್ಞಾತಿಮಿತ್ರಾದಿಗಳಲ್ಲಿ; **ಧ್ರುವಃ ಭೂಯಾಸಮ್** = ಸ್ಥಿರನಾಗುವೆನು; **ಧೀರಃ** = ಧೈರ್ಯಶಾಲಿಯೂ; **ಚೇತ್ತಾ** = ಜ್ಞಾನಿಯೂ; **ವಸುವಿತ್** = ಧನಿಕನೂ ಆಗುವೆನು. ❖ **ಧ್ರುವಃ ಅಸಿ** = [ಎಲೈ ! ದಕ್ಷಿಣ ಪರಿಧಿಯೇ ! ನೀನು] ಸ್ಥಿರನಾಗಿದ್ದೀಯೆ.

---

ಎಲೈ ! ಮಧ್ಯಮಪರಿಧಿಯೇ ! ನೀನು ನಿತ್ಯನು. ನಿನ್ನನ್ನು ಅಗ್ನಿಯ ಪಶ್ಚಾದ್ಭಾಗದಲ್ಲಿ ಇಡುವುದರಿಂದ ನಾನೂ ಸಹ ಸ್ಥಿರನೂ, ಜ್ಞಾನಿಯೂ, ಧನಿಕನೂ ಆಗಿ ಜ್ಞಾತಿಮಿತ್ರಾದಿ ಗಳಲ್ಲಿ ಶ್ರೇಷ್ಠನಾಗುವೆನು.

**ಧ್ರುವೋಽಹಗ್ಂ ಸಜಾತೇಷು ಭೂಯಾಸಮುಗ್ರಶ್ಚೇತ್ತಾ**

**ವಸುವಿದ್ಧ್ರುವೋಽಸಿ ಧ್ರುವೋಽಹಗ್ಂ ಸಜಾತೇಷು**

**ಭೂಯಾಸಮಭಿಭೂಶ್ಚೇತ್ತಾ**

---

ಧ್ರುವಃ। ಅಹಮ್। ಸಜಾತೇಷ್ವಿತಿ ಸ–ಜಾತೇಷು। ಭೂಯಾಸಮ್। ಉಗ್ರಃ। ಚೇತ್ತಾ।

ವಸುವಿದಿತಿ ವಸು–ವಿತ್। ಧ್ರುವಃ। ಅಸಿ। ಧ್ರುವಃ। ಅಹಮ್। ಸಜಾತೇಷ್ವಿತಿ

ಸ–ಜಾತೇಷು। ಭೂಯಾಸಮ್। ಅಭಿಭೂರಿತ್ಯಭಿ–ಭೂಃ। ಚೇತ್ತಾ।

---

| ಮಂತ್ರ | ವಿನಿಯೋಗ |
|---|---|
| ಧ್ರುವೋಽಸಿ......... ಅಭಿಭೂಃ.. ...........ವಸುವಿತ್। | ಉತ್ತರಪರಿಧಿಯನ್ನು ಇಡಲು |

---

**ಅಹಮ್** = [ನಿನ್ನನ್ನು ಇಡುವುದರಿಂದ] ನಾನೂ; **ಸಜಾತೇಷು** = ಜ್ಞಾತಿಭೃತ್ಯಾದಿಗಳ ಮಧ್ಯದಲ್ಲಿ; **ಧ್ರುವಃ ಭೂಯಾಸಮ್** = ಸ್ಥಿರನಾಗುವೆನು. **ಉಗ್ರಃ** = ಬೇರೆಯವರು ಆಜ್ಞೆಯನ್ನು ಮೀರಲು ಅಂಜುವಂತೆ ಮಾಡುವವನೂ; **ಚೇತ್ತಾ** = ಜ್ಞಾನಿಯೂ; **ವಸುವಿತ್** = ಹಣವಂತನೂ [ಆಗುವೆನು] ❖ **ಧ್ರುವಃ ಅಸಿ** = [ಎಲೈ ! ಉತ್ತರ ಪರಿಧಿಯೇ ! ನೀನು] ನಿತ್ಯನಾಗಿದ್ದೀಯೆ; **ಅಹಮ್** = [ನಿನ್ನನ್ನು ಇಡುವುದರಿಂದ] ನಾನು; **ಸಜಾತೇಷು** = ಜ್ಞಾತಿಗಳಲ್ಲಿ; **ಧ್ರುವಃ ಭೂಯಾಸಮ್** = ಸ್ಥಿರನಾಗುವೆನು. **ಅಭಿಭೂಃ** = ವಿರೋಧಿಗಳನ್ನು ಸೋಲಿಸುವವನೂ; **ಚೇತ್ತಾ** = ತಿಳಿದವನೂ;

---

ಎಲೈ ! ದಕ್ಷಿಣಪರಿಧಿಯೇ ! ನೀನೂ ಸ್ಥಿರನು. ನಿನ್ನನ್ನು ಇಡುವುದರಿಂದ ಜ್ಞಾತ್ಯಾದಿಗಳಲ್ಲಿ ಪ್ರತಿವಾದಿಗಳಿಗೆ ಭಯಂಕರನೂ, ತಿಳಿದವನೂ, ಹಣವಂತನೂ ಆಗುವೆನು.

ಎಲೈ ! ಉತ್ತರಪರಿಧಿಯೇ ! ನೀನು ಸ್ಥಿರನು. ನಿನ್ನನ್ನು ಇಡುವುದರಿಂದ ನಾನು ಜ್ಞಾತಿ–ಮಿತ್ರ–ಭೃತ್ಯಾದಿಗಳಲ್ಲಿ ವಿರೋಧಿಗಳನ್ನು ನಿಗ್ರಹಿಸಲು ಶಕ್ತನೂ, ವಿವಿಧೋಪಾಯಗಳನ್ನು ತಿಳಿದವನೂ ಹಣವಂತನೂ ಆಗುವೆನು/ಆಗುವಂತೆ ಆಗಲಿ.

**ವಸುವಿದಾಮನಮಸ್ಯಾಮನಸ್ಯ ದೇವಾ ಯೇ ಸಜಾತಾಃ**

***ಕುಮಾರಾಃ *ಸಮನಸಸ್ತಾನಹಂ ಕಾಮಯೇ ಹೃದಾ**

**ತೇ ಮಾಂ ಕಾಮಯಂತಾಗ್ಂ ಹೃದಾ**

---

ವಸುವಿದಿತಿ ವಸು–ವಿತ್ । **ಆಮನಮಿತ್ಯಾ–ಮನಮ್** । ಅಸಿ । ಆಮನಸ್ಯೇತ್ಯಾ–ಮನಸ್ಯ । ದೇವಾಃ । ಯೇ । ಸಜಾತಾ ಇತಿ ಸ–ಜಾತಾಃ । ಕುಮಾರಾಃ । ಸಮನಸ ಇತಿ ಸ–ಮನಸಃ । ತಾನ್ । ಅಹಮ್ । ಕಾಮಯೇ । ಹೃದಾ । ತೇ । ಮಾಮ್ । ಕಾಮಯಂತಾಮ್ । ಹೃದಾ ।

---

| ಮಂತ್ರ | ವಿನಿಯೋಗ |
| --- | --- |
| **ಆಮನಮಸಿ.....ಸಜಾತಾಃ...ಸ್ವಾಹಾ ।** | ಉಪಹೋಮವನ್ನು ಮಾಡಲು |
| ಆಮನಮಸಿ...**ಕುಮಾರಾಃ...**ಸ್ವಾಹಾ । | ಉಪಹೋಮವನ್ನು ಮಾಡಲು |

---

**ವಸುವಿತ್** = ಶ್ರೀಮಂತನೂ (ಆಗುವೆನು); ✤ [ಎಲೈ ! ಆಜ್ಯವೇ! ನೀನು] **ಆಮನಮ್ ಅಸಿ** = ಸಮಾನರನ್ನು /ಸಜಾತರನ್ನು ಇಚ್ಛಿಸುವವನಾಗಿದ್ದೀಯೆ; **ದೇವಾಃ** = ಎಲೈ ! ವಿಶ್ವೇದೇವರೇ ! **ಆಮನಸ್ಯ** = ಸಜಾತರನ್ನು ಪ್ರೀತಿಸುವ ಯಜಮಾನನಿಗೆ; **ಯೇ ಸಜಾತಾಃ** = ದೊಡ್ಡವರಾದ ಜ್ಞಾತಿಬಾಂಧವರು; **ಸಮನಸಃ** = ಸಮಾನವಾದ ಪ್ರೀತಿಯ ಮನಸ್ಸುಳ್ಳವರಾಗಿ ಇದ್ದಾರೆಯೋ; ಯೇ **ಕುಮಾರಾಃ** ಸಮನಸಃ = ಯಾವ ಯುವಕರು ಪ್ರೀತಿಯುಳ್ಳವರಾಗಿ ಇರುತ್ತಾರೆಯೋ; **ತಾನ್ ಹೃದಾ ಅಹಮ್ ಕಾಮಯೇ** = ಅವರನ್ನು ನಾನು ಮನಸ್ಸಿನಿಂದ ಪ್ರೀತಿಸುತ್ತೇನೆ; **ತೇ ಹೃದಾ ಮಾಮ್ ಕಾಮಯಂತಾಮ್** = ಆ ಜ್ಞಾತ್ಯಾದಿಗಳು ನನ್ನನ್ನು ಮನಸ್ಸಿನಿಂದ ಪ್ರೀತಿಸಲಿ.

---

ಸ್ವಿಷ್ಟಕೃದ್ಯಾಗಕ್ಕೆ ಮೊದಲು ಮಾಡುವ ಉಪಹೋಮದಲ್ಲಿ ಈ ಮೂರು ಮಂತ್ರಗಳಿಂದ ಹವನವನ್ನು ಮಾಡಬೇಕು. ಬೇರೆಯವರನ್ನು ಅಧೀನದಲ್ಲಿ ಇಟ್ಟುಕೊಳ್ಳಲು ಅವರನ್ನು ಪ್ರೀತಿಸಬೇಕು. ಅವರೂ ಇಂತಹ ಒಡೆಯನನ್ನು ಪ್ರೀತಿಸಬೇಕು.

ಆಜ್ಯವೇ ! ನೀನು ಜ್ಞಾತ್ಯಾದಿಗಳನ್ನು ಒಲಿಸಬಲ್ಲವನು. ಅವರನ್ನು ಯಜಮಾನನ

**ತಾನ್ಮ ಆಮನಸಃ ಕೃಧಿ ಸ್ವಾಹಾಽಽಮನಮಸ್ಯಾಮನಸ್ಯ [ಆಮನಮಸಿ (೧) ಆಮನಸ್ಯ] ದೇವಾ ಯಾಃ ಸ್ತ್ರಿಯಃ ಸಮನಸಸ್ತಾ ಅಹಂ ಕಾಮಯೇ ಹೃದಾ ತಾ ಮಾಂ ಕಾಮಯಂತಾಗ್ಂ ಹೃದಾ**

---

ತಾನ್ । ಮೇ । ಆಮನಸ ಇತ್ಯಾ–ಮನಸಃ । ಕೃಧಿ । ಸ್ವಾಹಾ । **ಆಮನಮಿತ್ಯಾ–ಮನಮ್** । ಅಸಿ । ಆಮನಸ್ಯೇತ್ಯಾ–ಮನಸ್ಯ । ದೇವಾಃ । ಯಾಃ । ಸ್ತ್ರಿಯಃ । ಸಮನಸ ಇತಿ ಸ–ಮನಸಃ । ತಾಃ । ಅಹಮ್ । ಕಾಮಯೇ । ಹೃದಾ । ತಾಃ । ಮಾಮ್ । ಕಾಮಯಂತಾಮ್ । ಹೃದಾ ।

---

| ಮಂತ್ರ | ವಿನಿಯೋಗ |
|---|---|
| **ಆಮನಮಸಿ.....ಸ್ತ್ರಿಯಃ ...ಸ್ವಾಹಾ ।** | ಉಪಹೋಮವನ್ನು ಮಾಡಲು |

---

**ತಾನ್ ಮೇ ಆಮನಸಃ ಕೃಧಿ** = ಎಲೈ ಆಜ್ಯವೇ ! ಅವರನ್ನು ನನ್ನ ವಿಷಯದಲ್ಲಿ ಪ್ರೀತಿಯುಳ್ಳವರನ್ನಾಗಿ ಮಾಡು; ***ಆಮನಮ್ ಅಸಿ** = [ಎಲೈ ! ಆಜ್ಯವೇ ! ನೀನು] ಜ್ಞಾತ್ಯಾದಿಗಳನ್ನು ಹೇಗೆ ಪ್ರೀತಿಸಬೇಕೆಂಬುದನ್ನು / ಒಲಿಸಬೇಕೆಂಬುದನ್ನು ತಿಳಿದವನಾಗಿದ್ದೀಯೆ. **ದೇವಾಃ** = ವಿಶ್ವೇದೇವರೇ ! **ಆಮನಸ್ಯ** = ಸಜಾತರನ್ನು ಪ್ರೀತಿಸುವ ಯಜಮಾನನಿಗೆ; **ಯಾಃ ಸ್ತ್ರಿಯಃ ಸಮನಸಃ** = ಯಾವ ಸ್ತ್ರೀಯರು ಒಮ್ಮತವುಳ್ಳವರೋ; **ತಾಃ ಅಹಮ್ ಹೃದಾ ಕಾಮಯೇ** = ನಾನು ಅವರನ್ನು ಮನಸ್ಸಿನಿಂದ ಇಚ್ಛಿಸುತ್ತೇನೆ. **ತಾಃ ಮಾಮ್ ಹೃದಾ ಕಾಮಯಂತಾಮ್** = ಅವರು ಮನಸ್ಸಿನಿಂದ ನನ್ನ [ಯಜಮಾನನ] ವಿಷಯದಲ್ಲಿ ಸ್ನೇಹವುಳ್ಳವರಾಗಲಿ.

---

ವಿಷಯದಲ್ಲಿ ಒಲಿಯುವಂತೆ ಮಾಡು. ವಿಶ್ವೇದೇವರೇ ! ನಿಮ್ಮ ಅನುಗ್ರಹದಿಂದ ಪ್ರಜೆಗಳಲ್ಲಿ ವೃದ್ಧರೂ, ತರುಣರೂ ಸ್ತ್ರೀಯರೂ ಯಾರು ಇದ್ದಾರೆಯೋ ಅವರನ್ನು *ನಾನು ಸ್ನೇಹದಿಂದ ನೋಡುತ್ತೇನೆ. ಅವರೂ ನನ್ನನ್ನು ಸ್ನೇಹಭಾವದಿಂದ ನೋಡಲಿ.

---

ಋತ್ವಿಜರು 'ನಾನು' ಎಂದು ಹೇಳುವುದೂ ಯಜಮಾನನ ಪರವಾಗಿಯೇ ಆಗಿರುತ್ತದೆ.

**ತಾ ಮ ಆಮನಸಃ ಕೃಧಿ ಸ್ವಾಹಾ ವೈಶ್ವದೇವೀಗ್ಂ**

**ಸಾಂಗ್ರಹಣೀಂ ನಿರ್ವಪೇದ್ಗ್ರಾಮಕಾಮೋ ವೈಶ್ವದೇವಾ**

**ವೈ ಸಜಾತಾ ವಿಶ್ವಾನೇವ ದೇವಾನ್ತ್ಸ್ವೇನ**

**ಭಾಗಧೇಯೇನೋಪಧಾವತಿ**

---

ತಾಃ । ಮೇ । ಆಮನಸ ಇತ್ಯಾ–ಮನಸಃ । ಕೃಧಿ । ಸ್ವಾಹಾ । **ವೈಶ್ವದೇವೀಮಿತಿ ವೈಶ್ವ–ದೇವೀಮ್** । ಸಾಂಗ್ರಹಣೀಮಿತಿ ಸಾಮ್ – ಗ್ರಹಣೀಮ್ । ನಿರಿತಿ । ವಪೇತ್ । ಗ್ರಾಮಕಾಮ ಇತಿ ಗ್ರಾಮ–ಕಾಮಃ । ವೈಶ್ವದೇವಾ ಇತಿ ವೈಶ್ವ–ದೇವಾಃ । ವೈ । ಸಜಾತಾ ಇತಿ ಸ–ಜಾತಾಃ । ವಿಶ್ವಾನ್ । ಏವ । ದೇವಾನ್ । ಸ್ವೇನ । ಭಾಗಧೇಯೇನೇತಿ ಭಾಗ–ಧೇಯೇನ । ಉಪೇತಿ । ಧಾವತಿ ।

---

**ಯಾಗವಿಧಿಃ ಅರ್ಥವಾದ**

| | |
|---|---|
| ಗ್ರಾಮಕಾಮಃ | ಗ್ರಾಮದ ಒಡೆಯನಾಗಬಯಸುವವನು |
| ವೈಶ್ವದೇವೀಮ್ ಸಾಂಗ್ರಹಣೀಮ್ ನಿರ್ವಪೇತ್ | ವಿಶ್ವದೇವರಿಗಾಗಿ **'ಸಾಂಗ್ರಹಣೀ'** ಎಂಬ ಹೆಸರಿನ ಯಾಗವನ್ನು ಮಾಡಬೇಕು. |
| ವೈಶ್ವದೇವಾಃ ವೈ ಸಜಾತಾಃ | ಜ್ಞಾತಿ–ಮಿತ್ರಾದಿಗಳು ವಿಶ್ವದೇವರಿಗೆ ಸಂಬಂಧಿಸಿದವರಾಗಿದ್ದಾರೆ. |
| ವಿಶ್ವಾನ್ ಏವ ದೇವಾನ್ ಸ್ವೇನ ಭಾಗಧೇಯೇನ ಉಪಧಾವತಿ | ಯಜಮಾನನು ವಿಶ್ವೇದೇವರನ್ನು ಈ ಯಾಗದ ಹವಿರ್ಭಾಗವನ್ನು ಸಮರ್ಪಿಸಿ, ಸೇವಿಸುತ್ತಾನೆ. |

---

ಎಲೈ! ಆಜ್ಯವೇ ! ದೇವತಾನುಗ್ರಹದಿಂದ ಅವರನ್ನು ನಮ್ಮ ವಿಷಯದಲ್ಲಿ ಒಮ್ಮತವುಳ್ಳವರನ್ನಾಗಿ ಮಾಡು. ಈ ಆಜ್ಯವು ದೇವತೆಗಳಿಗಾಗಿ ಹುತವಾಗಲಿ.

ಗ್ರಾಮಸ್ವಾಮಿಯಾಗಬೇಕೆನ್ನುವವನು **'ಸಾಂಗ್ರಹಣೀ'** ಎಂಬ ಹೆಸರುಳ್ಳ

ತ ಏವಾಸ್ಮೈ ಸಜಾತಾನ್ಪ್ರಯಚ್ಛಂತಿ ಗ್ರಾಮ್ಯೇವ ಭವತಿ

ಸಾಂಗ್ರಹಣೇ ಭವತಿ ಮನೋಗ್ರಹಣಂ ವೈ

ಸಂಗ್ರಹಣಂ ಮನ ಏವ ಸಜಾತಾನಾಂ ಗೃಹ್ಣಾತಿ

---

ತೇ । ಏವ । ಅಸ್ಮೈ । ಸಜಾತಾನಿತಿ ಸ–ಜಾತಾನ್ । ಪ್ರೇತಿ । ಯಚ್ಛಂತಿ । ಗ್ರಾಮೀ । ಏವ । ಭವತಿ । **ಸಾಂಗ್ರಹಣೇತಿ ಸಾಮ್–ಗ್ರಹಣೇ** । ಭವತಿ । ಮನೋಗ್ರಹಣಮಿತಿ ಮನಃ–ಗ್ರಹಣಮ್ । ವೈ । ಸಂಗ್ರಹಣಮಿತಿ ಸಮ್–ಗ್ರಹಣಮ್ । ಮನಃ । ಏವ । ಸಜಾತಾನಾಮಿತಿ ಸ–ಜಾತಾನಾಮ್ । ಗೃಹ್ಣಾತಿ ।

---

| | |
|---|---|
| ತೇ ಏವ ಅಸ್ಮೈ ಸಜಾತಾನ್ ಪ್ರಯಚ್ಛಂತಿ | ಆ ವಿಶ್ವದೇವರೇ ಈ ಯಜಮಾನನಿಗೆ ಸಮಾನ ರಾದ ಜ್ಞಾತ್ಯಾದಿಗಳನ್ನು ಅಧೀನರಾಗುವಂತೆ ಮಾಡುತ್ತಾರೆ. |
| ಗ್ರಾಮೀ ಏವ ಭವತಿ | ಯಜಮಾನನು ಗ್ರಾಮದ ಒಡೆಯನೇ ಆಗುತ್ತಾನೆ. |

**ಇಷ್ಟಿಯ ನಾಮನಿರ್ವಚನ; ಅದರ ಫಲ**

| | |
|---|---|
| ಸಾಂಗ್ರಹಣೇ ಭವತಿ | 'ಸಾಂಗ್ರಹಣೇ' ಎಂದು ಯಾಗಕ್ಕೆ ಹೆಸರಿದೆ. |
| ಮನೋಗ್ರಹಣಮ್ ವೈ ಸಂಗ್ರಹಣಮ್ | ಮನಸ್ಸನ್ನು ಚೆನ್ನಾಗಿ ಗ್ರಹಿಸುವುದೇ ಸಂಗ್ರಹಣ ವಾಗಿದೆ. |
| ಸಜಾತಾನಾಮ್ ಮನಃ ಏವ ಗೃಹ್ಣಾತಿ | [ಈ ಯಾಗದಿಂದ ಯಜಮಾನನು] ಜ್ಞಾತ್ಯಾದಿಗಳ ಮನಸ್ಸನ್ನು ಆಕರ್ಷಿಸುತ್ತಾನೆ. |

---

ವಿಶ್ವದೇವದೇವತಾಕವಾದ ಚರುಯಾಗವನ್ನು ಮಾಡಬೇಕು. ಯಜಮಾನನ ಸಜಾತರು ವಿಶ್ವದೇವಸಂಬಂಧಿಗಳು. ಈ ಯಾಗದಿಂದ ಯಜಮಾನನು ವಿಶ್ವೇದೇವರನ್ನು ಸಂತೋಷ ಪಡಿಸುತ್ತಾನೆ. ಅವರು ಸಂತುಷ್ಟರಾಗಿ ಜ್ಞಾತ್ಯಾದಿಸಜಾತರನ್ನು ಯಜಮಾನನ ಮಾತನ್ನು ಕೇಳುವಂತೆ ಮಾಡುತ್ತಾರೆ. ಹೀಗೆ ಸಜಾತರು ಪ್ರೀತಿಯಿಂದ ನಡೆದುಕೊಳ್ಳುವುದರಿಂದ ಯಜಮಾನನು ಗ್ರಾಮಸ್ವಾಮಿಯಾಗುತ್ತಾನೆ.

ಈ ಯಾಗಕ್ಕೆ 'ಸಾಂಗ್ರಹಣೇ' ಎಂದು ಹೆಸರಿದೆ. ಮನಸ್ಸನ್ನು ಚೆನ್ನಾಗಿ

[ಸಜಾತಾನಾಮ್ (೨) ಗೃಹ್ಣಾತಿ] ಧ್ರುವೋಽಸಿ

ಧ್ರುವೋಽಹಗ್‍ಂ ಸಜಾತೇಷು ಭೂಯಾಸಮಿತಿ

ಪರಿಧೀನ್ಪರಿದಧಾತ್ಯಾಶಿಷಮೇವೈತಾಮಾಶಾಸ್ತೇಽಥೋ

---

ಧ್ರುವಃ । ಅಸಿ । ಧ್ರುವಃ । ಅಹಮ್ । ಸಜಾತೇಷ್ವಿತಿ ಸ–ಜಾತೇಷು । ಭೂಯಾಸಮ್ । ಇತಿ । ಪರಿಧೀನಿತಿ ಪರಿ–ಧೀನ್ । ಪರೀತಿ । ದಧಾತಿ । ಆಶಿಷಮಿತ್ಯಾ–ಶಿಷಮ್ । ಏವ । ಏತಾಮ್ । ಏತಿ । ಶಾಸ್ತೇ । ಅಥೋ ಇತಿ ।

---

**ಪರಿಧಿನಿಧಾನದಲ್ಲಿ ವಿಶೇಷಮಂತ್ರವಿಧಿ; ಪ್ರಶಂಸೆ**

| | |
|---|---|
| ಧ್ರುವಃ ಅಸಿ ಧ್ರುವಃ ಅಹಮ್ ಸಜಾತೇಷು ಭೂಯಾಸಮ್ ಇತಿ ಪರಿಧೀನ್ ಪರಿದಧಾತಿ | [ಪ್ರಕೃತಿಯಿಂದ ಬಂದಿರುವ ಮಂತ್ರಗಳ ಸ್ಥಾನದಲ್ಲಿ] '**ಧ್ರುವಃ............ ಭೂಯಾಸಮ್**' ಮುಂತಾದ ಮೂರು ಮಂತ್ರಗಳಿಂದ ಮೂರು ಪರಿಧಿಗಳನ್ನು ಇಡಬೇಕು. |
| ಏತಾಮ್ ಆಶಿಷಮ್ ಏವ ಆಶಾಸ್ತೇ | [ಧ್ರುವಃ ಭೂಯಾಸಮ್, ಉಗ್ರಃ ಭೂಯಾಸಮ್, ಅಭಿಭೂಃ ಭೂಯಾಸಮ್] ಎಂದು ಶುಭಾಶಂಸೆಯನ್ನೇ ಈ ಮಂತ್ರಗಳಿಂದ ಹೇಳಿದಂತಾಗುತ್ತದೆ. |
| ಏವಮ್ ವಿದುಷಃ ಯಸ್ಯ ಏತೇ ಪರಿಧಯಃ ಪರಿಧೀಯಂತೇ | ಈ ವಿಷಯವನ್ನು ತಿಳಿದ ಯಾವ ಯಜಮಾನನ ಯಾಗದಲ್ಲಿ ಈ ಮಂತ್ರಗಳಿಂದ ಪರಿಧಿಗಳು ಇಡಲ್ಪಡುತ್ತವೆಯೋ [ಆ ಯಜಮಾನನಿಗೆ] |

---

ಅರಿಯುವುದೇ ಸಂಗ್ರಹಣ. ಈ ಯಾಗದಿಂದ ಯಜಮಾನನು ಜ್ಞಾತ್ಯಾದಿಗಳ ಮನಸ್ಸನ್ನು ಚೆನ್ನಾಗಿ ಆಕರ್ಷಿಸುವನು. ಹೀಗಾಗಿ ಯಾಗದ ಹೆಸರು ಅನ್ವರ್ಥವಾಗಿದೆ.

ಈ ಯಾಗದಲ್ಲಿ 'ಧ್ರುವೋಽಸಿ' ಎಂದು ಆರಂಭವಾಗುವ ಮೂರು ಮಂತ್ರಗಳಿಂದ ಪರಿಧಿಗಳನ್ನು ಇಡಬೇಕು. ಇದರಿಂದ ಶುಭಾಶಂಸೆಯನ್ನೇ ಮಾಡಿದಂತಾಗುತ್ತದೆ. ಈ ವಿಷಯವನ್ನು ತಿಳಿದ ಯಜಮಾನನು ಅನುಷ್ಠಿಸುವ **ಯಾಗದಲ್ಲಿ ಈ ಮಂತ್ರಗಳಿಂದ**

ಏತದೇವ ಸರ್ವಗ್ಂ ಸಜಾತೇಷ್ವಧಿ ಭವತಿ ಯಸ್ಯೈವಂ ವಿದುಷ ಏತೇ ಪರಿಧಯಃ ಪರಿಧೀಯಂತ ಆಮನಮಸ್ಯಾಮನಸ್ಯ ದೇವಾ ಇತಿ ತಿಸ್ರ ಆಹುತೀರ್ಜುಹೋತ್ಯೇತಾವಂತೋ ವೈ ಸಜಾತಾ

ಏತತ್ । ಏವ । ಸರ್ವಮ್ । ಸಜಾತೇಷ್ವಿತಿ ಸ-ಜಾತೇಷು । ಅಧೀತಿ । ಭವತಿ । ಯಸ್ಯ । ಏವಮ್ । ವಿದುಷಃ । ಏತೇ । ಪರಿಧಯ ಇತಿ ಪರಿ-ಧಯಃ । ಪರಿಧೀಯಂತ ಇತಿ ಪರಿ-ಧೀಯಂತೇ । ಆಮನಮಿತ್ಯಾ-ಮನಮ್ । ಅಸಿ । ಆಮನಸ್ಯೇತ್ಯಾ-ಮನಸ್ಯ । ದೇವಾಃ । ಇತಿ । ತಿಸ್ರಃ । ಆಹುತೀರಿತ್ಯಾ-ಹುತೀಃ । ಜುಹೋತಿ । ಏತಾವಂತಃ । ವೈ । ಸಜಾತಾ ಇತಿ ಸ-ಜಾತಾಃ ।

| | |
|---|---|
| ಅಥೋ ಸಜಾತೇಷು ಏತತ್ ಸರ್ವಮ್ ಏವ ಅಧಿ ಭವತಿ | ಸಜಾತರಿಗಿಂತ ಅಧಿಕವಾಗಿ ಎಲ್ಲವೂ ಲಭಿಸುತ್ತದೆ. |

**ಉಪಹೋಮವಿಧಿ; ಪ್ರಶಂಸೆ**

| | |
|---|---|
| ಆಮನಮಸಿ ಆಮನಸ್ಯ ದೇವಾಃ ಇತಿ ತಿಸ್ರಃ ಆಹುತೀಃ ಜುಹೋತಿ | *'ಆಮನಮಸಿ' ಎಂದು ಆರಂಭಗೊಳ್ಳುವ ಮೂರು ಮಂತ್ರಗಳಿಂದ ಹೋಮಗಳನ್ನು ಮಾಡಬೇಕು. |
| ಏತಾವಂತಃ ವೈ ಸಜಾತಾಃ | ಸಜಾತರು ಮುಂದೆ ಹೇಳುವ ಮೂರುವಿಧರಾಗಿಯೇ ಇರುತ್ತಾರೆ. |

ಪರಿಧಿಗಳು ಇಡಲ್ಪಡುವುದರಿಂದ ಆ ಯಜಮಾನನಿಗೆ ಸಜಾತರಿಗಿಂತಲೂ ಎಲ್ಲವೂ ಅಧಿಕವಾಗಿಯೇ ಲಭಿಸುತ್ತದೆ.

* ಯೇ ಸಜಾತಾಃ, ಯೇ ಕುಮಾರಾಃ, ಯಾಸ್ತ್ರಿಯಃ ಎಂಬ ಅನುಷಂ ಅನಂತರ ಮೂರು ಮಂತ್ರಗಳು.

ಯೇ ಮಹಾಂತೋ ಯೇ ಕ್ಷುಲ್ಲಕಾ

ಯಾಃ ಸ್ತ್ರಿಯಸ್ತಾನೇವಾವರುಂಧೇ ತ ಏನಮುವರುದ್ಧಾ

ಉಪತಿಷ್ಠಂತೇ ||೩೭-9||

[ಸ್ವಾಹಾಽಽವಮನವಮಸಿ ಸಜಾತಾನಾಗ್ಂ ರುಂಧೇ ಪಂಚ ಚ |]

---

ಯೇ | ಮಹಾಂತಃ | ಯೇ | ಕ್ಷುಲ್ಲಕಾಃ | ಯಾಃ | ಸ್ತ್ರಿಯಃ | ತಾನ್ | ಏವ | ಅವೇತಿ | ರುಂಧೇ | ತೇ | ಏನಮ್ | ಅವರುದ್ಧಾ ಇತ್ಯವ-ರುದ್ಧಾಃ | ಉಪೇತಿ | ತಿಷ್ಠಂತೇ ||9||

---

| | |
|---|---|
| ಯೇ ಮಹಾಂತಃ ಯೇ ಕ್ಷುಲ್ಲಕಾಃ | ಎಲ್ಲಾ ವಿಷಯಗಳಲ್ಲಿಯೂ ವೃದ್ಧರಾದ ದೊಡ್ಡವರು, ಚಿಕ್ಕವರು |
| ಯಾಃ ಸ್ತ್ರಿಯಃ ತಾನ್ ಏವ ಅವರುಂಧೇ | ಸ್ತ್ರೀಯರು.. [ಹೀಗೆ ಮೂರು ಬಗೆ] ಯಜಮಾನನು ಅವರನ್ನು ವಿಧೇಯರನ್ನಾಗಿ ಪಡೆಯುತ್ತಾನೆ. |
| ಅವರುದ್ಧಾಃ ತೇ ಏನಮ್ ಉಪತಿಷ್ಠಂತೇ | ಯಜಮಾನನಲ್ಲಿ ಪ್ರೀತಿಯಿಂದಿರುವ ಜ್ಞಾತ್ಯಾದಿಗಳು ಅವನನ್ನು ಸೇವಿಸುತ್ತಾರೆ. |

---

ಸ್ವಿಷ್ಟಕೃದ್ಧೋಮಕ್ಕೆ ಮೊದಲು 'ಆಮನಮಸಿ' ಎಂದು ಆರಂಭಗೊಳ್ಳುವ ಮೂರು ಮಂತ್ರಗಳಿಂದ ಮೂರು ಹೋಮಗಳನ್ನು ಅನುಷ್ಠಿಸಬೇಕು. ಸಮಾನರಲ್ಲಿ ಯಾರು ದೊಡ್ಡವರೋ, ಯಾರು ಚಿಕ್ಕವರೋ ಯಾರು ಸ್ತ್ರೀಯರೋ ಅವರೆಲ್ಲರೂ ಯಜಮಾನನಲ್ಲಿ ಪ್ರೀತಿಯಿಂದ ವಶರಾಗಿರುತ್ತಾರೆ. ಅವರು ಅಧೀನರಾಗಿ ಯಜಮಾನನನ್ನು ಸೇವಿಸುತ್ತಾರೆ. ಯಜಮಾನನು ಗ್ರಾಮಕ್ಕೆ ಒಡೆಯನಾಗುತ್ತಾನೆ.

* * *

# ಅನುವಾಕದ ವಿಶೇಷವಿಷಯಗಳು

## ಅ) ವಿನಿಯೋಗಸಂಗ್ರಹ

**ಸಾಂಗ್ರಹಣ್ಯಾಂ ತು ಪರಿಧೀನ್ ಪರಿಧತ್ತೇ[1–3] ಧ್ರುವತ್ರಯಾತ್ ।**
**[4–6]ಆಮನೇತಿ ತ್ರಿಭಿಸ್ತತ್ರ ಉಪಹೋಮಾಸ್ತ್ರಯೋ ಮತಾಃ ॥**
**ಮಂತ್ರಭೇದಃ ಸಜಾತೇತಿ ಕುಮಾರೇತಿ ಪದದ್ವಯಾತ್ ।**

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ – 6**

## ಆ) ಮೀಮಾಂಸಾ

**1. ಆಮನಹೋಮಗಳು ಎಲ್ಲಿ? ಹೇಗೆ ? [ಜೈ. ಸೂ. 10.4.10]**

ಆಮನಹೋಮಗಳು ಅನೂಯಾಜಗಳ ಸ್ಥಾನದಲ್ಲಿ ಬರುತ್ತವೆಯೇ ಅಥವಾ ಅನೂಯಾಜಮಂತ್ರಗಳ ಸ್ಥಾನದಲ್ಲಿ ಆಮನಮಂತ್ರಗಳು ಬರುತ್ತವೆಯೇ ? ಅಥವಾ ಅನೂಯಾಜಗಳೊಡನೆ ಈ ಆಮನಹೋಮಗಳೂ ಸಮುಚ್ಚಯವಾಗಿ ಬರುತ್ತವೆಯೇ ? ಇದು ಇಲ್ಲಿನ **ಸಂಶಯ.**

ಮೂರು ಸಂಖ್ಯೆಯ ಯಾಗವಿರುವ ಅನೂಯಾಜಗಳನ್ನು ಬಾಧಿಸಿ, ಆ ಸ್ಥಾನದಲ್ಲಿ ಈ ಆಮನಹೋಮಗಳು. ಮೂರೆಂಬ (ತ್ರಿತ್ವ) ಸಂಖ್ಯೆಯು ಆಗ್ನೇಯಾದಿಯಾಗಗಳಲ್ಲಿಯೂ ಇದೆಯೆನ್ನುವುದಾದರೆ, ಈ ಮೂರು ಆಮನಮಂತ್ರಗಳು ಅನೂಯಾಜಮಂತ್ರಗಳ ಸ್ಥಾನದಲ್ಲಿ ಬರುತ್ತವೆ. ಇದು ಇಲ್ಲಿನ **ಪೂರ್ವಪಕ್ಷ.**

**'ಆಮನಮಸಿ..... ತಿಸ್ರ ಆಹುತೀರ್ಜುಹೋತಿ'** ಎಂಬ ವಿಧಿಯು ತ್ರಿತ್ವವನ್ನು ಉದ್ದೇಶಿಸಿ ಮಾಡಿದ ಮಂತ್ರಸಹಿತವಾದ ಆಹುತಿಗಳ ವಿಧಿಯೇ ? ಅಥವಾ ತ್ರಿತ್ವವಿಶಿಷ್ಟವಾದ ಆಹುತಿಗಳನ್ನು ಉದ್ದೇಶಿಸಿ ಮಂತ್ರವಿಧಿಯೇ ? ತ್ರಿತ್ವವು ಆಗ್ನೇಯಾದಿಯಾಗದಲ್ಲಿಯೂ ಇರುವುದರಿಂದ ಅನೂಯಾಜಗಳನ್ನೇ ಗ್ರಹಿಸುವಂತಿಲ್ಲ. ವಾಕ್ಯಭೇದವು ಬರುವುದರಿಂದ ಅದು ಅಯುಕ್ತ. ಹೀಗಾಗಿ ಈ ವಾಕ್ಯವು ಬೇರೆ ಕರ್ಮವನ್ನೇ ವಿಧಿಸುತ್ತದೆ. ಆದುದರಿಂದ ಅನೂಯಾಜಗಳೊಡನೆ ಈ ಆಮನಹೋಮಗಳಿಗೆ ಸಮುಚ್ಚಯ. ಪ್ರಯಾಜ–ಅನೂಯಾಜಗಳ ಮಧ್ಯದಲ್ಲಿ ಹೋಮವನ್ನು ಮಾಡಬೇಕೆಂಬ ಅರ್ಥವಾದವೂ ಈ ವಿಷಯದಲ್ಲಿ ಗಮಕವಾಗಿದೆ. ಹೀಗಾಗಿ ಈ ಆಮನಹೋಮಗಳಿಗೆ ಅನೂಯಾಜಗಳೊಡನೆ ಸಮುಚ್ಚಯ. ಇದು ಇಲ್ಲಿನ **ಸಿದ್ಧಾಂತ.**

* * *

## || ದಶಮೋಽನುವಾಕಃ ||

**ಯನ್ನವಮೈತ್ತನ್ನವನೀತಮಭವದ್ಯದಸರ್ಪತ್ತತ್ಸರ್ಪಿರ**

**ಭವದ್ಯದಧ್ರಿಯತ**

---

**ಯತ್** । ನವಮ್ । ಐತ್ । ತತ್ । ನವನೀತಮಿತಿ ನವ–ನೀತಮ್ । ಅಭವತ್ । ಯತ್ । ಅಸರ್ಪತ್ । ತತ್ । ಸರ್ಪಿಃ । ಅಭವತ್ । ಯತ್ । ಅಧ್ರಿಯತ ।

---

**ಹಿಂದಿನ ಒಂಬತ್ತನೆಯ ಅನುವಾಕದಲ್ಲಿ ಸಾಂಗ್ರಹಣೇಷ್ಟಿಯನ್ನು ಹೇಳಲಾಯಿತು. ಮುಂದೆ ಹನ್ನೊಂದನೆಯ ಅನುವಾಕದಲ್ಲಿ ಆಯುಷ್ಕಾಮೇಷ್ಟಿಯನ್ನು ಶ್ರುತಿಯು ತಿಳಿಸುತ್ತದೆ. ಅದಕ್ಕೆ ಸಂಬಂಧಿಸಿದ ವಿಶೇಷಮಂತ್ರಗಳನ್ನು ಈ ಹತ್ತನೆಯ ಅನುವಾಕದಲ್ಲಿ ಹೇಳಲಾಗಿದೆ.**

| ಮಂತ್ರ | ವಿನಿಯೋಗ |
| --- | --- |
| **ಯನ್ನವಮೈತ್.... ಘೃತಮಭವತ್ 1** | ಯಜಮಾನನು ಆಜ್ಯಾವೇಕ್ಷಣವನ್ನು ಮಾಡಲು |

---

❖ **ಯತ್ ನವಮ್ ಐತ್** = [ಯಾವ ಕಾರಣದಿಂದ ಮೊಸರಿನಿಂದ] ಹೊಸದಾಗಿ ತೆಗೆಯಲ್ಪಟ್ಟದೆಯೋ, **ತತ್ ನವನೀತಮ್ ಅಭವತ್** = ಆ ಕಾರಣದಿಂದ 'ನವನೀತ' [ಹೊಸದಾಗಿ ಬಂದುದು] ಎಂದಾಯಿತು. **ಯತ್ ಅಸರ್ಪತ್ ತತ್ ಸರ್ಪಿಃ ಅಭವತ್** = ಯಾವ ಕಾರಣದಿಂದ ಬೆಂಕಿಯಲ್ಲಿ ಕರಗಿತೋ ಆ ಕಾರಣದಿಂದ 'ಸರ್ಪಿ' [ಹರಡಿಕೊಳ್ಳುವುದು] ಎಂದಾಯಿತು. **ಯತ್ ಅಧ್ರಿಯತ** = [ಯಾವಕಾರಣದಿಂದ ತಣ್ಣಗಿರುವ ಪ್ರದೇಶದಲ್ಲಿ ಇಟ್ಟಾಗ] ಮತ್ತೆ ಗಟ್ಟಿಯಾಯಿತೋ;

---

ಕಡೆದು ಹೊಸದಾಗಿ ತೆಗೆದಿರುವುದರಿಂದ **'ನವನೀತ'**. ಇದು ತುಪ್ಪದ ಮೊದಲಿನ ಸ್ಥಿತಿ. ಕರಗಿಸಿದಾಗ ಹರಿಯುವಂತಾಗುವುದರಿಂದ **ಸರ್ಪಿ**. ಇದು ತುಪ್ಪದ ಇನ್ನೊಂದು ಅವಸ್ಥೆ.

**ತದ್ಘೃತಮಭವದಶ್ವಿನೋಃ ಪ್ರಾಣೋಽಸಿ ತಸ್ಯ ತೇ ದತ್ತಾಂ ಯಯೋಃ ಪ್ರಾಣೋಽಸಿ ಸ್ವಾಹೇಂದ್ರಸ್ಯ ಪ್ರಾಣೋಽಸಿ ತಸ್ಯ ತೇ ದದಾತು ಯಸ್ಯ ಪ್ರಾಣೋಽಸಿ ಸ್ವಾಹಾ**

---

ತತ್ । ಘೃತಮ್ । ಅಭವತ್ । **ಅಶ್ವಿನೋಃ** । ಪ್ರಾಣ ಇತಿ ಪ್ರ–ಅನಃ । ಅಸಿ । ತಸ್ಯ । ತೇ । ದತ್ತಾಮ್ । ಯಯೋಃ । ಪ್ರಾಣ ಇತಿ ಪ್ರ–ಅನಃ । ಅಸಿ । ಸ್ವಾಹಾ । **ಇಂದ್ರಸ್ಯ** । ಪ್ರಾಣ ಇತಿ ಪ್ರ–ಅನಃ । ಅಸಿ । ತಸ್ಯ । ತೇ । ದದಾತು । ಯಸ್ಯ । ಪ್ರಾಣ ಇತಿ ಪ್ರ–ಅನಃ । ಅಸಿ । ಸ್ವಾಹಾ ।

---

| **ಮಂತ್ರ** | **ವಿನಿಯೋಗ** |
|---|---|
| **ಅಶ್ವಿನೋಃ......... ಸ್ವಾಹಾ ।** | ಉಪಹೋಮವನ್ನು ಅನುಷ್ಠಿಸಲು |
| **ಇಂದ್ರಸ್ಯ....... ಸ್ವಾಹಾ ।** | ಉಪಹೋಮವನ್ನು ಮಾಡಲು |

---

**ತತ್ ಘೃತಮ್ ಅಭವತ್** = ಆ ಕಾರಣದಿಂದ 'ಘೃತ' ಎನಿಸಿತು. [ಎಲೈ ! ಯಜಮಾನನೇ !] ❖ **ಅಶ್ವಿನೋಃ ಪ್ರಾಣಃ ಅಸಿ** = ನೀನು ಅಶ್ವಿನೀದೇವತೆಗಳಿಗೆ ಪ್ರಾಣದಂತೆ ಪ್ರಿಯನಾಗಿರುವೆ/ಪ್ರಾಣವೇ ಆಗಿರುವೆ. **ಯಯೋಃ ಪ್ರಾಣಃ ಅಸಿ** = ಯಾವ ಅಶ್ವಿನೀದೇವತೆಗಳಿಗೆ ಪ್ರಾಣನಾಗಿದ್ದೀಯೋ [ಅವರು]; **ತಸ್ಯ ತೇ ದತ್ತಾಮ್** = ಅಂತಹ ನಿನಗೆ [ಪ್ರಾಣವನ್ನು/ಆಯುಸ್ಸನ್ನು]; ಕೊಡಲಿ; **ಸ್ವಾಹಾ** = ಈ ಆಜ್ಯವು ಅವರಿಗೆ ಹುತವಾಗಲಿ; ❖ [ಎಲೈ ಯಜಮಾನನೇ !]; **ಇಂದ್ರಸ್ಯ ಪ್ರಾಣಃ ಅಸಿ** = ಇಂದ್ರನಿಗೆ ಪ್ರಾಣದಂತಿರುವೆ; **ಯಸ್ಯ ಪ್ರಾಣಃ ಅಸಿ** = ಯಾವ ಇಂದ್ರನಿಗೆ ಪ್ರಾಣಪ್ರಿಯನಾಗಿದ್ದೀಯೋ; **ತಸ್ಯ ತೇ ದದಾತು** = ಅಂತಹ ನಿನಗೆ ಆ ಇಂದ್ರನು ಪ್ರಾಣವನ್ನು / ಆಯುಸ್ಸನ್ನು ಕೊಡಲಿ; **ಸ್ವಾಹಾ** = ಈ ಆಜ್ಯವು ಆ ಇಂದ್ರದೇವನಿಗೆ ಹುತವಾಗಲಿ.

---

ಮತ್ತೆ ಗಟ್ಟಿಯಾಗುವುದರಿಂದ ಘೃತ. ಧೃತವಾದುದರಿಂದ ವರ್ಣವ್ಯತ್ಯಾಸದಿಂದ ಘೃತವಾಯಿತು. ಇದು ತುಪ್ಪದ ಇನ್ನೊಂದು ರೂಪ. ಎಲೈ ! ಆಜ್ಯವೇ ! ಹೀಗೆ ರೂಪಭೇದವುಳ್ಳ, ನಾಮಭೇದವುಳ್ಳ ನಿನ್ನನ್ನು ನಾನು ನೋಡುತ್ತೇನೆ.

# ಮಿತ್ರಾವರುಣಯೋಃ ಪ್ರಾಣೋಽಸಿ ತಸ್ಯ ತೇ ದತ್ತಾಂ ಯಯೋಃ ಪ್ರಾಣೋಽಸಿ ಸ್ವಾಹಾ ವಿಶ್ವೇಷಾಂ ದೇವಾನಾಂ ಪ್ರಾಣೋಽಸಿ [ಪ್ರಾಣೋಽಸಿ (೧)] ತಸ್ಯ ತೇ ದದತು ಯೇಷಾಂ ಪ್ರಾಣೋಽಸಿ ಸ್ವಾಹಾ

**ಮಿತ್ರಾವರುಣಯೋರಿತಿ ಮಿತ್ರಾ–ವರುಣಯೋಃ** । ಪ್ರಾಣ ಇತಿ ಪ್ರ–ಅನಃ । ಅಸಿ । ತಸ್ಯ । ತೇ । ದತ್ತಾಮ್ । ಯಯೋಃ । ಪ್ರಾಣ ಇತಿ ಪ್ರ–ಅನಃ । ಅಸಿ । ಸ್ವಾಹಾ । **ವಿಶ್ವೇಷಾಮ್** । ದೇವಾನಾಮ್ । ಪ್ರಾಣ ಇತಿ ಪ್ರ–ಅನಃ । ಅಸಿ । ತಸ್ಯ । ತೇ । ದದತು । ಯೇಷಾಮ್ । ಪ್ರಾಣ ಇತಿ ಪ್ರ–ಅನಃ । ಅಸಿ । ಸ್ವಾಹಾ ।

| ಮಂತ್ರ | ವಿನಿಯೋಗ |
|---|---|
| **ಮಿತ್ರಾವರುಣಯೋಃ...... ಸ್ವಾಹಾ ।** | ಉಪಹೋಮವನ್ನು ಅನುಷ್ಠಿಸಲು |
| **ವಿಶ್ವೇಷಾಂ ....... ಸ್ವಾಹಾ ।** | ಉಪಹೋಮವನ್ನು ಮಾಡಲು |

✤ [ಎಲೈ ! ಯಜಮಾನನೇ !] **ಮಿತ್ರಾವರುಣಯೋಃ ಪ್ರಾಣಃ ಅಸಿ** = ಮಿತ್ರಾವರುಣ ದೇವತೆಗಳಿಗೆ ಪ್ರಾಣದಂತೆ ಪ್ರಿಯನಾಗಿದ್ದೀಯೆ; **ಯಯೋಃ ಪ್ರಾಣಃ ಅಸಿ** = ಯಾರಿಗೆ ನೀನು ಪ್ರಾಣಪ್ರಿಯನಾಗಿದ್ದೀಯೋ; **ತಸ್ಯ ತೇ ದತ್ತಾಮ್** = ಆ ನಿನಗೆ ಮಿತ್ರಾ–ವರುಣರು ಆಯುಸ್ಸನ್ನು ಕೊಡಲಿ. **ಸ್ವಾಹಾ** = ಈ ಆಜ್ಯವು ನಿನಗೆ ಹುತವಾಗಲಿ.
✤ [ಎಲೈ ! ಯಜಮಾನನೇ !] **ವಿಶ್ವೇಷಾಮ್ ದೇವಾನಾಮ್ ಪ್ರಾಣಃ ಅಸಿ** = ವಿಶ್ವೇದೇವರಿಗೆ ನೀನು ಪ್ರಾಣಸ್ವರೂಪನಾಗಿದ್ದೀಯೆ; **ಯೇಷಾಮ್ ಪ್ರಾಣಃ ಅಸಿ** = ಯಾರಿಗೆ ಪ್ರಾಣಪ್ರಿಯನಾಗಿರುವೆಯೋ; **ತಸ್ಯ ತೇ ದದತು** = [ಆ ದೇವತೆಗಳು] ಅಂತಹ ನಿನಗೆ [ಯಾಗಾದಿಗಳನ್ನು ಅನುಷ್ಠಿಸಲು] ಆಯುಸ್ಸನ್ನು ಕೊಡಲಿ; **ಸ್ವಾಹಾ** = ಈ ಆಜ್ಯವು ಆ ದೇವತೆಗಳಿಗಾಗಿ ಅಗ್ನಿಯಲ್ಲಿ ಹುತವಾಗಲಿ.

ಯಜಮಾನನನ್ನು ಪ್ರಾಣದಂತೆ ಪ್ರೀತಿಸುವ ಅಶ್ವಿನೀದೇವತೆಗಳು, ಇಂದ್ರ, ಮಿತ್ರಾವರುಣ ಮತ್ತು ವಿಶ್ವದೇವರು ಈ ಯಜಮಾನನಿಗೆ ಇಂತಹ ಯಾಗಾದಿ ಸತ್ಕರ್ಮಗಳ

**ಘೃತಸ್ಯ ಧಾರಾಮಮೃತಸ್ಯ ಪಂಥಾಮಿಂದ್ರೇಣ ದತ್ತಾಂ ಪ್ರಯತಾಂ ಮರುದ್ಭಿಃ ॥ ತತ್ತ್ವಾ ವಿಷ್ಣುಃ ಪರ್ಯಪಶ್ಯತ್ತತ್ತ್ವೇಡಾ ಗವ್ಯೈರಯತ್ ॥**

---

**ಘೃತಸ್ಯ** । ಧಾರಾಮ್ । ಅಮೃತಸ್ಯ । ಪಂಥಾಮ್ । ಇಂದ್ರೇಣ । ದತ್ತಾಮ್ । ಪ್ರಯತಾಮಿತಿ ಪ್ರ–ಯತಾಮ್ । ಮರುದ್ಭಿರಿತಿ ಮರುತ್ – ಭಿಃ ॥ ತತ್ । ತ್ವಾ । ವಿಷ್ಣುಃ । ಪರೀತಿ । ಅಪಶ್ಯತ್ । ತತ್ । ತ್ವಾ । ಇಡಾ । ಗವಿ । ಐರಯತ್ ॥

---

| ಮಂತ್ರ | ವಿನಿಯೋಗ |
|---|---|
| **ಘೃತಸ್ಯ........ ಗವ್ಯೈರಯತ್ ॥** | ಖಾದಿರಪಾತ್ರೆಯಲ್ಲಿ ಇಟ್ಟಿರುವ ಆಜ್ಯವನ್ನು ನೋಡಲು |

---

✤ **ಅಮೃತಸ್ಯ ಪಂಥಾಮ್** = ಶಾಶ್ವತವಾದ ಯಾಗಫಲಕ್ಕೆ ಮಾರ್ಗದಂತೆ ಇರುವ; **ಇಂದ್ರೇಣ ದತ್ತಾಮ್** = ಇಂದ್ರನಿಂದ ವೃಷ್ಟಿ–ಸಸ್ಯಾದಿಗಳ ಮೂಲಕ ಕೊಡಲ್ಪಟ್ಟಿರುವ; **ಮರುದ್ಭಿಃ ಪ್ರಯತಾಮ್** = ಮರುತ್ತರಿಗೆ ಸಂಬಂಧಿಸಿದ ವೈಶ್ಯರಿಂದ ಜೋಪಾನವಾಗಿ ಸಂಗ್ರಹಿಸಲ್ಪಟ್ಟಿರುವ, **ಘೃತಸ್ಯ ಧಾರಾಮ್** = ಕರಗಿದ ತುಪ್ಪದ ಧಾರೆಯನ್ನು [ಅವೇಕ್ಷೇತ = ಯಜಮಾನನು ನೋಡಬೇಕು]. **ವಿಷ್ಣುಃ** = ವ್ಯಾಪಕನಾದ ವಿಷ್ಣುದೇವನು/ ಯಜಮಾನನು; **ತತ್ ತ್ವಾ** = ಆ ನಿನ್ನನ್ನು [ತುಪ್ಪವನ್ನು]; **ಪರಿ ಅಪಶ್ಯತ್** = ಸುತ್ತಲೂ ಚೆನ್ನಾಗಿ ನೋಡಿದನು; **ಇಡಾ** = ಪಶ್ವಭಿಮಾನಿಯಾದ ಇಡೆಯು/ ಭೂಮಿಯು, **ತತ್ ತ್ವಾ** = ಆ ನಿನ್ನನ್ನು ; **ಗವಿ ಐರಯತ್** = ಹಸುವಿನಲ್ಲಿ ಅಧಿಕವಾಗಿರುವಂತೆ ಮಾಡಿದಳು/ ವೃಷ್ಟ್ಯಾದಿಗಳ ಮೂಲಕ ಉತ್ಪತ್ತಿ ಮಾಡಿದಳು. [ಅಂತಹ ನಿನ್ನನ್ನು ನಾನು ನೋಡುತ್ತೇನೆ].

---

ಅನುಷ್ಠಾನಕ್ಕಾಗಿ ಪೂರ್ಣಾಯುಸ್ಸನ್ನು ಕೊಡಲಿ. ಆ ದೇವತೆಗಳಿಗಾಗಿ ಈ ಆಜ್ಯವು ಅಗ್ನಿಯಲ್ಲಿ ಹುತವಾಗಲಿ.

ಭಾ: ತುಪ್ಪದ ಧಾರೆಯು ಯಾಗಾದಿಸಾಧನವಾಗಿ ಶಾಶ್ವತಫಲದ ಮಾರ್ಗದಂತಿದೆ. ಇದನ್ನು ಇಂದ್ರನು ವೃಷ್ಟ್ಯಾದಿಪರಂಪರೆಯಿಂದ ಅನುಗ್ರಹಿಸಿರುತ್ತಾನೆ. ಮರುತರ ಅನುಗ್ರಹದಿಂದ ವೈಶ್ಯರು ಸುರಕ್ಷಿತವಾಗಿ ಸಂಗ್ರಹಿಸಿ ಇಟ್ಟಿರುತ್ತಾರೆ. ಇಂತಹ ನಿನ್ನನ್ನು

**ಪಾವವಮಾನೇನ ತ್ವಾ ಸ್ತೋಮೇನ ಗಾಯತ್ರಸ್ಯ**

**ವರ್ತನ್ಯೋಪಾಗ್ಂಶೋರ್ವೀರ್ಯೇಣ ದೇವಸ್ತ್ವಾ**

**ಸವಿತೋತ್ಸೃಜತು ಜೀವಾತವೇ ಜೀವನಸ್ಯಾಯ್ಯೈ**

---

**ಪಾವವಮಾನೇನ** । ತ್ವಾ । ಸ್ತೋಮೇನ । ಗಾಯತ್ರಸ್ಯ । ವರ್ತನ್ಯಾ । ಉಪಾಗ್ಂಶೋರಿತ್ಯುಪ–ಅಗ್ಂಶೋಃ । ವೀರ್ಯೇಣ । ದೇವಃ । ತ್ವಾ । ಸವಿತಾ । ಉದಿತಿ । ಸೃಜತು । ಜೀವಾತವೇ । ಜೀವನಸ್ಯಾಯ್ಯೈ ।

---

| ಮಂತ್ರ | ವಿನಿಯೋಗ |
|---|---|
| **ಪಾವವಮಾನೇನ..... ಜೀವನಸ್ಯಾಯ್ಯೈ** । | ಬ್ರಹ್ಮನ ಕೈಯನ್ನು ಹಿಡಿದ ಋತ್ವಿಜರು ಹೇಳುವುದಕ್ಕಾಗಿ |

---

❖ [ಯಜಮಾನನೇ !] ***ತ್ವಾ** = ನಿನ್ನನ್ನು ; **ಪಾವವಮಾನೇನ ಸ್ತೋಮೇನ** = ಬಹಿಷ್ಪವಮಾನಾದಿಸ್ತೋತ್ರಗಳಿಗೆ ಸಂಬಂಧಿಸಿದ, [ತ್ರಿವೃದಾದಿ] ಸ್ತೋಮಸಾಧ್ಯವಾದ ಸ್ತೋತ್ರದಿಂದಲೂ; **ಗಾಯತ್ರಸ್ಯ ವರ್ತನ್ಯಾ** = ಗಾಯತ್ರ್ಯಾದಿ ಛಂದಸಂಬಂಧಿಯಾದ [ಸೋಮಾಹರಣಾದಿಯಜ್ಞಾಂಗಸಂಬಂಧಿ] ಮಾರ್ಗದಿಂದಲೂ; **ಉಪಾಂಶೋಃ ವೀರ್ಯೇಣ** = ಉಪಾಂಶುಗ್ರಹಾದಿಗಳ ಸಾಮರ್ಥ್ಯದಿಂದಲೂ; **ದೇವಃ ಸವಿತಾ* ತ್ವಾ** = ಸವಿತೃದೇವನು ನಿನ್ನನ್ನು ; **ಜೀವನಸ್ಯಾಯ್ಯೈ** = ಚಿರಕಾಲ ಬದುಕುವುದಕ್ಕಾಗಿ; **ಜೀವಾತವೇ** = ಬದುಕಿಸುವ ಔಷಧವನ್ನು ಪಡೆಯುವುದಕ್ಕಾಗಿ; **ಉತ್ಸೃಜತು** = [ದೀರ್ಘರೋಗದಿಂದ ಬಿಡಿಸಿ] ಮೇಲಕ್ಕೆ ಎತ್ತಲಿ.

---

ಯಜಮಾನನು ನೋಡಬೇಕು. ವ್ಯಾಪಕನಾದ ಮಹಾವಿಷ್ಣುವು ಇದನ್ನು ಚೆನ್ನಾಗಿ ನೋಡಿರುತ್ತಾನೆ. ಪಶುದೇವತೆಯಾದ ಇಡಾದೇವಿಯು ಈ ಘೃತವನ್ನು ಗೋವುಗಳಲ್ಲಿ ವೃದ್ಧಿಗೊಳಿಸಿದಳು. ಇಂತಹ ಘೃತವನ್ನು ನಾನು ನೋಡುತ್ತೇನೆ.

---

* ಈ ಮಂತ್ರಗಳಲ್ಲಿ 'ತ್ವಾ' ಎಂಬ ಪದವು ಪುನಃ ಪುನಃ ಬಂದಿದೆ. ಇದು 'ಪಾವಮಾನೇನ ತ್ವಾ ಸ್ತೋಮೇನ ಉತ್ಸೃಜತು' 'ಗಾಯತ್ರೇಣ ತ್ವಾ ಉತ್ಸೃಜತು' 'ಉಪಾಂಶೋಃ ವೀರ್ಯೇಣ ತ್ವಾ ಉತ್ಸೃಜತು' ಎಂಬ ವಾಕ್ಯಗಳಲ್ಲಿ ಪ್ರತ್ಯೇಕ ಅನ್ವಯವನ್ನು ಮಾಡುವುದಕ್ಕಾಗಿ ಇದೆ.
ಹೀಗೆಯೇ 'ಬೃಹದ್ರಥಂತರಯೋಸ್ತ್ವಾ' 'ಅಗ್ನೇಸ್ತ್ವಾ ಮಾತ್ರಯಾ' ಎಂಬಲ್ಲಿಯೂ ಪ್ರತ್ಯೇಕಾನ್ವಯವಿರುತ್ತದೆ.

**ಬೃಹದ್ರಥಂತರಯೋಸ್ತ್ವಾ ಸ್ತೋಮೇನ ತ್ರಿಷ್ಟುಭೋ ವರ್ತನ್ಯಾ ಶುಕ್ರಸ್ಯ ವೀರ್ಯೇಣ ದೇವಸ್ತ್ವಾ ಸವಿತೋತ್ಸೃಜತು [ಸವಿತೋತ್ (೨) ಸೃಜತು] ಜೀವಾತವೇ ಜೀವನಸ್ಯಾಯಾ ಅಗ್ನೇಸ್ತ್ವಾ ಮಾತ್ರಯಾ**

---

**ಬೃಹದ್ರಥಂತರಯೋರಿತಿ ಬೃಹತ್–ರಥಂತರಯೋಃ** । ತ್ವಾ । ಸ್ತೋಮೇನ । ತ್ರಿಷ್ಟುಭಃ । ವರ್ತನ್ಯಾ । ಶುಕ್ರಸ್ಯ । ವೀರ್ಯೇಣ । ದೇವಃ । ತ್ವಾ । ಸವಿತಾ । ಉದಿತಿ । ಸೃಜತು । ಜೀವಾತವೇ । ಜೀವನಸ್ಯಾಯೈ । ಅಗ್ನೇಃ । ತ್ವಾ । ಮಾತ್ರಯಾ ।

---

| ಮಂತ್ರ | ವಿನಿಯೋಗ |
|---|---|
| **ಬೃಹದ್ರಥಂತರಯೋಃ.... ಜೀವನಸ್ಯಾಯೈ ॥** | ಋತ್ವಿಜರು ಹೇಳಲು |
| **ಅಗ್ನೇಸ್ತ್ವಾ........ ಜೀವನಸ್ಯಾಯೈ ॥** | ಋತ್ವಿಜರು ಪಾಠ ಮಾಡಲು |

---

✤ [ಹಾಗೆಯೇ] **ತ್ವಾ** = ನಿನ್ನನ್ನು; **ಬೃಹದ್ರಥಂತರಯೋಃ ಸ್ತೋಮೇನ** = ಬೃಹದ್ರಥಂತರಗಳೆಂಬ ಸ್ತೋತ್ರಗಳ ಸಪ್ತದಶಾದಿಸ್ತೋಮಗಳಿಂದಲೂ; **ತ್ರಿಷ್ಟುಭಃ ವರ್ತನ್ಯಾ** = ತ್ರಿಷ್ಟುಪ್ ಛಂದಸ್ಸಿನ ಮಾರ್ಗದಿಂದಲೂ; **ಶುಕ್ರಸ್ಯ ವೀರ್ಯೇಣ** = ಶುಕ್ರಾದಿಗ್ರಹಗಳ ಸಾಮರ್ಥ್ಯದಿಂದಲೂ; **ದೇವಃ ಸವಿತಾ ತ್ವಾ** = ಸವಿತೃದೇವನು ನಿನ್ನನ್ನು; **ಜೀವನಸ್ಯಾಯೈ** = ಚಿರಕಾಲ ಬದುಕುವುದಕ್ಕಾಗಿ; **ಜೀವಾತವೇ** = ಜೀವನಾಧಾರವಾದ ಔಷಧಗಳನ್ನು ಹೊಂದಲು; **ಉತ್ಸೃಜತು** = [ದೀರ್ಘರೋಗದಿಂದ] ಮುಕ್ತನನ್ನಾಗಿ ಮಾಡಲಿ. ✤ **ತ್ವಾ** = ನಿನ್ನನ್ನು ; **ಅಗ್ನೇಃ ಮಾತ್ರಯಾ** = ಅಗ್ನಿಯ ಆತ್ಮಸ್ವರೂಪವಾದ [ಯಜ್ಞಾಯಜ್ಞಿಯಸಾಮಸಾಧ್ಯವಾದ] ಸ್ತೋತ್ರದಿಂದಲೂ;

---

ಈ ಆಯುಷ್ಕಾಮೇಷ್ಟಿಯಲ್ಲಿ ಬ್ರಹ್ಮನು ಯಜಮಾನನ ಕೈಯನ್ನು ಹಿಡಿದಿರುತ್ತಾನೆ. ಇತರ ಋತ್ವಿಜರು ಬ್ರಹ್ಮನ ಕೈಯನ್ನು ಮುಟ್ಟುತ್ತಾ ಸುತ್ತಲೂ ಕುಳಿತು ಮಂತ್ರವನ್ನು ಹೇಳುತ್ತಾರೆ. ಆ ಮಂತ್ರಗಳ ತಾತ್ಪರ್ಯ ಹೀಗಿದೆ : ಸೋಮಯಾಗದಲ್ಲಿ ಪಾವಮಾನ,

# ಜಗತ್ಯೈ ವರ್ತನ್ಯಾಽಽಗ್ರಯಣಸ್ಯ ವೀರ್ಯೇಣ ದೇವಸ್ತ್ವಾ ಸವಿತೋತ್ಸೃಜತು ಜೀವಾತವೇ ಜೀವನಸ್ಯಾಯಾ ಇಮಮಗ್ನ ಆಯುಷೇ ವರ್ಚಸೇ

---

ಜಗತ್ಯೈ । ವರ್ತನ್ಯಾ । ಆಗ್ರಯಣಸ್ಯ । ವೀರ್ಯೇಣ । ದೇವಃ । ತ್ವಾ । ಸವಿತಾ । ಉದಿತಿ । ಸೃಜತು । ಜೀವಾತವೇ । ಜೀವನಸ್ಯಾಯೈ । ಇಮಮ್ । ಅಗ್ನೇ । ಆಯುಷೇ । ವರ್ಚಸೇ ।

---

| ಮಂತ್ರ | ವಿನಿಯೋಗ |
|---|---|
| **ಇಮಮಗ್ನ........ ಯಥಾಸತ್ ॥** | ಅಧ್ವರ್ಯವು ಯಜಮಾನನನ್ನು ಅಭಿಮಂತ್ರಿಸಲು |

---

**ಜಗತ್ಯೈ ವರ್ತನ್ಯಾ** = ಜಗತೀಛಂದಸ್ಸಿನ ಮಾರ್ಗದಿಂದಲೂ; **ಆಗ್ರಯಣಸ್ಯ ವೀರ್ಯೇಣ** = ಆಗ್ರಯಣಗ್ರಹಸಾಮರ್ಥ್ಯದಿಂದಲೂ; **ದೇವಃ ಸವಿತಾ ತ್ವಾ** = ಸವಿತೃದೇವನು ನಿನ್ನನ್ನು; **ಜೀವನಸ್ಯಾಯೈ ಜೀವಾತವೇ** = ಚಿರಜೀವನಕ್ಕೆ ಸಾಧನವಾದ ಔಷಧಗಳಿಂದ ಉಂಟಾದ ದೀರ್ಘರೋಗಪರಿಹಾರದಿಂದ ದೀರ್ಘಾಯುಸ್ಸನ್ನಿತ್ತು; **ಉತ್ಸೃಜತು** = [ದೀರ್ಘರೋಗದಿಂದ] ಬಿಡಿಸಿ ರಕ್ಷಿಸಲಿ. ✤ **ಅಗ್ನೇ** = ಎಲೈ ! ಅಗ್ನಿದೇವನೇ !* **ಇಮಮ್** = ಈ ಯಜಮಾನನನ್ನು ; **ಆಯುಷೇ** = ಚಿರಜೀವನಕ್ಕೂ; **ವರ್ಚಸೇ** = ತೇಜಸ್ಸಿಗೂ/ಬಲಕ್ಕೂ;

---

ಬೃಹದ್ರಥಂತರ, ಯಜ್ಞಾಯಜ್ಞಿಯ ಇವು ಮುಖ್ಯವಾದ ಸ್ತೋಮಗಳು. ತ್ರಿವೃತ್, ಪಂಚದಶ, ಸಪ್ತದಶ ಮತ್ತು ಏಕವಿಂಶ ಇವು ಜ್ಯೋತಿಸಂಜ್ಞಕ ಸ್ತೋಮಗಳು. ಗಾಯತ್ರ, ತ್ರಿಷ್ಟುಪ್, ಜಗತೀ ಇವು ಮುಖ್ಯವಾದ ಛಂದಸ್ಸುಗಳು.

---

* ಮುಂದೆ ಬ್ರಾಹ್ಮಣಭಾಗದಲ್ಲಿ '**ಘೃತಂ ಪಿಬತಿ**' ಎಂದಿರುವುದರಿಂದ ಭಟ್ಟಭಾಸ್ಕರರು '**ಇಮಮಗ್ನೇ.... ಕೃಧಿ**' ಎಂಬ ಮಂತ್ರಕ್ಕೆ 'ಈ ತುಪ್ಪವನ್ನು ಆಯುಸ್ಸಾಧನವನ್ನಾಗಿ ಮಾಡು' ಎಂದು ಅರ್ಥ ಮಾಡಿರುತ್ತಾರೆ.

ಸಾಯಣರು ಮುಂದೆ ಅದು ಹೊಂದದಿರುವುದರಿಂದ ಯಜಮಾನನ ಪರವಾಗಿ ಅರ್ಥ ಮಾಡಿರುತ್ತಾರೆ.

**ಕೃಧಿ ಪ್ರಿಯಗ್ಂ ರೇತೋ ವರುಣ ಸೋಮ ರಾಜನ್ । ಮಾತೇವಾಸ್ಮಾ ಅದಿತೇ ಶರ್ಮ ಯಚ್ಛ ವಿಶ್ವೇ ದೇವಾ ಜರದಷ್ಟಿರ್ಯಥಾऽಸತ್ ॥**

---

ಕೃಧಿ । ಪ್ರಿಯಮ್ । ರೇತಃ । ವರುಣ । ಸೋಮ । ರಾಜನ್ ॥ ಮಾತಾ । ಇವ । ಅಸ್ಮೈ । ಅದಿತೇ । ಶರ್ಮ । ಯಚ್ಛ । ವಿಶ್ವೇ । ದೇವಾಃ । ಜರದಷ್ಟಿರಿತಿ ಜರತ್ – ಅಷ್ಟಿಃ । ಯಥಾ । ಅಸತ್ ॥

---

**ಕೃಧಿ** = [ಹೊಂದಲು ತಕ್ಕವನನ್ನಾಗಿ/ಸಮರ್ಥನನ್ನಾಗಿ] ಮಾಡು; **ವರುಣ** = ವರುಣ ದೇವನೇ! **ರಾಜನ್ ಸೋಮ** = ರಾಜನಾದ ಸೋಮನೇ ! **ಪ್ರಿಯಮ್ ರೇತಃ** ಕೃಧಿ = ಪ್ರಿಯವಾದ ಪ್ರಜೋತ್ಪಾದನಶಕ್ತಿಯನ್ನು ಹೊಂದುವಂತೆ ಮಾಡಿರಿ; **ಅದಿತೇ** = ಅದಿತಿದೇವಿಯೇ !/ ಭೂಮಿಯೇ ! **ಅಸ್ಮೈ** = ಈ ಯಜಮಾನನಿಗೆ; **ಮಾತಾ ಇವ** = ತಾಯಿಯಂತೆ; **ಶರ್ಮ ಯಚ್ಛ** = ಸುಖವನ್ನು ಕೊಡು; **ವಿಶ್ವೇ ದೇವಾಃ** = ಸರ್ವದೇವತೆಗಳೇ ! ವಿಶ್ವದೇವತೆಗಳೇ ! [ಈ ಯಜಮಾನನು] **ಯಥಾ** = ಹೇಗೆ; **ಜರದಷ್ಟಿಃ ಅಸತ್** = ಮುಪ್ಪನ್ನು ಸ್ವಾಭಾವಿಕವಾಗಿ ಹೊಂದುತ್ತಾನೋ [ಹಾಗೆ ಮಾಡಿರಿ]

---

ಉಪಾಂಶುಗ್ರಹ, ಶುಕ್ರಗ್ರಹ ಮತ್ತು ಆಗ್ರಯಣ ಇವು ಮುಖ್ಯಗ್ರಹಗಳು. ಯಜಮಾನನೇ ! ಇವೆಲ್ಲವೂ ನಿನ್ನನ್ನು ರಕ್ಷಿಸಲಿ. ಸವಿತೃದೇವನು ನಿನ್ನ ರೋಗವನ್ನು ಪರಿಹರಿಸಲಿ. ದೀರ್ಘಕಾಲ ಜೀವಿಸುವಂತೆ ಮಾಡುವ ಜೀವನೌಷಧವನ್ನು ಪಡೆಯುವಂತೆ ಮಾಡಿ ರೋಗವನ್ನು ಪರಿಹರಿಸಲಿ. ಚಿರಕಾಲ ಆಯುಸ್ಸನ್ನು ಕೊಡಲಿ.

**ಚಿನ್ನದ ಕುಂಡಲಗಳಿಂದ ಯುಕ್ತವಾದ ಘೃತವನ್ನು ಯಜಮಾನನು ಕುಡಿಯಬೇಕು. ಹಾಗೆ ಕುಡಿಯುತ್ತಿರುವ ಯಜಮಾನನನ್ನು ಅಧ್ವರ್ಯುವು ಅಭಿಮಂತ್ರಿಸುತ್ತಾನೆ. ಆ ಮಂತ್ರದ ತಾತ್ಪರ್ಯವು ಹೀಗಿದೆ :**

ಎಲೈ ! ಅಗ್ನಿದೇವನೇ ! ಈ ಯಜಮಾನನು ಆಯುಷ್ಮಂತನೂ ಬಲಶಾಲಿಯೂ ಆಗುವಂತೆ ಅನುಗ್ರಹಿಸು. ವರುಣ ! ಸೋಮರೇ ! ಈತನು ಪ್ರಿಯಪುತ್ರರನ್ನು ಪಡೆಯುವ ಶಕ್ತಿಯನ್ನು ಹೊಂದುವಂತೆ ಮಾಡಿರಿ. ಓ ! ಅದಿತಿದೇವಿಯೇ ! ನೀನು ತಾಯಿಯಂತೆ ಈ ಯಜಮಾನನಿಗೆ ಸುಖವನ್ನು ಉಂಟುಮಾಡಬೇಕು. ಓ ! ವಿಶ್ವದೇವರೇ ! ನೀವು ಈ ಯಜಮಾನನು ಮುಪ್ಪನ್ನು ಹೊಂದುವವರೆಗೂ ಸುಖವಾಗಿ ಬಾಳುವಂತೆ ಅನುಗ್ರಹಿಸಿರಿ.

**ಅಗ್ನಿರಾಯುಷ್ಮಾನ್ತ್ಸ ವನಸ್ಪತಿಭಿರಾಯುಷ್ಮಾನ್ತೇನ ತ್ವಾಽಽಯುಷಾಽಽಯುಷ್ಮಂತಂ ಕರೋಮಿ ಸೋಮ ಆಯುಷ್ಮಾನ್ತ್ಸ ಓಷಧೀಭಿರ್ಯಜ್ಞ ಆಯುಷ್ಮಾನ್ತ್ಸ**

---

**ಅಗ್ನಿಃ** । ಆಯುಷ್ಮಾನ್ । ಸಃ । ವನಸ್ಪತಿಭಿರಿತಿ ವನಸ್ಪತಿ–ಭಿಃ । ಆಯುಷ್ಮಾನ್ । ತೇನ । ತ್ವಾ । ಆಯುಷಾ । ಆಯುಷ್ಮಂತಮ್ । ಕರೋಮಿ । **ಸೋಮಃ** । ಆಯುಷ್ಮಾನ್ । ಸಃ । ಓಷಧೀಭಿರಿತ್ಯೋಷಧಿ–ಭಿಃ । **ಯಜ್ಞಃ** । ಆಯುಷ್ಮಾನ್ । ಸಃ ।

---

| ಮಂತ್ರ | ವಿನಿಯೋಗ |
| --- | --- |
| **ಅಗ್ನಿರಾಯುಷ್ಮಾನ್..... ಸ್ವಧಯಾ .......... ಕರೋಮಿ** । | ಅಧ್ವರ್ಯುವು ಯಜಮಾನನ ಬಲಗೈಯನ್ನು ಹಿಡಿಯಲು **ಸಾ. ಭಾ.** ಬ್ರಹ್ಮನು ಹಿಡಿಯಲು **ಭ. ಭಾ. ಭಾ.** |

---

✤ **ಅಗ್ನಿಃ ಆಯುಷ್ಮಾನ್** = ಅಗ್ನಿದೇವನು ಆಯುಷ್ಮಂತನಾಗಿರುತ್ತಾನೆ; **ಸಃ ವನಸ್ಪತಿಭಿಃ ಆಯುಷ್ಮಾನ್** = ಆ ಅಗ್ನಿದೇವನು ವನಸ್ಪತಿಗಳಿಂದ [ಕಟ್ಟಿಗೆಗಳಿಂದ] ಇನ್ನೂ ಹೆಚ್ಚಾಗಿ ಪ್ರಜ್ವಲಿಸುತ್ತಾನೆ. **ತೇನ ಆಯುಷಾ** = ಆ ಅಗ್ನಿಯ ಆಯುಸ್ಸಿನಿಂದ; **ತ್ವಾ** = ನಿನ್ನನ್ನು; **ಆಯುಷ್ಮಂತಮ್ ಕರೋಮಿ** = ಉಜ್ವಲವಾದ ಆಯುಸ್ಸನ್ನು ಪಡೆದವನನ್ನಾಗಿ ಮಾಡುತ್ತೇನೆ. ✤ **ಸೋಮಃ ಆಯುಷ್ಮಾನ್** = ಸೋಮದೇವನು ಆಯುಷ್ಮಂತನು. **ಸಃ ಓಷಧೀಭಿಃ** ಆಯುಷ್ಮಾನ್ = ಆ ಸೋಮದೇವನು ಸೋಮಲತಾರೂಪವಾದ ಓಷಧಿಗಳಿಂದ ವೃದ್ಧಿ ಹೊಂದುತ್ತಾನೆ; ತೇನ ಆಯುಷಾ ತ್ವಾ ಆಯುಷ್ಮಂತಮ್ ಕರೋಮಿ = ಆ ಸೋಮನ ಆಯುಸ್ಸಿನಿಂದ ನಿನ್ನನ್ನು ಆಯುಷ್ಮಂತನನ್ನಾಗಿ ಮಾಡುತ್ತೇನೆ. ✤ **ಯಜ್ಞಃ ಆಯುಷ್ಮಾನ್** = ಯಜ್ಞವು ಆಯುಷ್ಮಂತವಾಗಿದೆ; **ಸಃ** = ಆ ಯಜ್ಞವು

---

ಎಲೈ ! ಯಜಮಾನನೇ ! ಅಗ್ನಿಯು ಸಮಿತ್ತುಗಳಿಂದಲೂ, ಸೋಮನು ಸೋಮಲತೆಯ ಅಭಿಷವದಿಂದಲೂ, ಯಜ್ಞವು ಋತ್ವಿಜರಿಗೆ ದಕ್ಷಿಣೆಯನ್ನು ಕೊಡುವುದ

**ದಕ್ಷಿಣಾಭಿರ್ಬ್ರಹ್ಮಾಯುಷ್ಮತ್ತದ್ಬ್ರಾಹ್ಮಣೈರಾಯುಷ್ಮದ್ದೇವಾ ಆಯುಷ್ಮಂತಸ್ತೇಽಮೃತೇನ ಪಿತರ ಆಯುಷ್ಮಂತಸ್ತೇ ಸ್ವಧಯಾಽಽಯುಷ್ಮಂತಸ್ತೇನ ತ್ವಾಽಽಯುಷಾಽಽಯುಷ್ಮಂತಂ ಕರೋಮಿ ||೪೦–10||**

**[ವಿಶ್ವೇಷಾಂ ದೇವಾನಾಂ ಪ್ರಾಣೋಽಸಿ ತ್ರಿಷ್ಟುಭೋ ವರ್ತನ್ಯಾ ಶುಕ್ರಸ್ಯ ವೀರ್ಯೇಣ ದೇವಸ್ತ್ವಾ ಸವಿತೋಚ್ಛ್ರೇವು ಆಯುಷ್ಮಾನ್ಪಂಚವಿಗ್ಂಶತಿಶ್ಚ ||]**

---

ದಕ್ಷಿಣಾಭಿಃ | ಬ್ರಹ್ಮ | ಆಯುಷ್ಮತ್ | ತತ್ | ಬ್ರಾಹ್ಮಣೈಃ | ಆಯುಷ್ಮತ್ | ದೇವಾಃ | ಆಯುಷ್ಮಂತಃ | ತೇ | ಅಮೃತೇನ | ಪಿತರಃ | ಆಯುಷ್ಮಂತಃ | ತೇ | ಸ್ವಧಯೇತಿ ಸ್ವ–ಧಯಾ | ಆಯುಷ್ಮಂತಃ | ತೇನ | ತ್ವಾ | ಆಯುಷಾ | ಆಯುಷ್ಮಂತಮ್ | ಕರೋಮಿ ||10||

---

**ದಕ್ಷಿಣಾಭಿಃ** ಆಯುಷ್ಮಾನ್ = ಆ ಯಜ್ಞವು ಋತ್ವಿಜರಿಗೆ ನೀಡುವ ದಕ್ಷಿಣೆಗಳಿಂದ ಅತಿಶಯವೃದ್ಧಿಯನ್ನು ಹೊಂದುತ್ತದೆ; ತೇನ ಆಯುಷಾ ತ್ವಾ ಆಯುಷ್ಮಂತಮ್ ಕರೋಮಿ = ಆ ಯಜ್ಞದ ಆಯುಸ್ಸಿನಿಂದ ನಿನ್ನನ್ನು ಆಯುಷ್ಮಂತನನ್ನಾಗಿ ಮಾಡುತ್ತೇನೆ. ✤ **ಬ್ರಹ್ಮ ಆಯುಷ್ಮತ್** = ವೇದವು ಆಯುಷ್ಮತ್ತಾಗಿದೆ; **ತತ್ ಬ್ರಾಹ್ಮಣೈಃ ಆಯುಷ್ಮತ್** = ಅದು ಬ್ರಾಹ್ಮಣರ ಅಧ್ಯಯನ–ಅಧ್ಯಾಪನಗಳಿಂದ ವಿಶೇಷವೃದ್ಧಿಯನ್ನು ಪಡೆಯುತ್ತದೆ; ತೇನ ಆಯುಷಾ ತ್ವಾ ಆಯುಷ್ಮಂತಮ್ ಕರೋಮಿ = ಆ ವೇದದ ಆಯುಸ್ಸಿನಿಂದ ನಿನ್ನನ್ನು ಆಯುಷ್ಮಂತನನ್ನಾಗಿ ಮಾಡುತ್ತೇನೆ. ✤ **ದೇವಾಃ** = ದೇವತೆಗಳು **ಆಯುಷ್ಮಂತಃ** = ಆಯುಷ್ಮಂತರು; **ತೇ ಅಮೃತೇನ** ಆಯುಷ್ಮಂತಃ = ಅಮೃತರೂಪವಾದ ಹವಿಸ್ಸಿನಿಂದ ಅಧಿಕವಾದ ತೃಪ್ತಿಯನ್ನು ಹೊಂದುತ್ತಾರೆ; ತೇನ ಆಯುಷಾ ತ್ವಾ ಆಯುಷ್ಮಂತಮ್ ಕರೋಮಿ = ಅವರ ಆ ಆಯುಸ್ಸಿನಿಂದ ನಿನ್ನನ್ನು ಆಯುಷ್ಮಂತನನ್ನಾಗಿ ಮಾಡುತ್ತೇನೆ. ✤ **ಪಿತರಃ ಆಯುಷ್ಮಂತಃ** = ಪಿತೃಗಳು ಆಯುಷ್ಮಂತರಾಗಿದ್ದಾರೆ. **ತೇ ಸ್ವಧಯಾ ಆಯುಷ್ಮಂತಃ** = ಅವರು ಸ್ವಧಾಕಾರಪೂರ್ವಕವಾಗಿ ಕೊಡುವ ಪಿಂಡಾದಿಗಳಿಂದ

ಅತಿಶಯವಾಗಿ ತೃಪ್ತರಾಗುತ್ತಾರೆ; **ತೇನ ಆಯುಷಾ ತ್ವಾ ಆಯುಷ್ಮಂತವ್ ಕರೋಮಿ** = ಆ ಪಿತೃಗಳ ಆಯುಸ್ಸಿನಿಂದ ನಿನ್ನನ್ನು ಆಯುಷ್ಮಂತನನ್ನಾಗಿ ಮಾಡುತ್ತೇನೆ.

ರಿಂದಲೂ, ವೇದವು ಬ್ರಾಹ್ಮಣರ ಅಧ್ಯಯನ – ಅಧ್ಯಾಪನಗಳಿಂದಲೂ, ದೇವತೆಗಳು ಹವಿರ್ಭಾಗಗಳಿಂದಲೂ, ಪಿತೃಗಳು ಸ್ವಧಾಕಾರಪೂರ್ವಕವಾಗಿ ಕೊಡುವ ಪಿಂಡಾದಿಗಳಿಂದಲೂ ಅತಿಶಯವೃದ್ಧಿಯನ್ನು ಪಡೆಯುತ್ತಾರೆ. ಅವರೆಲ್ಲರ ಆಯುಸ್ಸಿ ನಿಂದಲೂ ನಿನ್ನನ್ನು ಅಧಿಕವಾದ ಆಯುಸ್ಸನ್ನು ಹೊಂದಿದವನನ್ನಾಗಿ ಮಾಡುವೆನು.

* * *

## ದಶಮಾನುವಾಕವಿಷಯಸಂಗ್ರಹ

**ಜ್ಯೋಗಾಮಯಾವಿನಸ್ತ್ವಿಷ್ಟೌ ಯನ್ನವೇಕ್ಷ್ಯಾಜ್ಯಮೀಕ್ಷತೇ ।**
**[2–5]ಅಶ್ವಿನೋರುಪಹೋಮಾಃ ಸ್ಯುರ್ಘೃತ ಸ್ವಾಮ್ಯಾಜ್ಯಮೀಕ್ಷತೇ ॥**

**ಸ್ವ ್ರಷ್ಟ್ವ ್ರರ್ತ್ವಿಜೋ ಬ್ರಹ್ಮಹಸ್ತಂ [7–9]ಪಾವೇತಿ ಸ್ವಾಮಿನಂ ಜಗುಃ ।**
**[10]ಇಮಂ ಘೃತಂ ಪಿಬಂತಂ ತು ಸ್ವಾಮಿನಂ ಮಂತ್ರಯೇತ ಹಿ ॥**
**[11]ಅಗ್ನಿಃ [12]ಸೋಮಶ್ಚ [13]ಯಜ್ಞಶ್ಚ [14]ಬ್ರಹ್ಮ [15]ದೇವಾಃ [16]ಪಿತೇತಿ ಷಟ್ ॥**

**ಯಥೋಚಿತಾನುಷಂಗೈಸ್ಸ್ಯುರ್ಗೃಹ್ಣೀತೇ ಸ್ವಾಮಿಹಸ್ತಕಮ್ ।**
**ದಶಮೇ ತ್ವನುವಾಕೇಽಸ್ಮಿನ್ಮಂತ್ರಾಃ ಷೋಡಶ ವರ್ಣಿತಾಃ ॥**

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ – 16**

* * *

## ॥ ಏಕಾದಶೋಽನುವಾಕಃ ॥

ಅಗ್ನಿಂ ವಾ ಏತಸ್ಯ ಶರೀರಂ ಗಚ್ಛತಿ ಸೋಮಗ್ಂ ರಸೋ

ವರುಣ ಏನಂ ವರುಣಪಾಶೇನ ಗೃಹ್ಣಾತಿ ಸರಸ್ವತೀಂ

ವಾಗಗ್ನಾವಿಷ್ಣೂ ಆತ್ಮಾ ಯಸ್ಯ ಜ್ಯೋಗಾಮಯತಿ

---

**ಅಗ್ನಿಮ್** । ವೈ । ಏತಸ್ಯ । ಶರೀರಮ್ । ಗಚ್ಛತಿ । ಸೋಮಮ್ । ರಸಃ । ವರುಣಃ । ಏನಮ್ । ವರುಣಪಾಶೇನೇತಿ ವರುಣ–ಪಾಶೇನ । ಗೃಹ್ಣಾತಿ । ಸರಸ್ವತೀಮ್ । ವಾಕ್ । ಅಗ್ನಾವಿಷ್ಣೂ ಇತ್ಯಗ್ನಾ–ವಿಷ್ಣೂ । ಆತ್ಮಾ । ಯಸ್ಯ । ಜ್ಯೋಕ್ । ಆಮಯತಿ ।

---

**ಹತ್ತನೆಯ ಅನುವಾಕದಲ್ಲಿ ಪಂಚಹವಿಷ್ಕೇಷ್ಟಿಯ ಮಂತ್ರಗಳು ಹೇಳಲ್ಪಟ್ಟಿವೆ. ಈ ಹನ್ನೊಂದನೆಯ ಅನುವಾಕದಲ್ಲಿ ಇಷ್ಟಿಯ ವಿಧಾನ, ಮಂತ್ರಗಳ ವ್ಯಾಖ್ಯಾನವೂ ಮಾಡಲ್ಪಟ್ಟಿದೆ.**

**ದೀರ್ಘರೋಗಪೀಡಿತನ ಸ್ಥಿತಿಯ ವಿವರಣೆ**

| | |
|---|---|
| ಯಸ್ಯ ಜ್ಯೋಕ್ ಆಮಯತಿ | ಯಾವನನ್ನು ದೀರ್ಘರೋಗವು ಪೀಡಿಸುತ್ತದೆಯೋ |
| ಏತಸ್ಯ ಶರೀರಮ್ ಅಗ್ನಿಮ್ ಗಚ್ಛತಿ ವೈ | ಈ ದೀರ್ಘರೋಗಪೀಡಿತನ ಶರೀರವು ಅಗ್ನಿಯನ್ನು ಪ್ರವೇಶಿಸುತ್ತದೆ. |
| ರಸಃ ಸೋಮಮ್ ಗಚ್ಛತಿ | ರಸವು ಸೋಮನನ್ನು ಪ್ರವೇಶಿಸುತ್ತದೆ. |
| ಏನಮ್ ವರುಣಃ ವರುಣಪಾಶೇನ ಗೃಹ್ಣಾತಿ | ಜಲಾಧಿಪತಿಯಾದ ವರುಣನು ಇವನನ್ನು ವರುಣಪಾಶದಿಂದ ಬಂಧಿಸುತ್ತಾನೆ. |
| ವಾಕ್ ಸರಸ್ವತೀಮ್ ಗಚ್ಛತಿ | ಮಾತು ವಾಗ್ದೇವತೆಯಾದ ಸರಸ್ವತಿಯಲ್ಲಿ ಸೇರುತ್ತದೆ. |
| ಆತ್ಮಾ ಅಗ್ನಾವಿಷ್ಣೂ ಗಚ್ಛತಿ | ಆತ್ಮವು ಅಗ್ನಾವಿಷ್ಣುದೇವತೆಗಳನ್ನು ಹೊಂದಲು ಬಯಸುತ್ತದೆ. |

---

ದೀರ್ಘರೋಗಿಯಾದವನಿಗೆ ಅಗ್ನಿಯ ಆಗ್ರಹದಿಂದ ಶರೀರದಲ್ಲಿ ಮಾಂಸಕ್ಷಯವಾಗಿ ಅದು ಕೃಶವಾಗುತ್ತದೆ. ಸೋಮನ ಆಗ್ರಹದಿಂದ ರಸಭಾಗವು ಸೋಮನನ್ನು ಸೇರಿ ರಸಕ್ಷಯವಾಗುವುದರಿಂದ ಶರೀರವು ಬಲಹೀನವಾಗುತ್ತದೆ. ವರುಣನ ಕೋಪದಿಂದ

## ಯೋ ಜ್ಯೋಗಾಮಯಾವೀ ಸ್ಯಾದ್ಯೋ ವಾ ಕಾಮಯೇತ

## ಸರ್ವಮಾಯುರಿಯಾಮಿತಿ ತಸ್ಮಾ ಏತಾಮಿಷ್ಟಿಂ

## ನಿರ್ವಪೇದಾಗ್ನೇಯಮಷ್ಟಾಕಪಾಲಗ್ಂ ಸೌಮ್ಯಂ ಚರುಂ

---

ಯಃ । ಜ್ಯೋಗಾಮಯಾವೀತಿ ಜ್ಯೋಕ್ – ಆಮಯಾವೀ । ಸ್ಯಾತ್ । ಯಃ । ವಾ । ಕಾಮಯೇತ । ಸರ್ವಮ್ । ಆಯುಃ । ಇಯಾಮ್ । ಇತಿ । ತಸ್ಮೈ । ಏತಾಮ್ । ಇಷ್ಟಿಮ್ । ನಿರಿತಿ । ವಪೇತ್ । ಆಗ್ನೇಯಮ್ । ಅಷ್ಟಾಕಪಾಲಮಿತ್ಯಷ್ಟಾ–ಕಪಾಲಮ್ । ಸೌಮ್ಯಮ್ । ಚರುಮ್ ।

---

### ಐದು ಹವಿಸ್ಸುಗಳುಳ್ಳ ಇಷ್ಟಿಯ ವಿಧಾನ

| | |
|---|---|
| ಯಃ ಜ್ಯೋಗಾಮಯಾವೀ ಸ್ಯಾತ್ | ಯಾವನು ಚಿರಕಾಲ ರೋಗಪೀಡಿತನಾಗಿರುತ್ತಾನೆಯೋ |
| ಯಃ ಸರ್ವಮ್ ಆಯುಃ ಇಯಾಮ್ ಇತಿ ಕಾಮಯೇತ ವಾ | ಅಥವಾ ಪೂರ್ಣಾಯುಸ್ಸನ್ನು ಹೊಂದಬೇಕೆಂದು ಯಾವನು ಬಯಸುತ್ತಾನೆಯೋ |
| ತಸ್ಮೈ ಏತಾಮ್ ಇಷ್ಟಿಮ್ ನಿರ್ವಪೇತ್ | ಅವನಿಗಾಗಿ ಈ ಯಾಗವನ್ನು ಮಾಡಬೇಕು/ ಅವನು ಈ ಯಾಗವನ್ನು ಅನುಷ್ಠಿಸಬೇಕು. |

### ಇಷ್ಟಿಯ ಸ್ವರೂಪ

| | |
|---|---|
| ಆಗ್ನೇಯಮ್ ಅಷ್ಟಾಕಪಾಲಮ್ | ಅಗ್ನಿದೇವತಾಕವಾದ ಅಷ್ಟಾಕಪಾಲ ಪುರೋಡಾಶದ್ರವ್ಯವುಳ್ಳ ಯಾಗವನ್ನೂ |
| ಸೌಮ್ಯಮ್ ಚರುಮ್ | ಸೋಮದೇವತೆಗಾಗಿ ಚರುದ್ರವ್ಯದ ಯಾಗವನ್ನೂ |

---

ಜಲೋದರಪೀಡೆಯು ಉಂಟಾಗುತ್ತದೆ. ಸರಸ್ವತಿಯ ಅನುಗ್ರಹವಿಲ್ಲದುದರಿಂದ ಮಾತನಾಡುವ ಶಕ್ತಿಯು ಕುಂದಿ ಮಾತಾಡಲೂ ಕಷ್ಟವಾಗುತ್ತದೆ. ಅಗ್ನಾವಿಷ್ಣುಗಳ ಆಗ್ರಹದಿಂದ ಸಾಯುವ ಸ್ಥಿತಿಯೂ ಒದಗುತ್ತದೆ.

ಚಿರಕಾಲರೋಗಿಯೂ, ಅಥವಾ ದೀರ್ಘಾಯುಸ್ಸನ್ನು ಬಯಸುವವನೂ, ಐದು ಹವಿಸ್ಸುಗಳುಳ್ಳ ಈ ಯಾಗವನ್ನು ಅನುಷ್ಠಿಸಬೇಕು.

## ವಾರುಣಂ ದಶಕಪಾಲಗ್ಂ ಸಾರಸ್ವತಂ ಚರುಮಾಗ್ನಾ ವೈಷ್ಣವಮೇಕಾದಶಕಪಾಲಮಗ್ನೇರೇವಾಸ್ಯ ಶರೀರಂ ನಿಷ್ಕ್ರೀಣಾತಿ ಸೋಮಾದ್ರಸಂ [ಸೋಮಾದ್ರಸಮ್ (೧)

ವಾರುಣಮ್ । ದಶಕಪಾಲಮಿತಿ ದಶ–ಕಪಾಲಮ್ । ಸಾರಸ್ವತಮ್ । ಚರುಮ್ । ಆಗ್ನಾ ವೈಷ್ಣವಮಿತ್ಯಾಗ್ನಾ–ವೈಷ್ಣವಮ್ । ಏಕಾದಶಕಪಾಲಮಿತ್ಯೇಕಾದಶ–ಕಪಾಲಮ್ । **ಅಗ್ನೇಃ** । ಏವ । ಅಸ್ಯ । ಶರೀರಮ್ । ನಿಷ್ಕ್ರೀಣಾತೀತಿ ನಿಃ–ಕ್ರೀಣಾತಿ । **ಸೋಮಾತ್** । ರಸಮ್ ।

| | |
|---|---|
| ವಾರುಣಮ್ ದಶಕಪಾಲಮ್ | ವರುಣದೇವನಿಗಾಗಿ ದಶಕಪಾಲಪುರೋಡಾಶ ಯಾಗವನ್ನೂ |
| ಸಾರಸ್ವತಮ್ ಚರುಮ್ | ಸರಸ್ವತೀದೇವತೆಗಾಗಿ ಚರುದ್ರವ್ಯದ ಯಾಗವನ್ನೂ |
| ಆಗ್ನಾವೈಷ್ಣವಮ್ ಏಕಾದಶಕಪಾಲಮ್ ನಿರ್ವಪೇತ್ | ಅಗ್ನಾವಿಷ್ಣು ದೇವತೆಗಳನ್ನು ಉದ್ದೇಶಿಸಿ ಏಕಾದಶ ಕಪಾಲಪುರೋಡಾಶಯಾಗವನ್ನು ಅನುಷ್ಠಿಸಬೇಕು. |

### ಇಷ್ಟಿಯ ಯಾಗಗಳ ಫಲವಿವರಣೆ

| | |
|---|---|
| ಅಸ್ಯ ಶರೀರಮ್ ಅಗ್ನೇಃ ಏವ ನಿಷ್ಕ್ರೀಣಾತಿ | ಹವಿರ್ದಾನವನ್ನು ಮಾಡಿ ಅಗ್ನಿದೇವನ ಅನುಗ್ರಹ ದಿಂದ ಈ ಯಜಮಾನನ ಶರೀರವನ್ನು ಬಿಡಿಸಿ ಕೊಂಡಂತೆ ಆಗುತ್ತದೆ. |
| ಸೋಮಾತ್ ರಸಮ್ ನಿಷ್ಕ್ರೀಣಾತಿ | ಸೋಮದೇವನಿಗೆ ಹವಿಸ್ಸನ್ನಿತ್ತು ಅವನ ಅನುಗ್ರಹ ದಿಂದ ಬಲವನ್ನು ಬಿಡಿಸಿಕೊಂಡಂತಾಗುತ್ತದೆ. |

ಈ ಇಷ್ಟಿಯಲ್ಲಿ ಐದು ಹವಿಸ್ಸುಗಳು. ಅಗ್ನಿದೇವತಾಕವಾಗಿ ಅಷ್ಟಾಕಪಾಲಪುರೋಡಾಶ ಯಾಗವು ಒಂದು; ಸೋಮದೇವನಿಗಾಗಿ ಚರುದ್ರವ್ಯಯಾಗವು ಒಂದು; ವರುಣ ದೇವನಿಗಾಗಿ ದಶಕಪಾಲಪುರೋಡಾಶಯಾಗವು ಒಂದು; ಸರಸ್ವತೀದೇವತೆಗಾಗಿ ಚರುದ್ರವ್ಯಯಾಗವು ಇನ್ನೊಂದು; ಅಗ್ನಾವಿಷ್ಣುದೇವತೆಗಳಿಗಾಗಿ ಏಕಾದಶಕಪಾಲ ಪುರೋಡಾಶದ್ರವ್ಯವುಳ್ಳ ಯಾಗವು ಮತ್ತೊಂದು; ಹೀಗೆ ಐದು ಹವಿಸ್ಸುಗಳುಳ್ಳ ಇಷ್ಟಿಯಿದು.

ವಾರುಣೇನ್ನೈವೈನಂ] ವಾರುಣೇನ್ನೈವೈನಂ ವರುಣ

ಪಾಶಾನ್ಮುಂಚತಿ ಸಾರಸ್ವತೇನ ವಾಚಂ ದಧಾತ್ಯಗ್ನಿಃ ಸರ್ವಾ

ದೇವತಾ ವಿಷ್ಣುರ್ಯಜ್ಞೋ

---

**ವಾರುಣೇನ** । ಏವ । ಏನಮ್ । ವರುಣಪಾಶಾದಿತಿ ವರುಣ–ಪಾಶಾತ್ । ಮುಂಚತಿ ।

**ಸಾರಸ್ವತೇನ** । ವಾಚಮ್ । ದಧಾತಿ । ಅಗ್ನಿಃ । ಸರ್ವಾಃ । ದೇವತಾಃ । ವಿಷ್ಣುಃ । ಯಜ್ಞಃ ।

---

| | |
|---|---|
| ವಾರುಣೇನ ಏನಮ್ ವರುಣಪಾಶಾತ್ ಮುಂಚತಿ ಏವ | ವರುಣನಿಗೆ ಹವಿಸ್ಸನ್ನು ಕೊಡುವುದರಿಂದ ಯಜಮಾನನನ್ನು ವರುಣಪಾಶದಿಂದ ಮುಕ್ತನನ್ನಾಗಿ ಮಾಡುತ್ತಾನೆ. |
| ಸಾರಸ್ವತೇನ ವಾಚಮ್ ದಧಾತಿ | ಸರಸ್ವತೀದೇವತೆಗೆ ಹವಿಸ್ಸನ್ನು ಸಮರ್ಪಿಸುವುದರಿಂದ ಯಜಮಾನನಲ್ಲಿ ಮಾತಿನ ಸಾಮರ್ಥ್ಯವನ್ನುಂಟುಮಾಡುತ್ತಾನೆ. |
| ಅಗ್ನಿಃ ಸರ್ವಾಃ ದೇವತಾಃ | ಅಗ್ನಿಯು ಸರ್ವದೇವತಾಸ್ವರೂಪನು. |
| ವಿಷ್ಣುಃ ಯಜ್ಞಃ | ವಿಷ್ಣುವು ಯಜ್ಞಸ್ವರೂಪನು. |

---

*ಅಧ್ವರ್ಯುವು ಈ ಐದು ಹವಿಸ್ಸುಗಳುಳ್ಳ ಯಾಗದಿಂದ ಆ ದೇವತೆಗಳಿಗೆ ಸಲ್ಲಬೇಕಾದ ಭಾಗಗಳನ್ನು ಸಮರ್ಪಿಸಿ, ಯಜಮಾನನು ರೋಗಮುಕ್ತನಾಗುವಂತೆಯೂ, ದೀರ್ಘಾಯುಸ್ಸನ್ನು ಪಡೆಯುವಂತೆಯೂ ಮಾಡುತ್ತಾನೆ.

ಅಗ್ನಿಯ ಅನುಗ್ರಹದಿಂದ ದೇಹವು ಕೃಶವಾಗುವುದು ತಪ್ಪಿ ದೃಢಕಾಯನಾಗುತ್ತಾನೆ. ಸೋಮನ ಅನುಗ್ರಹದಿಂದ ಬಲವನ್ನು ಪಡೆಯುತ್ತಾನೆ. ವರುಣನ ಕೃಪೆಯಿಂದ ಜಲೋದರಾದಿಗಳಿಂದ ಮುಕ್ತನಾಗುತ್ತಾನೆ. ಸರಸ್ವತಿಯ ದಯೆಯಿಂದ ಮಾತಿನ ಸಾಮರ್ಥ್ಯವನ್ನು ಮತ್ತೆ ಪಡೆಯುತ್ತಾನೆ. ಅಗ್ನಾವಿಷ್ಣುಗಳ ಅನುಗ್ರಹದಿಂದ ದೇವತೆಗಳೆಲ್ಲರ ಮತ್ತು ಯಜ್ಞಸ್ವರೂಪಿಯಾದ ವಿಷ್ಣುವಿನ ದಯೆಯು ದೊರೆತು ಸರ್ವರೋಗ

---

* ಇಲ್ಲಿ ಅಧ್ವರ್ಯುವು ಹವಿಃಪ್ರದಾನದಿಂದ ದೇವತೆಗಳನ್ನು ಒಲಿಸಿಕೊಂಡು ಯಜಮಾನನನ್ನು ನೀರೋಗಿಯನ್ನಾಗಿ ಮಾಡುತ್ತಾನೆ ಎಂದಿದ್ದರೂ ಋತ್ವಿಜರು ಯಜಮಾನನ ಪ್ರತಿನಿಧಿಗಳಾದುದರಿಂದ ಕಾರ್ಯವೂ, ಫಲವೂ ಯಜಮಾನನಿಗೇ ಸೇರುವುದು.

ದೇವತಾಭಿಶ್ಚೈವೈನಂ ಯಜ್ಞೇನ ಚ ಭಿಷಜ್ಯತ್ಯುತ
ಯದೀತಾಸುರ್ಭವತಿ ಜೀವತ್ಯೇವ ಯನ್ನವಮೈತ್ತನ್ನವ
ನೀತಮಭವದಿತ್ಯಾಜ್ಯಮವೇಕ್ಷತೇ ॥

---

ದೇವತಾಭಿಃ । ಚ । ಏವ । ಏನಮ್ । ಯಜ್ಞೇನ । ಚ । ಭಿಷಜ್ಯತಿ । ಉತ । ಯದಿ ।
ಇತಾಸುರಿತೀತ – ಅಸುಃ । ಭವತಿ । ಜೀವತಿ । ಏವ । ಯತ್ । ನವಮ್ । ಐತ್ । ತತ್ ।
ನವನೀತಮಿತಿ ನವ–ನೀತಮ್ । ಅಭವತ್ । ಇತಿ । ಆಜ್ಯಮ್ । ಅವೇತಿ । ಈಕ್ಷತೇ ।

---

| | |
|---|---|
| ದೇವತಾಭಿಃ ಚ ಯಜ್ಞೇನ ಚ ಏನಮ್ ಭಿಷಜ್ಯತಿ ಏವ | ಸರ್ವದೇವತಾನುಗ್ರಹದಿಂದಲೂ, ವಿಷ್ಣುವಿನ ಅನುಗ್ರಹದಿಂದಲೂ ಯಜಮಾನನಿಗೆ ತಕ್ಕ ಚಿಕಿತ್ಸೆಯನ್ನು ಮಾಡುತ್ತಾನೆ. |
| ಉತ ಯದಿ ಇತಾಸುಃ ಭವತಿ ಜೀವತಿ ಏವ | ಒಂದು ವೇಳೆ ಯಜಮಾನನು ಸಾಯುವ ಸ್ಥಿತಿಯನ್ನು ಹೊಂದಿದ್ದರೂ ಬದುಕಿಯೇ ಬದುಕುತ್ತಾನೆ. |

**ಆಜ್ಯಾವೇಕ್ಷಣದಲ್ಲಿ ಮಂತ್ರವಿಧಿ – ಪ್ರಶಂಸೆ**

| | |
|---|---|
| ಯತ್ ನವಮ್ ಐತ್ ತತ್ ನವನೀತಮ್ ಅಭವತ್ ಇತಿ ಆಜ್ಯಮ್ ಅವೇಕ್ಷತೇ | ಈ 'ಯನ್ನವಮ್... ಅಭವತ್' ಈ ಮಂತ್ರದಿಂದ ಆಜ್ಯವನ್ನು ಅವೇಕ್ಷಣ ಮಾಡಬೇಕು. |

---

ಮುಕ್ತನಾಗುತ್ತಾನೆ. ಸಾಯುವ ಸ್ಥಿತಿಯಲ್ಲಿ ಇದ್ದರೂ ಮತ್ತೆ ಚೆನ್ನಾಗಿ ಬದುಕುತ್ತಾನೆ. ದೀರ್ಘಾಯುಷ್ಮಂತನಾಗುತ್ತಾನೆ.

**'ಯನ್ನವಮೈತ್'** ಎಂಬ ಮಂತ್ರದಿಂದ ಆಜ್ಯಾವೇಕ್ಷಣೆಯನ್ನು ಮಾಡುತ್ತಾನೆ. **ನವನೀತ, ಸರ್ಪಿ, ಘೃತ** ಎಂಬ ಈ ಮೂರು ಅವಸ್ಥೆಗಳ ನಿರ್ವಚನದಿಂದಲೇ ಶ್ರುತಿಯು ಈ ಆಜ್ಯದ ಮಹತ್ತ್ವವನ್ನು ತಿಳಿಸಿಕೊಡುತ್ತದೆ. ಬೇರೆ ವ್ಯಾಖ್ಯಾನವೇ ಬೇಕಿಲ್ಲ.

**ರೂಪಮೇವಾಸ್ಯೈತನ್ಮಹಿಮಾನಂ ವ್ಯಾಚಷ್ಟೇಽಶ್ವಿನೋಃ**

**ಪ್ರಾಣೋಽಸೀತ್ಯಾಹಾಶ್ವಿನೌ ವೈ ದೇವಾನಾಂ**

**[ದೇವಾನಾಮ್ (೨)] ಭಿಷಜೌ ತಾಭ್ಯಾಮೇವಾಸ್ಮೈ ಭೇಷಜಂ**

---

ರೂಪಮ್ । ಏವ । ಅಸ್ಯ । ಏತತ್ । ಮಹಿಮಾನಮ್ । ವ್ಯಾಚಷ್ಟ ಇತಿ ವಿ–ಆಚಷ್ಟೇ ।
**ಅಶ್ವಿನೋಃ** । ಪ್ರಾಣ ಇತಿ ಪ್ರ–ಅನಃ । ಅಸಿ । ಇತಿ । ಆಹ । ಅಶ್ವಿನೌ । ವೈ । ದೇವಾನಾಮ್ ।
ಭಿಷಜೌ । ತಾಭ್ಯಾಮ್ । ಏವ । ಅಸ್ಮೈ । ಭೇಷಜಮ್ ।

---

| | |
|---|---|
| ಅಸ್ಯ ರೂಪಮ್ ಏವ ಏತತ್ ಮಹಿಮಾನಮ್ ವ್ಯಾಚಷ್ಟೇ | ಅವಸ್ಥೆಗಳ ನಿರ್ವಚನದಿಂದಲೇ ಆಜ್ಯದ ಮಹತ್ತ್ವವನ್ನು ಶ್ರುತಿಯು ತಿಳಿಸಿಕೊಡುತ್ತದೆ. |

**ಉಪಹೋಮಮಂತ್ರವಿಧಿ; ಪ್ರಶಂಸೆ**

| | |
|---|---|
| 'ಅಶ್ವಿನೋಃ ಪ್ರಾಣೋಽಸಿ' ಇತಿ ಆಹ | ಮೊದಲನೆಯ ಉಪಹೋಮಮಂತ್ರದಲ್ಲಿ ಶ್ರುತಿಯು 'ಅಶ್ವಿನೀದೇವತೆಗಳ ಪ್ರಾಣವೇ ಆಗಿದ್ದೀಯೆ' ಎಂದು ಹೇಳುತ್ತದೆ. |
| ಅಶ್ವಿನೌ ವೈ ದೇವಾನಾಮ್ ಭಿಷಜೌ | ಅಶ್ವಿನೀದೇವತೆಗಳಿಬ್ಬರು ದೇವವೈದ್ಯರಾಗಿರುತ್ತಾರೆ. |
| ತಾಭ್ಯಾಮ್ ಏವ ಅಸ್ಮೈ ಭೇಷಜಮ್ | ಆ ಅಶ್ವಿನೀದೇವತೆಗಳಿಂದಲೇ ಈ ಯಜಮಾನನಿಗೆ ಚಿಕಿತ್ಸೆಯನ್ನು ಅಧ್ವರ್ಯುವು |

---

ಈ ನಾಲ್ಕು ಉಪಹೋಮಮಂತ್ರಗಳಲ್ಲಿ ಶ್ರುತಿಯು ಕ್ರಮವಾಗಿ ಯಜಮಾನನಿಗೆ ಸಂಬಂಧಿಸಿದಂತೆ 'ನೀನು ಅಶ್ವಿನೀದೇವತೆಗಳಿಗೆ ಪ್ರಾಣಪ್ರಿಯನು, ಇಂದ್ರನಿಗೆ ಪ್ರಾಣ ಪ್ರಿಯನು, ಮಿತ್ರಾವರುಣರಿಗೆ ಪ್ರಾಣಪ್ರಿಯನು, ವಿಶ್ವದೇವರಿಗೆ ಪ್ರಾಣಪ್ರಿಯನು' ಎಂದು ಮೊದಲಾಗಿ ಹೇಳುತ್ತದೆ. ಆ ದೇವತೆಗಳ ಅನುಗ್ರಹದಿಂದ ಕ್ರಮವಾಗಿ ದೇವವೈದ್ಯ ರಾದ ಅಶ್ವಿನೀದೇವತೆಗಳ ಕೃಪೆಯಿಂದ ಚಿಕಿತ್ಸೆಯನ್ನೂ, ಇಂದ್ರನಿಂದ ಇಂದ್ರಿಯ

**ಕರೋತೀಂದ್ರಸ್ಯ ಪ್ರಾಣೋಽಸೀತ್ಯಾಹೇಂದ್ರಿಯಮೇವಾಸ್ಮಿ-
ನ್ನೇತೇನ ದಧಾತಿ ಮಿತ್ರಾವರುಣಯೋಃ ಪ್ರಾಣೋಽಸೀ-
ತ್ಯಾಹ ಪ್ರಾಣಾಪಾನಾವೇವಾಸ್ಮಿನ್ನೇತೇನ ದಧಾತಿ
ವಿಶ್ವೇಷಾಂ ದೇವಾನಾಂ**

---

ಕರೋತಿ । **ಇಂದ್ರಸ್ಯ** । ಪ್ರಾಣ ಇತಿ ಪ್ರ–ಅನಃ । ಅಸಿ । ಇತಿ । ಆಹ । ಇಂದ್ರಿಯಮ್ । ಏವ । ಅಸ್ಮಿನ್ನ್ । ಏತೇನ । ದಧಾತಿ । **ಮಿತ್ರಾವರುಣಯೋರಿತಿ ಮಿತ್ರಾ–ವರುಣಯೋಃ** । ಪ್ರಾಣ ಇತಿ ಪ್ರ–ಅನಃ । ಅಸಿ । ಇತಿ । ಆಹ । ಪ್ರಾಣಾಪಾನಾವಿತಿ ಪ್ರಾಣ–ಅಪಾನೌ । ಏವ । ಅಸ್ಮಿನ್ನ್ । ಏತೇನ । ದಧಾತಿ । ವಿಶ್ವೇಷಾಮ್ । ದೇವಾನಾಮ್ ।

---

| | |
|---|---|
| **ಕರೋತಿ** | ಮಾಡಿಸುತ್ತಾನೆ. |
| **ಇಂದ್ರಸ್ಯ ಪ್ರಾಣಃ ಅಸಿ ಇತಿ ಆಹ** | [ಈ ಎರಡನೆಯ ಉಪಹೋಮಮಂತ್ರದಲ್ಲಿ ಶ್ರುತಿಯು] 'ಇಂದ್ರನಿಗೆ ನೀನು ಪ್ರಾಣಪ್ರಿಯನಾಗಿದ್ದೀಯೆ' ಎಂದು ಹೇಳುತ್ತದೆ. |
| **ಏತೇನ ಅಸ್ಮಿನ್ ಇಂದ್ರಿಯಮ್ ಏವ ದಧಾತಿ** | ಈ ಮಂತ್ರದಿಂದ ಅಧ್ವರ್ಯುವು ಈ ಯಜಮಾನನಲ್ಲಿ ಇಂದ್ರಿಯಶಕ್ತಿಯನ್ನು ನೆಲೆಗೊಳಿಸುತ್ತಾನೆ. |
| **ಮಿತ್ರಾವರುಣಯೋಃ ಪ್ರಾಣಃ ಅಸಿ ಇತಿ ಆಹ** | [ಮೂರನೆಯ ಉಪಹೋಮಮಂತ್ರದಲ್ಲಿ ಶ್ರುತಿಯು] 'ನೀನು ಮಿತ್ರಾವರುಣನಿಗೆ ಪ್ರಾಣಪ್ರಿಯನಾಗಿದ್ದೀಯೆ' ಎಂದು ಹೇಳುತ್ತದೆ. |
| **ಏತೇನ ಅಸ್ಮಿನ್ ಪ್ರಾಣಾಪಾನೌ ಏವ ದಧಾತಿ** | [ಈ ಉಪಹೋಮದಿಂದ ಅಧ್ವರ್ಯುವು] ಈ ಯಜಮಾನನಲ್ಲಿ ಪ್ರಾಣಾಪಾನಗಳು ಒಳ್ಳೆಯ ಸ್ಥಿತಿಯಲ್ಲಿರುವಂತೆ ಮಾಡುತ್ತಾನೆ. |
| **ವಿಶ್ವೇಷಾಮ್ ದೇವಾನಾಮ್** | [ನಾಲ್ಕನೆಯ ಉಪಹೋಮಮಂತ್ರದಲ್ಲಿ ಶ್ರುತಿಯು] ನೀನು ವಿಶ್ವದೇವರಿಗೆ |

ಪ್ರಾಣೋಽಸಿತ್ಯಾಹ ವೀರ್ಯಮೇವಾಸ್ಮಿನ್ನೇತೇನ

ದಧಾತಿ ಘೃತಸ್ಯ ಧಾರಾಮಮೃತಸ್ಯ ಪಂಥಾಮಿತ್ಯಾಹ

ಯಥಾಯಜುರೇವೈತತ್ಪಾವಮಾನೇನ

---

ಪ್ರಾಣ ಇತಿ ಪ್ರ–ಅನಃ । ಅಸಿ । ಇತಿ । ಆಹ । ವೀರ್ಯಮ್ । ಏವ । ಅಸ್ಮಿನ್ । ಏತೇನ । ದಧಾತಿ । **ಘೃತಸ್ಯ** । ಧಾರಾಮ್ । ಅಮೃತಸ್ಯ । ಪಂಥಾಮ್ । ಇತಿ । ಆಹ । ಯಥಾಯಜುರಿತಿ ಯಥಾ–ಯಜುಃ । ಏವ । ಏತತ್ । **ಪಾವಮಾನೇನ** ।

---

| | |
|---|---|
| **ಪ್ರಾಣಃ ಅಸಿ ಇತಿ ಆಹ** | **ಪ್ರಾಣವಾಗಿರುವೆಯೆಂದು ಹೇಳುತ್ತದೆ.** |
| **ಏತೇನ ಅಸ್ಮಿನ್ ವೀರ್ಯಮ್ ಏವ ದಧಾತಿ** | **ಈ ಉಪಹೋಮದಿಂದ ಅಧ್ವರ್ಯುವು ಈ ಯಜಮಾನನಲ್ಲಿ ವೀರ್ಯಶಕ್ತಿಯನ್ನು ಸ್ಥಾಪಿಸುತ್ತಾನೆ.** |

**ಯಜಮಾನನ ಆಜ್ಯಾವೇಕ್ಷಣವಿಧಿ; ಪ್ರಶಂಸೆ**

| | |
|---|---|
| **ಘೃತಸ್ಯ ಧಾರಾಮ್ ಅಮೃತಸ್ಯ ಪಂಥಾಮ್ ಇತಿ ಆಹ** | **'ತುಪ್ಪದ ಧಾರೆಯು ಶಾಶ್ವತವಾದ ಯಜ್ಞಫಲಕ್ಕೆ ಮಾರ್ಗ' ಇದೇ ಮೊದಲಾದ ಯಜುರ್ಮಂತ್ರ ಭಾಗವನ್ನು ಶ್ರುತಿಯು ಹೇಳುತ್ತದೆ.** |
| ***ಯಥಾಯಜುಃ ಏವ ಏತತ್** | **ಯಜುರ್ಮಂತ್ರದಲ್ಲಿ ಹೇಳಿರುವಂತೆಯೇ ಈ ತುಪ್ಪವು ಮಹತ್ತ್ವಪೂರ್ಣವಾದುದು.** |

---

**ಶಕ್ತಿಯನ್ನೂ , ಮಿತ್ರಾವರುಣರಿಂದ ಪ್ರಾಣಾಪಾನಗಳ ಸುಸ್ಥಿತಿಯನ್ನೂ , ವಿಶ್ವದೇವರಿಂದ ವೀರ್ಯಶಕ್ತಿಯನ್ನೂ ಅಧ್ವರ್ಯುವು ಈ ಯಜಮಾನನಲ್ಲಿ ನೆಲೆಗೊಳಿಸುತ್ತಾನೆ. 'ಘೃತಸ್ಯ ಧಾರಾಮ್' ಎಂಬ ಮಂತ್ರವು ತುಪ್ಪದ ಧಾರೆಯು ಶಾಶ್ವತವಾದ ಯಜ್ಞಫಲಕ್ಕೆ ಮಾರ್ಗ ಎಂದು ತಿಳಿಸುತ್ತದೆ. ಈ ಯಜುರ್ಮಂತ್ರದಲ್ಲಿ ಹೇಳಿರುವಂತೆಯೇ ಈ ತುಪ್ಪವು ಮಹತ್ತ್ವ ಪೂರ್ಣವಾಗಿದೆ. ವಿವರಣೆಯು ಬೇಕಾಗಿಲ್ಲ.**

---

* **'ಘೃತಸ್ಯ ಧಾರಾಮ್' ಎಂಬ ಮಂತ್ರವು ಋಗ್ರೂಪವಾಗಿದ್ದರೂ ಯಜುರ್ವೇದ ಮಂತ್ರವಾದುದರಿಂದ ಹೀಗೆ ಹೇಳಲಾಗಿದೆ.**

ತ್ವಾ ಸ್ತೋಮೇನೇತ್ಯಾಹ [ಸ್ತೋಮೇನೇತಿ (೩) ಆಹ]
ಪ್ರಾಣಮೇವಾಸ್ಮಿನ್ನೇತೇನ ದಧಾತಿ ಬೃಹದ್ರಥಂತರ
ಯೋಸ್ತ್ವಾ ಸ್ತೋಮೇನೇತ್ಯಾಹೌಜ ಏವಾಸ್ಮಿನ್ನೇತೇನ

---

ತ್ವಾ । ಸ್ತೋಮೇನ । ಇತಿ । ಆಹ । ಪ್ರಾಣಮಿತಿ ಪ್ರ–ಅನಮ್ । ಏವ । ಅಸ್ಮಿನ್ನ್ । ಏತೇನ । ದಧಾತಿ । ಬೃಹದ್ರಥಂತರಯೋರಿತಿ ಬೃಹತ್–ರಥಂತರಯೋಃ । ತ್ವಾ । ಸ್ತೋಮೇನ । ಇತಿ । ಆಹ । ಓಜಃ । ಏವ । ಅಸ್ಮಿನ್ನ್ । ಏತೇನ ।

---

**ಋತ್ವಿಜರು ಬ್ರಹ್ಮನ ಕೈಯನ್ನು ಮುಟ್ಟುತ್ತಾ ಹೇಳಬೇಕಾದ ಮಂತ್ರವಿಧಿ; ಪ್ರಶಂಸೆ.**

| | |
|---|---|
| ಪಾವಮಾನೇನ ತ್ವಾ ಸ್ತೋಮೇನ ಇತಿ ಆಹ | 'ಪಾವಮಾನೇನ........' ಎಂಬ ಮಂತ್ರದ ತಾತ್ಪರ್ಯವನ್ನು ಶ್ರುತಿಯು ಹೇಳುತ್ತದೆ. ಶ್ರುತಿಯು 'ಬಹಿಷ್ಪವಮಾನಾದಿ ಸ್ತೋತ್ರಗಳಿಂದ ಸವಿತೃದೇವನು ದೀರ್ಘ ರೋಗದಿಂದ ಉದ್ಧರಿಸಿ ದೀರ್ಘಾಯುಸ್ಸನ್ನು ಕೊಡಲಿ' ಎಂದು ಮೊದಲಾಗಿ ಹೇಳುತ್ತದೆ. |
| ಏತೇನ ಅಸ್ಮಿನ್ ಪ್ರಾಣಮ್ ಏವ ದಧಾತಿ | ಇದರಿಂದ ಈ ಯಜಮಾನನಲ್ಲಿ ಪ್ರಾಣಶಕ್ತಿಯನ್ನು ಅಧ್ವರ್ಯು ಮೊದಲಾದವರು ವೃದ್ಧಿಗೊಳಿಸುತ್ತಾರೆ. |
| ಬೃಹದ್ರಥಂತರಯೋಃ ತ್ವಾ ಸ್ತೋಮೇನ ಇತಿ ಆಹ | ಶ್ರುತಿಯು 'ಬೃಹದ್ರಥಂತರಸಾಮಸಾಧ್ಯವಾದ ಪೃಷ್ಠಸ್ತೋತ್ರಗಳಿಂದ ಸವಿತೃದೇವನು ನಿನಗೆ ಆರೋಗ್ಯವನ್ನು ಉಂಟುಮಾಡಲಿ' ಎಂದು ಹೇಳುತ್ತದೆ. |
| ಏತೇನ ಅಸ್ಮಿನ್ ಓಜಃ ಏವ | ಇದರಿಂದ ಅಧ್ವರ್ಯು ಮೊದಲಾದವರು ಯಜಮಾನನಲ್ಲಿ ಕಾಂತಿಯನ್ನೇ |

---

ಋತ್ವಿಜರು ಬ್ರಹ್ಮನ ಕೈಯನ್ನು ಮುಟ್ಟುತ್ತಾ ಯಜಮಾನನನ್ನು ಸುತ್ತುವರಿದು

ದಧಾತ್ಯಗ್ನೇಸ್ತ್ವಾ ಮಾತ್ರಯೇತ್ಯಾಹಾತ್ಮಾನಮೇವಾಸ್ಮಿ

ನ್ನೇತೇನ ದಧಾತ್ಯೃತ್ವಿಜಃ ಪರ್ಯಾಹುರ್ಯಾವಂತ

ಏವರ್ತ್ವಿಜಸ್ತ ಏನಂ ಭಿಷಜ್ಯಂತಿ

---

ದಧಾತಿ । ಅಗ್ನೇಃ । ತ್ವಾ । ಮಾತ್ರಯಾ । ಇತಿ । ಆಹ । ಆತ್ಮಾನಮ್ । ಏವ । ಅಸ್ಮಿನ್ನ್ ।

ಏತೇನ । ದಧಾತಿ । ಋತ್ವಿಜಃ । ಪರೀತಿ । ಆಹುಃ । ಯಾವಂತಃ । ಏವ । ಋತ್ವಿಜಃ । ತೇ ।

ಏನಮ್ । ಭಿಷಜ್ಯಂತಿ ।

---

| | |
|---|---|
| ದಧಾತಿ | ಉಂಟುಮಾಡುತ್ತಾರೆ. |
| ಅಗ್ನೇಃ ತ್ವಾ ಮಾತ್ರಯಾ ಇತಿ ಆಹ | ಶ್ರುತಿಯು 'ಯಜ್ಞಾಯಜ್ಞಿಯಸಾಮಸಾಧ್ಯವಾದ ಅಗ್ನಿಷ್ಟೋಮಸ್ತೋತ್ರದಿಂದ ಸವಿತೃದೇವನು ರೋಗಪರಿಹಾರ ಮಾಡಲಿ' ಎಂದು ಮೊದಲಾಗಿ ಹೇಳುತ್ತದೆ. |
| ಏತೇನ ಅಸ್ಮಿನ್ ಆತ್ಮಾನಮ್ ಏವ ದಧಾತಿ | ಇದರಿಂದ ಅಧ್ವರ್ಯುವು ಮೊದಲಾದವರು ಯಜಮಾನನಲ್ಲಿ ಆತ್ಮಶಕ್ತಿಯನ್ನು ಬಲಪಡಿಸುತ್ತಾರೆ. |

**ಋತ್ವಿಜರ ಮಂತ್ರಪಾಠವಿಧಿ; ಪ್ರಶಂಸೆ**

| | |
|---|---|
| ಋತ್ವಿಜಃ ಪರ್ಯಾಹುಃ | ಋತ್ವಿಜರು ಸುತ್ತಲೂ ಕುಳಿತು ಈ ಮಂತ್ರಗಳನ್ನು ಹೇಳಬೇಕು. |
| ಯಾವಂತಃ ಋತ್ವಿಜಃ ತೇ ಏವ ಏನಮ್ ಭಿಷಜ್ಯಂತಿ | ಎಷ್ಟು ಜನ ಋತ್ವಿಜರು ಇದ್ದಾರೆಯೋ ಅವರೆಲ್ಲರೂ ಈ ಯಜಮಾನನಿಗೆ ರೋಗ ಚಿಕಿತ್ಸೆಯನ್ನು ಮಾಡಿದಂತಾಗುತ್ತದೆ. |

---

ಹೇಳುವ ಈ ಮಂತ್ರಪಾಠವು 'ಯಜಮಾನನಲ್ಲಿ ಪ್ರಾಣಶಕ್ತಿಯನ್ನೂ, ಕಾಂತಿಯನ್ನೂ, ಆತ್ಮಸಾಮರ್ಥ್ಯವನ್ನೂ ಉಂಟುಮಾಡುತ್ತದೆ' ಎಂದು ಶ್ರುತಿಯು ವಿವರಿಸುತ್ತದೆ.

ಬ್ರಹ್ಮಣೋ ಹಸ್ತಮನ್ವಾರಭ್ಯ ಪರ್ಯಾಹುರೇಕಧೈವ ಯಜಮಾನ

ಆಯುರ್ದಧತಿ ಯದೇವ ತಸ್ಯ ತದ್ಧಿರಣ್ಯಾದ್ಘೃತಂ

[ತದ್ಧಿರಣ್ಯಾತ್ (೪) ಘೃತಂ] ನಿಷ್ಪಿಬತ್ಯಾಯುರ್ವೈ

ಘೃತಮಮೃತಗ್ಂ ಹಿರಣ್ಯಮಮೃತಾದೇವಾಯುರ್ನಿಷ್ಪಿಬತಿ

---

ಬ್ರಹ್ಮಣಃ। ಹಸ್ತಮ್। ಅನ್ವಾರಭ್ಯೇತ್ಯನು–ಆರಭ್ಯ। ಪರೀತಿ। ಆಹುಃ। ಏಕಧೇತ್ಯೇಕ–ಧಾ। ಏವ। ಯಜಮಾನೇ। ಆಯುಃ। ದಧತಿ। ಯತ್। ಏವ। ತಸ್ಯ। ತತ್। **ಹಿರಣ್ಯಾತ್।** ಘೃತಮ್। ನಿರಿತಿ। ಪಿಬತಿ। ಆಯುಃ। ವೈ। ಘೃತಮ್। ಅಮೃತಮ್। ಹಿರಣ್ಯಮ್। ಅಮೃತಾತ್। ಏವ। ಆಯುಃ। ನಿರಿತಿ। ಪಿಬತಿ।

---

| | |
|---|---|
| **ಬ್ರಹ್ಮಣಃ ಹಸ್ತಮ್ ಅನ್ವಾರಭ್ಯ ಪರ್ಯಾಹುಃ** | ಬ್ರಹ್ಮನ ಕೈಯ್ಯನ್ನು ಮುಟ್ಟುತ್ತಾ ಸುತ್ತಲೂ ಕುಳಿತು ಹೇಳಬೇಕು. |
| **ತಸ್ಯ ಯತ್ ತತ್ ಏವ ಆಯುಃ ಯಜಮಾನೇ ಏಕಧಾ ಏವ ದಧತಿ** | ಯಜಮಾನನ ಆಯುಸ್ಸು ಯಾವುದಿದೆಯೋ ಅದನ್ನು ಋತ್ವಿಜರು ಏಕಮತ್ಯದಿಂದ ಒಂದೇ ಬಾರಿ ಯಜಮಾನನಲ್ಲಿ ಉಂಟುಮಾಡುತ್ತಾರೆ. |

**ಆಜ್ಯಪಾನವಿಧಿ; ಪ್ರಶಂಸೆ**

| | |
|---|---|
| **ಹಿರಣ್ಯಾತ್ ಘೃತಮ್ ನಿಷ್ಪಿಬತಿ** | ಯಜಮಾನನು ಸುವರ್ಣಕುಂಡಲಸಿಕ್ತವಾದ ತುಪ್ಪವನ್ನು ಪೂರ್ಣವಾಗಿ ಕುಡಿಯಬೇಕು. |
| **ಆಯುಃ ವೈ ಘೃತಮ್** | ಆಜ್ಯವು ಆಯುಸ್ಸೇ ಆಗಿದೆ. |
| **ಹಿರಣ್ಯಮ್ ಅಮೃತಮ್** | ಸುವರ್ಣವು ಮರಣವನ್ನು ದೂರ ಮಾಡುವ ಅಮೃತವೇ ಆಗಿದೆ. |
| **ಅಮೃತಾತ್ ಏವ ಆಯುಃ ನಿಷ್ಪಿಬತಿ** | ಯಜಮಾನನು ಅಮೃತದಿಂದಲೇ ಆಯೂ ರೂಪವಾದ ತುಪ್ಪವನ್ನು ಕುಡಿದವನಾಗುತ್ತಾನೆ. |

## ಶತಮಾನಂ ಭವತಿ ಶತಾಯುಃ ಪುರುಷಃ ಶತೇಂದ್ರಿಯ ಆಯುಷ್ಯೇವೇಂದ್ರಿಯೇ ಪ್ರತಿತಿಷ್ಠತ್ಯಥೋ ಖಲು ಯಾವತೀ ಸ್ಸಮಾ ಏಷ್ಯನ್ಮನ್ಯೇತ ತಾವನ್ಮಾನಗ್ಂ ಸ್ಯಾತ್ಸಮೃದ್ಧ್ಯೈ

---

ಶತಮಾನಮಿತಿ ಶತ–ಮಾನಮ್ । ಭವತಿ । ಶತಾಯುರಿತಿ ಶತ–ಆಯುಃ । ಪುರುಷಃ । ಶತೇಂದ್ರಿಯ ಇತಿ ಶತ–ಇಂದ್ರಿಯಃ । ಆಯುಷಿ । ಏವ । ಇಂದ್ರಿಯೇ । ಪ್ರತೀತಿ । ತಿಷ್ಠತಿ । ಅಥೋ ಇತಿ । ಖಲು । ಯಾವತೀಃ । ಸಮಾಃ । ಏಷ್ಯನ್ । ಮನ್ಯೇತ । ತಾವನ್ಮಾನಮಿತಿ ತಾವತ್ – ಮಾನಮ್ । ಸ್ಯಾತ್ । ಸಮೃದ್ಧ್ಯಾ ಇತಿ ಸಮ್ – ಋದ್ಧ್ಯೈ ।

---

| | |
|---|---|
| ಶತಮಾನಮ್ ಭವತಿ ಶತಾಯುಃ ಪುರುಷಃ ಶತೇಂದ್ರಿಯಃ | ಆ ಕುಂಡಲವು ನೂರು ಗುಲಗಂಜಿ ತೂಕದ ಚಿನ್ನದಿಂದ ಮಾಡಲ್ಪಟ್ಟಿರಬೇಕು. ಮಾನವನೂ ನೂರು ವರ್ಷ ಆಯುಸ್ಸುಳ್ಳವನು. ನೂರು ವರ್ಷ ಇಂದ್ರಿಯ ಸಾಮರ್ಥ್ಯವುಳ್ಳವನು. |
| ಆಯುಷಿ ಇಂದ್ರಿಯೇ ಏವ ಪ್ರತಿತಿಷ್ಠತಿ | [ಈ ಶತಮಾನಕುಂಡಲಗಳ ಘೃತಪಾನದಿಂದ] ಯಜಮಾನನು ನೂರು ವರ್ಷ ಆಯುಸ್ಸಿನಲ್ಲಿಯೂ, ಇಂದ್ರಿಯಶಕ್ತಿಯಲ್ಲಿಯೂ ಪ್ರತಿಷ್ಠಿತನಾಗಿರುತ್ತಾನೆ. |
| ಅಥೋ ಖಲು | ಅಥವಾ |
| ಯಾವತೀಃ ಸಮಾಃ ಏಷ್ಯನ್ ಮನ್ಯೇತ | [ಈಗ ಆಗಿರುವ ಆಯುಃಕಾಲವನ್ನು ಕಳೆದು] ಉಳಿದ ಎಷ್ಟು ಸಂವತ್ಸರ ಕಾಲ ಬದುಕಬೇಕೆಂದು ಬಯಸುತ್ತಾನೆಯೋ |
| ತಾವನ್ಮಾನಮ್ ಸ್ಯಾತ್ ಸಮೃದ್ಧ್ಯೈ | ಅಷ್ಟು ಗುಲಗಂಜಿ ತೂಕದ ಸುವರ್ಣನಿರ್ಮಿತ ಕುಂಡಲವಾದರೂ ಆಗಬಹುದು. ಇದು [ರೋಗರಹಿತವಾದ] ಆಯುಃಸಮೃದ್ಧಿಗೆ ಕಾರಣವಾಗುತ್ತದೆ. |

---

ಋತ್ವಿಜರೆಲ್ಲರೂ ಸುತ್ತಲೂ ಕುಳಿತು ಈ ಮಂತ್ರಗಳನ್ನು ಹೇಳಬೇಕು. ಇದರಿಂದ ಎಷ್ಟು ಜನ ಋತ್ವಿಜರಿದ್ದಾರೆಯೋ ಅವರೆಲ್ಲರೂ ಯಜಮಾನನ ರೋಗಕ್ಕೆ ಚಿಕಿತ್ಸೆಯನ್ನು

ಇಮಮಗ್ನ ಆಯುಷೇ ವರ್ಚಸೇ ಕೃಧೀತ್ಯಾಹಾಽಽಯು-

ರೇವಾಸ್ಮಿನ್ವರ್ಚೋ ದಧಾತಿ ವಿಶ್ವೇ ದೇವಾ

ಜರದಷ್ಟಿರ್ಯಥಾಽಸದಿತ್ಯಾಹ

---

**ಇಮಾಮ್** । ಅಗ್ನೇ । ಆಯುಷೇ । ವರ್ಚಸೇ । ಕೃಧಿ । ಇತಿ । ಆಹ । ಆಯುಃ । ಏವ । ಅಸ್ಮಿನ್ । ವರ್ಚಃ । ದಧಾತಿ । ವಿಶ್ವೇ । ದೇವಾಃ । ಜರದಷ್ಟಿರಿತಿ ಜರತ್-ಅಷ್ಟಿಃ । ಯಥಾ । ಅಸತ್ । ಇತಿ । ಆಹ ।

---

**ಅಭಿಮಂತ್ರಣಮಂತ್ರದ ವ್ಯಾಖ್ಯಾನ**

| | |
|---|---|
| ಇಮಮ್ ಅಗ್ನೇ ಆಯುಷೇ ವರ್ಚಸೇ ಕೃಧಿ ಇತಿ ಆಹ | ಶ್ರುತಿಯು ಮಂತ್ರದ ಆದಿಭಾಗದ ವಿವರಣೆಯನ್ನು **'ಇಮಾಮ್..... ಕೃಧಿ'** ಎಂದು ಹೇಳುತ್ತದೆ. [ಇದರಿಂದ] |
| ಅಸ್ಮಿನ್ ಆಯುಃ ವರ್ಚಃ ಏವ ದಧಾತಿ | ಅಧ್ವರ್ಯುವು ಈ ಯಜಮಾನನಲ್ಲಿ ಆಯುಸ್ಸನ್ನೂ, ಕಾಂತಿಯನ್ನೂ ಉಂಟು ಮಾಡುತ್ತಾನೆ. |
| ವಿಶ್ವೇ ದೇವಾಃ ಜರದಷ್ಟಿಃ ಯಥಾ ಅಸತ್ ಇತಿ ಆಹ | **'ವಿಶ್ವೇ ದೇವಾಃ ಜರದಷ್ಟಿಃ ಯಥಾಽಸತ್'** ಎಂಬ ನಾಲ್ಕನೆಯ ಪಾದವನ್ನು ಶ್ರುತಿಯು ಹೀಗೆ ವಿವರಿಸುತ್ತದೆ. [ಇದರಿಂದ] |

---

ಮಾಡಿದಂತಾಗುತ್ತದೆ. ಋತ್ವಿಜರು ಬ್ರಹ್ಮನ ಕೈಯನ್ನು ಸ್ಪರ್ಶಿಸುತ್ತಾ ಒಟ್ಟಿಗೇ ಕುಳಿತು ಮಂತ್ರಗಳನ್ನು ಹೇಳಬೇಕು. ಇದರಿಂದ ಋತ್ವಿಜರೆಲ್ಲರೂ ಯಜಮಾನನಿಗೆ ಸಂಪೂರ್ಣವಾದ ಆಯುಷ್ಯವನ್ನು ಐಕಮತ್ಯದಿಂದ ಉಂಟುಮಾಡಿದಂತಾಗುತ್ತದೆ.

ಈ ಇಷ್ಟಿಯಲ್ಲಿ ಯಜಮಾನನು ಘೃತಪಾನವನ್ನು ಮಾಡಬೇಕು. ಅದರ ವಿಧಿಯು ಹೀಗಿದೆ; ಚತುರಸ್ರಾಕಾರವಾದ ಖಾದಿರಪಾತ್ರದಲ್ಲಿ ಉಪಸ್ತರಣ, ಅಭಿಘಾರಣಯುಕ್ತವಾಗಿ ನೂರು ಗುಲಗಂಜಿ ತೂಕದ ಚಿನ್ನದ ಕರ್ಣಕುಂಡಲಗಳನ್ನಿಟ್ಟು ಉಪಹೋಮಾಜ್ಯ

ಜರದಷ್ಟಿಮೇವೈನಂ ಕರೋತ್ಯಗ್ನಿರಾಯುಷ್ಮಾನಿತಿ ಹಸ್ತಂ

ಗೃಹ್ಣಾತ್ಯೇತೇ ವೈ ದೇವಾ ಆಯುಷ್ಮಂತಸ್ತ

---

ಜರದಷ್ಟಿಮಿತಿ ಜರತ್–ಅಷ್ಟಿಮ್ । ಏವ । ಏನಮ್ । ಕರೋತಿ । ಅಗ್ನಿಃ । ಆಯುಷ್ಮಾನ್ । ಇತಿ । ಹಸ್ತಮ್ । ಗೃಹ್ಣಾತಿ । ಏತೇ । ವೈ । ದೇವಾಃ । ಆಯುಷ್ಮಂತಃ । ತೇ ।

---

| | |
|---|---|
| ಏನಮ್ ಜರದಷ್ಟಿಮ್ ಏವ ಕರೋತಿ | ಅಧ್ವರ್ಯುವು ಈ ಯಜಮಾನನನ್ನು ಮುಪ್ಪಿನವರೆಗೂ ನೀರೋಗದೃಢಕಾಯನಾಗಿರುವಂತೆ ಮಾಡುತ್ತಾನೆ. |

**ಬ್ರಹ್ಮನು ಮಾಡಬೇಕಾದ ಯಜಮಾನನ ಹಸ್ತಗ್ರಹಣವಿಧಿ; ವಿವರಣೆ**

| | |
|---|---|
| ಅಗ್ನಿಃ ಆಯುಷ್ಮಾನ್ ಇತಿ ಹಸ್ತಮ್ ಗೃಹ್ಣಾತಿ | **'ಅಗ್ನಿಃ ಆಯುಷ್ಮಾನ್'** ಮೊದಲಾದ ಮಂತ್ರಗಳಿಂದ ಬ್ರಹ್ಮನು ಯಜಮಾನನ ಹಸ್ತವನ್ನು ಹಿಡಿಯಬೇಕು. |
| ಏತೇ ವೈ ದೇವಾಃ ಆಯುಷ್ಮಂತಃ | ಈ ಅಗ್ನಿ, ಸೋಮ, ಯಜ್ಞ, ಬ್ರಹ್ಮ ದೇವತೆಗಳು ಮತ್ತು ಪಿತೃಗಳು ಆಯುಷ್ಮಂತರು. |

---

ಶೇಷವನ್ನು ಸಂಸ್ರಾವ ಮಾಡಿ, ಆಜ್ಯಾವೇಕ್ಷಣವನ್ನು ಮಾಡಿ, ಆ ಆಜ್ಯವನ್ನು ನಿಃಶೇಷವಾಗಿ ಯಜಮಾನನು ಕುಡಿಯಬೇಕು. ಈ ಕ್ರಮದಿಂದ ಕುಂಡಲಗಳಲ್ಲಿ ಅಂಟಿಕೊಂಡಿರುವ ಘೃತವನ್ನು ಯಜಮಾನನು ಪಾನ ಮಾಡಬೇಕು.

ಕುಂಡಲವು ನೂರು ಗುಲಗಂಜಿ ತೂಕದ ಸುವರ್ಣನಿರ್ಮಿತವಾದುದರಿಂದ ಯಜಮಾನನು ನೂರು ವರ್ಷ ಬಾಳುವವನೂ, ದೃಢವಾದ ಇಂದ್ರಿಯಶಕ್ತಿಯುಳ್ಳವನಾಗಿಯೂ ಆಗುತ್ತಾನೆ. ಕುಂಡಲಗಳು ನೂರು ಗುಲಗಂಜಿ ತೂಕದ ಚಿನ್ನದ್ದಾಗಿರಬಹುದು ಅಥವಾ ಮುಂದೆ ಬದುಕಬೇಕೆಂದಿರುವ ವರ್ಷಗಳ ಸಂಖ್ಯೆಗೆ ಅನುಗುಣವಾದ ಚಿನ್ನದ ತೂಕದ ಕುಂಡಲಗಳೂ ಆಗಿರಬಹುದು. ಇದರಿಂದ ರೋಗಪರಿಹಾರವೂ ಆಯುರ್ವೃದ್ಧಿಯೂ ಆಗುತ್ತದೆ.

ಏವಾಸ್ಮಿನ್ನಾಯುರ್ದಧತಿ ಸರ್ವಮಾಯುರೇತಿ ||೪೫-11||

[ರಸಂ ದೇವಾನಾಗ್ಂ ಸ್ತೋಮೇನೇತಿ ಹಿರಣ್ಯಾದಸದಿತಿ ದ್ವಾವಿಗ್ಂಶತಿಶ್ಚ|]

ಏವ | ಅಸ್ಮಿನ್ನ್ | ಆಯುಃ | ದಧತಿ | ಸರ್ವಮ್ | ಆಯುಃ | ಏತಿ || 11 ||

| | |
|---|---|
| ತೇ ಏವ ಅಸ್ಮಿನ್ | ಆ ದೇವತೆಗಳು ಈ ಯಜಮಾನನಲ್ಲಿ |
| ಆಯುಃ ದಧತಿ | ಆಯುಸ್ಸನ್ನು ಉಂಟುಮಾಡುತ್ತಾರೆ. |
| ಸರ್ವಮ್ ಆಯುಃ ಏತಿ | ಯಜಮಾನನು ಪೂರ್ಣಾಯುಸ್ಸನ್ನು ಪಡೆಯುವನು. |

**'ಇಮಮಗ್ನೇ'** ಎಂಬ ಈ ಮಂತ್ರದಿಂದ ಅಧ್ವರ್ಯುವು ತುಪ್ಪವನ್ನು ಕುಡಿಯುತ್ತಿರುವ ಯಜಮಾನನನ್ನು ಅಭಿಮಂತ್ರಣ ಮಾಡಬೇಕು. ಈ ಅಭಿಮಂತ್ರಣಮಂತ್ರದಲ್ಲಿ ಮೊದಲು ಮತ್ತು ಕೊನೆಯ ಪಾದಗಳ ಅಭಿಪ್ರಾಯವನ್ನು ಶ್ರುತಿಯು ವಿವರಿಸುತ್ತದೆ. ಮಿಕ್ಕ ಪಾದಗಳು ಸ್ಪಷ್ಟಾರ್ಥಗಳು.

ಮೊದಲನೆಯ ಪಾದದಿಂದ ಅಧ್ವರ್ಯುವು ಯಜಮಾನನಲ್ಲಿ ದೀರ್ಘಾಯುಸ್ಸನ್ನೂ, ದೇಹಕಾಂತಿಯನ್ನೂ ಉಂಟುಮಾಡುತ್ತಾನೆ. ಕೊನೆಯ ಪಾದದಿಂದ ಯಜಮಾನನನ್ನು ಮುಪ್ಪಿನವರೆಗೂ ನೀರೋಗದೃಢಕಾಯನಾಗಿರುವಂತೆ ಮಾಡುತ್ತಾನೆ.

**'ಅಗ್ನಿರಾಯುಷ್ಮಾನ್'** ಮೊದಲಾದ ಮಂತ್ರಗಳಿಂದ ಬ್ರಹ್ಮನು ಯಜಮಾನನ ಕೈಯನ್ನು ಹಿಡಿಯಬೇಕು. ಈ ಅಗ್ನ್ಯಾದಿಗಳು ಆಯುಷ್ಮಂತರು. ಅವರ ಅನುಗ್ರಹದಿಂದ ಯಜಮಾನನು ದೀರ್ಘಾಯುಷ್ಮಂತನಾಗುತ್ತಾನೆ. ನೀರೋಗದೃಢಕಾಯನೂ ಆಗುತ್ತಾನೆ.

* * *

## ವಿನಿಯೋಗಸಂಗ್ರಹ

**ಏಕಾದಶೇ ತ್ವಿಷ್ಟಿರುಕ್ತಾ ದೀರ್ಘರೋಗ್ಯಾಯುರರ್ಥಿನೋಃ ||**

ಈ ಹನ್ನೊಂದನೆಯ ಅನುವಾಕದಲ್ಲಿ ದೀರ್ಘರೋಗಿಯಾದವನಿಗೆ ರೋಗನಿವೃತ್ತಿಗಾಗಿಯೂ, ಪೂರ್ಣಾಯುಸ್ಸನ್ನು ಬಯಸುವವನಿಗೂ ಇಷ್ಟಿಯು ಹೇಳಲ್ಪಟ್ಟಿದೆ.

* * *

## ॥ ದ್ವಾದಶೋಽನುವಾಕಃ ॥

ಪ್ರಜಾಪತಿರ್ವರುಣಾಯಾಶ್ವಮನಯತ್ಸ ಸ್ವಾಂ ದೇವತಾಮಾರ್ಚ್ಛರ್ತ್ಸ ಪರ್ಯದೀರ್ಯತ ಸ ಏತಂ ವಾರುಣಂ ಚತುಷ್ಕಪಾಲಮಪಶ್ಯತ್ತಂ

---

**ಪ್ರಜಾಪತಿರಿತಿ ಪ್ರಜಾ-ಪತಿಃ** । ವರುಣಾಯ । ಅಶ್ವಮ್ । ಅನಯತ್ । ಸಃ । ಸ್ವಾಮ್ । ದೇವತಾಮ್ । ಆರ್ಚ್ಛರ್ತ್ । ಸಃ । ಪರೀತಿ । ಅದೀರ್ಯತ । ಸಃ । ಏತಮ್ । ವಾರುಣಮ್ । ಚತುಷ್ಕಪಾಲಮಿತಿ ಚತುಃ-ಕಪಾಲಮ್ । ಅಪಶ್ಯತ್ । ತಮ್ ।

---

**ಹಿಂದಿನ ಹನ್ನೊಂದನೆಯ ಅನುವಾಕದಲ್ಲಿ ದೀರ್ಘರೋಗಿಗೆ ಮತ್ತು ಆಯುಷ್ಕಾಮನಿಗೆ ಇಷ್ಟಿಯನ್ನು ಹೇಳಲಾಗಿದೆ. ಈ ಹನ್ನೆರಡನೆಯ ಅನುವಾಕದಲ್ಲಿ ಅಶ್ವದಾನೇಷ್ಟಿಯು ಹೇಳಲ್ಪಟ್ಟದೆ.**

| | |
|---|---|
| ಪ್ರಜಾಪತಿಃ ವರುಣಾಯ ಅಶ್ವಮ್ ಅನಯತ್ | ಪ್ರಜಾಪತಿದೇವನು ವರುಣನಿಗೆ ಕುದುರೆಯನ್ನು ಕೊಟ್ಟನು. |
| ಸಃ ಸ್ವಾಮ್ ದೇವತಾಮ್ ಆರ್ಚ್ಛರ್ತ್ | ಇದರಿಂದ ತನ್ನ ದೇವತ್ವಕ್ಕೆ ತೊಂದರೆಯನ್ನು ತಂದುಕೊಂಡನು. |
| ಸಃ ಪರ್ಯದೀರ್ಯತ | ಆ ಪ್ರಜಾಪತಿಯು ದೀರ್ಘರೋಗಗ್ರಸ್ತನಾದನು. |
| ಸಃ ಏತಮ್ ವಾರುಣಮ್ ಚತುಷ್ಕಪಾಲಮ್ ಅಪಶ್ಯತ್ | [ಆತನು ರೋಗಪರಿಹಾರಕ್ಕಾಗಿ ಚಿಂತಿಸಿ] ವರುಣ ದೇವತಾಕವಾದ ಚತುಷ್ಕಪಾಲಪುರೋಡಾಶ ದ್ರವ್ಯವುಳ್ಳ ಯಾಗವನ್ನು ಕಂಡುಕೊಂಡನು. |

---

ಇದು ವೈದಿಕವಾದ ಅಶ್ವದಾನಕ್ಕೆ ಪ್ರಾಯಶ್ಚಿತ್ತರೂಪವಾಗಿ ವಿಹಿತವಾದ **ವಾರುಣೇಷ್ಟಿ.** ಇದರ ಉಪಾಖ್ಯಾನವು ಹೀಗಿದೆ; ಪ್ರಜಾಪತಿಯು ವರುಣನಿಗೆ ಅಶ್ವದಾನವನ್ನು ಮಾಡಿದನು. ಇದರಿಂದ ಅವನು **'ಪ್ರಾಜಾಪತ್ಯೋ ವೈ ಅಶ್ವಃ'** ಎಂದು ಪ್ರಸಿದ್ಧವಾದ ಅಶ್ವದೇವತ್ವವನ್ನೂ ಕಳೆದುಕೊಂಡನು.

## ನಿರವಪತ್ತತೋ ವೈ ಸ ವರುಣಪಾಶಾದಮುಚ್ಯತ

## ವರುಣೋ ವಾ ಏತಂ ಗೃಹ್ಣಾತಿ ಯೋಽಶ್ವಂ ಪ್ರತಿಗೃಹ್ಣಾತಿ

---

ನಿರಿತಿ। ಅವಪತ್ । ತತಃ । ವೈ । ಸಃ । ವರುಣಪಾಶಾದಿತಿ ವರುಣ – ಪಾಶಾತ್ । ಅಮುಚ್ಯತ । **ವರುಣಃ** । ವೈ । ಏತಮ್ । ಗೃಹ್ಣಾತಿ । ಯಃ । ಅಶ್ವಮ್ । ಪ್ರತಿಗೃಹ್ಣಾತೀತಿ ಪ್ರತಿ–ಗೃಹ್ಣಾತಿ ।

---

| | |
|---|---|
| **ತಮ್ ನಿರವಪತ್** | ಆ ಯಾಗವನ್ನು ಅನುಷ್ಠಿಸಿದನು. |
| **ತತಃ ಸಃ ವರುಣಪಾಶಾತ್ ಅಮುಚ್ಯತ ವೈ** | ಅನಂತರ ಆ ಪ್ರಜಾಪತಿಯು ವರುಣಪಾಶ ರೂಪವಾದ ರೋಗದಿಂದ ಬಿಡುಗಡೆ ಹೊಂದಿದನು/ರೋಗಮುಕ್ತನಾದನು. |

**ಯಾಗವಿಧಿ; ಅದರ ಪ್ರಶಂಸೆ**

| | |
|---|---|
| **ಯಃ ಅಶ್ವಮ್ ಪ್ರತಿಗೃಹ್ಣಾತಿ*** [ಪ್ರತಿಗ್ರಾಹಯತಿ] | ಯಾವನು ಬೇರೊಬ್ಬನು ಕುದುರೆಯನ್ನು ಪ್ರತಿಗ್ರಹಿಸುವಂತೆ ಮಾಡುತ್ತಾನೆಯೋ |
| **ವರುಣಃ ವೈ ಏತಮ್ ಗೃಹ್ಣಾತಿ** | ಈತನನ್ನು ವರುಣನು ತನ್ನ ಪಾಶರೂಪವಾದ ರೋಗದಿಂದ ಆಕ್ರಮಿಸಿಕೊಳ್ಳುತ್ತಾನೆ. |

---

ಅವನ ಶರೀರವೂ ವರುಣಪಾಶರೂಪವಾದ ರೋಗದಿಂದ ಪೀಡಿತವಾಯಿತು. ಇದರ ಪರಿಹಾರವನ್ನು ಚಿಂತಿಸಿ, ಪ್ರಜಾಪತಿಯು ವಾರುಣಚತುಷ್ಕಪಾಲಯಾಗವನ್ನು ಉಪಾಯವಾಗಿ ಕಂಡುಕೊಂಡನು. ಈ ಯಾಗವನ್ನು ಮಾಡಿದನು. ವರುಣನ ಅನುಗ್ರಹದಿಂದ ರೋಗಮುಕ್ತನಾದನು.

ಕುದುರೆಯನ್ನು ದಾನ ಮಾಡುವವನನ್ನು ವರುಣನು ರೋಗರೂಪವಾದ ಪಾಶದಿಂದ ಹಿಡಿಯುತ್ತಾನೆ. ಆದುದರಿಂದ ಎಷ್ಟು ಕುದುರೆಗಳನ್ನು ದಾನ ಮಾಡುತ್ತಾನೆಯೋ ಅಷ್ಟು ಸಂಖ್ಯೆಯ ಚತುಷ್ಕಪಾಲಪುರೋಡಾಶದ್ರವ್ಯವುಳ್ಳ ವರುಣ

---

* **ಅಂತರ್ಭಾವಿತಣ್ಯರ್ಥಃ ಗೃಹಿಃ** । 'ಣಿಚ್' ಪ್ರತ್ಯಯದ ಅರ್ಥವಾದ ಪ್ರೇರಣೆ ಎಂಬ ಅರ್ಥವನ್ನು ಒಳಗೊಂಡ 'ಗೃಹ್' ಧಾತು.

ಯಾವತೋಽಶ್ವಾನ್ಪ್ರತಿಗೃಹ್ಣೀಯಾತ್ತಾವತೋ ವಾರುಣಾಞ್ಚ-
ತುಷ್ಕಪಾಲಾನ್ನಿರ್ವಪೇದ್ವರುಣಮೇವ ಸ್ವೇನ ಭಾಗಧೇಯೇ
ನೋಪಧಾವತಿ ಸ ಏವೈನಂ ವರುಣಪಾಶಾನ್ಮುಂಚತಿ [ಮುಂಚತಿ(೧)]

---

ಯಾವತಃ। ಅಶ್ವಾನ್। ಪ್ರತಿಗೃಹ್ಣೀಯಾದಿತಿ ಪ್ರತಿ–ಗೃಹ್ಣೀಯಾತ್। ತಾವತಃ। ವಾರುಣಾನ್। ಚತುಷ್ಕಪಾಲಾನಿತಿ ಚತುಃ–ಕಪಾಲಾನ್। ನಿರಿತಿ। ವಪೇತ್। ವರುಣಮ್। ಏವ। ಸ್ವೇನ। ಭಾಗಧೇಯೇನೇತಿ ಭಾಗ–ಧೇಯೇನ। ಉಪೇತಿ। ಧಾವತಿ। ಸಃ। ಏವ। ಏನಮ್। ವರುಣಪಾಶಾದಿತಿ ವರುಣ–ಪಾಶಾತ್। ಮುಂಚತಿ।

---

| | |
|---|---|
| ಯಾವತಃ ಅಶ್ವಾನ್ ಪ್ರತಿಗೃಹ್ಣೀಯಾತ್ [ಪ್ರತಿಗ್ರಾಹಯೇತ್] | ಎಷ್ಟು ಕುದುರೆಗಳನ್ನು ದಾನ ಮಾಡುತ್ತಾನೆಯೋ |
| ತಾವತಃ ವಾರುಣಾನ್ ಚತುಷ್ಕಪಾಲಾನ್ ನಿರ್ವಪೇತ್ | ಅಷ್ಟು ಸಂಖ್ಯೆಯ ವರುಣದೇವತಾಕವಾದ ಚತುಷ್ಕಪಾಲಪುರೋಡಾಶದ್ರವ್ಯವುಳ್ಳ ಯಾಗಗಳನ್ನು ಮಾಡಬೇಕು. |
| ವರುಣಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ವರುಣದೇವನನ್ನು ಅವನ ಭಾಗವಾದ ಹವಿಸ್ಸನ್ನು ಕೊಟ್ಟು, ಯಜಮಾನನು ಸೇವಿಸುತ್ತಾನೆ. |
| ಸಃ ಏವ ಏನಮ್ ವರುಣಪಾಶಾತ್ ಮುಂಚತಿ | [ತೃಪ್ತನಾದ] ಆ ವರುಣದೇವನೇ ಈ ಯಜಮಾನನನ್ನು ವರುಣಪಾಶರೂಪವಾದ [ರೋಗದಿಂದ] ಮುಕ್ತನನ್ನಾಗಿ ಮಾಡುತ್ತಾನೆ. |

---

ದೇವತಾಕವಾದ ಯಾಗಗಳನ್ನು ಅನುಷ್ಠಿಸಬೇಕು. ಇದರಿಂದ ವರುಣನಿಗೆ ಸೇರಬೇಕಾದ ಭಾಗವನ್ನು ಕೊಟ್ಟು ಆರಾಧಿಸಿದಂತಾಗುತ್ತದೆ.

**ಚತುಷ್ಕಪಾಲಾ ಭವಂತಿ ಚತುಷ್ಪಾದ್ಧ್ಯಶ್ವಸ್ಸಮೃದ್ಧ್ಯಾ**

**ಏಕಮತಿರಿಕ್ತಂ ನಿರ್ವಪೇದ್ಯಮೇವ ಪ್ರತಿಗ್ರಾಹೀ ಭವತಿ**

---

**ಚತುಷ್ಕಪಾಲಾ ಇತಿ ಚತುಃ–ಕಪಾಲಾಃ** । ಭವಂತಿ । ಚತುಷ್ಪಾದಿತಿ ಚತುಃ–ಪಾತ್ । ಹಿ । ಅಶ್ವಃ । ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ । **ಏಕಮ್** । ಅತಿರಿಕ್ತಮಿತ್ಯತಿ–ರಿಕ್ತಮ್ । ನಿರಿತಿ । ವಪೇತ್ । ಯಮ್ । ಏವ । ಪ್ರತಿಗ್ರಾಹೀತಿ ಪ್ರತಿ–ಗ್ರಾಹೀ । ಭವತಿ ।

---

**ಸಂಖ್ಯಾವಿಧಾನ; ಪ್ರಶಂಸೆ**

| | |
|---|---|
| ಚತುಷ್ಕಪಾಲಾಃ ಭವಂತಿ | ಪುರೋಡಾಶಗಳು ನಾಲ್ಕು ಸಂಖ್ಯೆಯ ಕಪಾಲಗಳಲ್ಲಿ ಪಕ್ವವಾದವುಗಳಾಗಬೇಕು. |
| ಚತುಷ್ಪಾತ್ ಹಿ ಅಶ್ವಃ ಸಮೃದ್ಧ್ಯೈ | ಕುದುರೆಯೂ ನಾಲ್ಕು ಕಾಲುಗಳ ಪ್ರಾಣಿಯಾಗಿದೆ. [ಆದುದರಿಂದ ಈ ಅನುರೂಪವಾದ ಸಂಖ್ಯೆಯ ಪುರೋಡಾಶಗಳಿಂದ] ಫಲಸಮೃದ್ಧಿಯಾಗುತ್ತದೆ. |
| ಏಕಮ್ ಅತಿರಿಕ್ತಮ್ ನಿರ್ವಪೇತ್ | ಹೆಚ್ಚಾಗಿ ಒಂದು ಚತುಷ್ಕಪಾಲದ್ರವ್ಯಯಾಗವನ್ನು ಮಾಡಬೇಕು. |
| ಯಮ್ ಏವ ಪ್ರತಿಗ್ರಾಹೀ ಭವತಿ [ಪ್ರತಿಗ್ರಾಹಯಿತಾ] | ಮುಂದೆ ಯಾವ ಒಂದು ಕುದುರೆಯನ್ನು ದಾನ ಮಾಡುತ್ತಾನೆಯೋ |

---

ವರುಣದೇವನು ತೃಪ್ತನಾಗಿ ಈ ಯಜಮಾನನಿಗೆ ಜಲೋದರಾದಿರೋಗಗಳು ಬಾರದಂತೆ ಮಾಡಿ ರಕ್ಷಿಸುತ್ತಾನೆ. ಪುರೋಡಾಶಗಳೂ ಚತುಷ್ಕಪಾಲಗಳು. ಕುದುರೆಯೂ ನಾಲ್ಕು ಕಾಲಿನದು. ಈ ಸಂಖ್ಯಾಸಾದೃಶ್ಯವು ಫಲಸಮೃದ್ಧಿಗೆ ಕಾರಣವಾಗುತ್ತದೆ. ಬೇಗ ರೋಗಪರಿಹಾರವನ್ನು ಉಂಟುಮಾಡುತ್ತದೆ.

ಎಷ್ಟು ಚತುಷ್ಕಪಾಲಯಾಗಗಳನ್ನು ಮಾಡಬೇಕಾಗಿದೆಯೋ ಅಷ್ಟಕ್ಕಿಂತಲೂ ಹೆಚ್ಚಾಗಿ ಒಂದು ಚತುಷ್ಕಪಾಲಯಾಗವನ್ನು ಮಾಡಬೇಕು. ಇದರಿಂದ ಮುಂದೆ

# ಯಂ ವಾ ನಾಧ್ಯೇತಿ ತಸ್ಮಾದೇವ ವರುಣಪಾಶಾನ್ಮುಚ್ಯತೇ ಯದ್ಯಪರಂ ಪ್ರತಿಗ್ರಾಹೀ ಸ್ಯಾತ್ಸೌರ್ಯಮೇಕಕಪಾಲಮನು ನಿರ್ವಪೇದಮುಮೇವಾಽಽದಿತ್ಯಮುಚ್ಚಾರಂ ಕುರುತೇಽ

ಯಮ್ । ವಾ । ನ । ಅಧ್ಯೇತೀತ್ಯಧಿ–ಏತಿ । ತಸ್ಮಾತ್ । ಏವ । ವರುಣಪಾಶಾದಿತಿ ವರುಣ–ಪಾಶಾತ್ । ಮುಚ್ಯತೇ । ಯದಿ । ಅಪರಮ್ । ಪ್ರತಿಗ್ರಾಹೀತಿ ಪ್ರತಿ–ಗ್ರಾಹೀ । ಸ್ಯಾತ್ । ಸೌರ್ಯಮ್ । ಏಕಕಪಾಲಮಿತ್ಯೇಕ–ಕಪಾಲಮ್ । ಅನು । ನಿರಿತಿ । ವಪೇತ್ । ಅಮುಮ್ । ಏವ । ಆದಿತ್ಯಮ್ । ಉಚ್ಚಾರಮಿತ್ಯುತ್–ಚಾರಮ್ । ಕುರುತೇ ।

| | |
|---|---|
| ಯಮ್ ವೈ ನ ಅಧ್ಯೇತಿ | ಯಾವುದಾದರೂ ಒಂದು ಕುದುರೆಯನ್ನು ಮರೆತು ಬಿಡುತ್ತಾನೆಯೋ |
| ತಸ್ಮಾತ್ ಏವ ವರುಣ ಪಾಶಾತ್ ಮುಚ್ಯತೇ | [ಈ ಅತಿರಿಕ್ತಯಾಗದಿಂದ] ವರುಣನ ಆಗ್ರಹದಿಂದ ಸಂಭವಿಸಬಹುದಾದ ವರುಣಪಾಶರೂಪವಾದ ರೋಗದಿಂದ ಬಿಡುಗಡೆ ಹೊಂದುತ್ತಾನೆ. |

**ಸೌರ್ಯಚರುವಿಧಿ; ಅದರ ಪ್ರಶಂಸೆ**

| | |
|---|---|
| ಯದಿ ಅಪರಮ್ ಪ್ರತಿಗ್ರಾಹೀ ಸ್ಯಾತ್ | ಒಂದು ವೇಳೆ ಅಶ್ವದಾನ ಮಾಡಿ ಚತುಷ್ಕಪಾಲ ಯಾಗ ಮಾಡದೇ ಕಾಲಾಂತರದಲ್ಲಿ ಮತ್ತೊಂದು ಅಶ್ವದಾನವನ್ನು ಮಾಡಿದರೆ |
| ಸೌರ್ಯಮ್ ಏಕಕಪಾಲಮ್ ಅನು ನಿರ್ವಪೇತ್ | [ಆಗ ಚತುಷ್ಕಪಾಲಯಾಗವನ್ನು ಮಾಡಿ, ಕಾಲ ವಿಲಂಬದೋಷಪರಿಹಾರಕ್ಕಾಗಿ] ಸೂರ್ಯ ದೇವತಾಕವಾದ ಚರುಯಾಗವನ್ನು ಮಾಡಬೇಕು. |
| ಅಮುಮ್ ಆದಿತ್ಯಮ್ ಏವ ಉಚ್ಚಾರಮ್ ಕುರುತೇ | [ಈ ಸೂರ್ಯದೇವನನ್ನು ಸಂತೋಷಗೊಳಿಸಿ ವಿಲಂಬದೋಷವನ್ನು ಪರಿಹರಿಸುತ್ತಾ] ಮೇಲೆ ಪ್ರಕಾಶಿಸುತ್ತಿರುವಂತೆ ಮಾಡುತ್ತಾನೆ. |

ಮಾಡಬಹುದಾದ ಅಶ್ವದಾನದೋಷಪರಿಹಾರವಾಗುತ್ತದೆ. ಹಾಗೆಯೇ ಯಾವುದನ್ನಾದರೂ ಮರೆತುಬಿಟ್ಟಿದ್ದರೆ ಅದರಿಂದ ಸಂಭವಿಸಬಹುದಾದ ದೋಷವೂ ಪರಿಹೃತ

—ಪೋಽವಭೃಥಮವೈತ್ಯಪ್ಸು ವೈ ವರುಣಃ ಸಾಕ್ಷಾದೇವ

ವರುಣಮವಯಜತೇಽಪೋನಪ್ತ್ರೀಯಂ ಚರುಂ ಪುನರೇತ್ಯ

ನಿರ್ವಪೇದಪ್ಸುಯೋನಿರ್ವಾ ಅಶ್ವಃ

---

ಅಪಃ । ಅವಭೃಥಮಿತ್ಯವ–ಭೃಥಮ್ । ಅವೇತಿ । ಏತಿ । ಅಪ್ಸ್ವಿತ್ಯಪ್ – ಸು । ವೈ । ವರುಣಃ । ಸಾಕ್ಷಾದಿತಿ ಸ–ಅಕ್ಷಾತ್ । ಏವ । ವರುಣಮ್ । ಅವೇತಿ । ಯಜತೇ । ಅಪೋನಪ್ತ್ರೀಯಮಿತ್ಯಪಃ –ನಪ್ತ್ರೀಯಮ್ । ಚರುಮ್ । ಪುನಃ । ಏತ್ಯೇತ್ಯಾ–ಇತ್ಯ । ನಿರಿತಿ । ವಪೇತ್ । ಅಪ್ಸುಯೋನಿರಿತ್ಯಪ್ಸು–ಯೋನಿಃ । ವೈ । ಅಶ್ವಃ ।

---

**ಅವಭೃಥದಲ್ಲಿ ವಿಶೇಷವಿಧಿ; ಪ್ರಶಂಸೆ**

| | |
|---|---|
| ಅಪಃ ಅವಭೃಥಮ್ ಅವೈತಿ | ನೀರಿನಲ್ಲಿ ಪ್ರವೇಶಿಸಿ ಅವಭೃಥಕರ್ಮವನ್ನು ಮಾಡಬೇಕು. |
| ಅಪ್ಸು ವೈ ವರುಣಃ | ಜಲಾಧಿಪತಿಯಾದ ವರುಣನು ನೀರಿನಲ್ಲಿ ಇರುತ್ತಾನೆ. |
| ಸಾಕ್ಷಾತ್ ವರುಣಮ್ ಏವ ಅವಯಜತೇ | ಇದರಿಂದ ವರುಣನನ್ನು ನೇರವಾಗಿಯೇ ದೂರ ಮಾಡಿದಂತಾಗುತ್ತದೆ. |

**ಮತ್ತೊಂದು ಅಂಗವಿಧಾನ; ಪ್ರಶಂಸೆ**

| | |
|---|---|
| ಪುನಃ ಏತ್ಯ ಅಪೋ ನಪ್ತ್ರೀಯಮ್ ಚರುಮ್ ನಿರ್ವಪೇತ್ | ಅವಭೃಥದ ಅನಂತರದಲ್ಲಿ ಯಾಗಭೂಮಿಗೆ ಮತ್ತೆ ಬಂದು ಅಪೋನಪ್ತೃದೇವತಾಕವಾದ ಚರುದ್ರವ್ಯಕವಾದ ಯಾಗವನ್ನು ಅನುಷ್ಠಿಸಬೇಕು. |
| ಅಶ್ವಃ ಅಪ್ಸುಯೋನಿಃ ವೈ | *ಕುದುರೆಯು ನೀರೇ ಜನ್ಮಸ್ಥಾನವುಳ್ಳದ್ದಾಗಿದೆ. |

---

ವಾಗುತ್ತದೆ. ಯಜಮಾನನು ವರುಣಪಾಶದಿಂದ ಮುಕ್ತನಾಗುತ್ತಾನೆ. ಅಶ್ವದಾನ ಮಾಡಿದಾಗಲೇ ಚತುಷ್ಕಪಾಲಯಾಗವನ್ನು ಮಾಡದೆ ಕಾಲಾನಂತರದಲ್ಲಿ ಮತ್ತೊಂದು

---

* ಉಚ್ಚೈಃಶ್ರವಸ್ಸು ಕುದುರೆಯು ಸಮುದ್ರಮಂಥನಕಾಲದಲ್ಲಿ ಹುಟ್ಟಿತೆಂದು ಪುರಾಣ ಪ್ರಸಿದ್ಧಿಯಿದೆ.

ಸ್ವಾಮೇವೈನಂ ಯೋನಿಂ ಗಮಯತಿ ಸ ಏನಗ್ಂ

ಶಾಂತ ಉಪತಿಷ್ಠತೇ ॥೪೭–12॥

[ಮುಂಚತಿ ಚರುಗ್ಂ ಸಪ್ತದಶ ಚ ।]

---

ಸ್ವಾಮ್ । ಏವ । ಏನಮ್ । ಯೋನಿಮ್ । ಗಮಯತಿ । ಸಃ । ಏನಮ್ । ಶಾಂತಃ ।

ಉಪೇತಿ । ತಿಷ್ಠತೇ ॥12॥

---

| | |
|---|---|
| ಸ್ವಾಮ್ ಯೋನಿಮ್ ಏವ ಏನಮ್ ಗಮಯತಿ | ಕುದುರೆಯನ್ನು ಅದರ ಉತ್ಪತ್ತಿಸ್ಥಾನದಲ್ಲಿಯೇ ಸೇರಿಸಿದಂತೆ ಆಗುತ್ತದೆ. |
| ಸಃ ಏನಮ್ ಶಾಂತಃ ಉಪತಿಷ್ಠತೇ | ಆ ಅಶ್ವವು ಶಾಂತವಾಗಿ ಯಜಮಾನನಿಗೆ ಯಾಗಫಲವನ್ನು ಕೊಡುತ್ತದೆ [ರೋಗಕ್ಕೆ ಕಾರಣವಾಗುವುದಿಲ್ಲ]. |

---

ಅಶ್ವದಾನವನ್ನು ಮಾಡಿದರೆ, ಚತುಷ್ಕಪಾಲಯಾಗ ಮಾಡಿ ಕಾಲಾತಿಕ್ರಮದೋಷ ಪರಿಹಾರಾರ್ಥವಾಗಿ ಸೌರ್ಯಚರುಯಾಗವನ್ನು ಅನುಷ್ಠಿಸಬೇಕು. ಇದರಿಂದ ಪ್ರಸನ್ನನಾದ ಸೂರ್ಯದೇವನು ದೋಷಪರಿಹಾರವನ್ನು ಮಾಡುತ್ತಾ ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿರುತ್ತಾನೆ.

ನೀರಿನಲ್ಲಿ ಅವಭೃಥಕರ್ಮವನ್ನು ಅನುಷ್ಠಿಸಬೇಕು. ಇದರಿಂದ ಜಲಾಧಿಪತಿಯಾದ ವರುಣನನ್ನು ನೀರಿನಲ್ಲಿಯೇ ತೃಪ್ತಿಪಡಿಸಿ ದೂರ ಮಾಡಿದಂತೆ ಆಗುತ್ತದೆ. ಇದರಿಂದ ರೋಗಭಯವು ತಪ್ಪುತ್ತದೆ.

ಅವಭೃಥದ ಅನಂತರದಲ್ಲಿ ಮತ್ತೆ ಯಾಗಭೂಮಿಗೆ ಬಂದು ಆಪೋನಪ್ತೃದೇವತೆಗೆ ಚರುದ್ರವ್ಯಕವಾದ ಯಾಗವನ್ನು ಅನುಷ್ಠಿಸಬೇಕು.

ಇದು ಅಶ್ವದಾನೇಷ್ಟಿಯಷ್ಟೆ. ನೀರೇ ಕುದುರೆಯ ಉತ್ಪತ್ತಿ ಸ್ಥಾನ. ಈ ಯಾಗದಿಂದ ಅದನ್ನು ಅದರ ಉತ್ಪತ್ತಿ ಸ್ಥಾನದಲ್ಲಿಯೇ ಸೇರಿಸಿದಂತಾಗುತ್ತದೆ. ಆ ಅಶ್ವವು ಯಾಗಫಲ ವನ್ನೀಯುತ್ತದೆ. ರೋಗಕ್ಕೆ ಕಾರಣವಾಗುವುದಿಲ್ಲ.

# ದ್ವಾದಶಾನುವಾಕವಿಷಯಸಂಗ್ರಹ

**ಚತುಷ್ಕಪಾಲಾ ವಿಹಿತಾ ದ್ವಾದಶೇ ತ್ವಶ್ವದಾನಿನಃ ||**

ಅಶ್ವವನ್ನು ದಾನ ಮಾಡುವವನಿಗೆ ಈ ಹನ್ನೆರಡನೆಯ ಅನುವಾಕದಲ್ಲಿ ಚತುಷ್ಕಪಾಲಗಳ ಇಷ್ಟಿಯು ವಿಹಿತವಾಗಿದೆ.

## ಅನುವಾಕದವಿಶೇಷವಿಷಯಗಳು

### ಅ) ಮೀಮಾಂಸಾ

**1) ಪ್ರಾಯಶ್ಚಿತ್ತಾರ್ಹವಾದ ಅಶ್ವದಾನ ಯಾವುದು ?**

**ಜೈ.ಸೂ. 3.4.26–28**

'ಯಾವತೋಽಶ್ವಾನ್ಪ್ರತಿಗೃಹ್ಣೀಯಾತ್ ತಾವತೋ ವಾರುಣಾಂಶ್ಚತುಷ್ಕಪಾಲಾನ್ನಿರ್ವಪೇತ್' ಎಂಬ ವಚನದಿಂದ ವಿಧಿಸಿದ ಅಶ್ವದಾನನಿಮಿತ್ತವಾದ ಚತುಷ್ಕಪಾಲ ಪುರೋಡಾಶಯಾಗವು ಲೌಕಿಕವಾದ ಅಶ್ವದಾನಕ್ಕೆ ಪ್ರಾಯಶ್ಚಿತ್ತವೇ ? ವೈದಿಕವಾದ ಅಶ್ವದಾನಕ್ಕೆ ಪ್ರಾಯಶ್ಚಿತ್ತವೇ ? ಇದು ಇಲ್ಲಿನ **ಸಂಶಯ.**

ವಿಶೇಷವಾಗಿ ಏನನ್ನೂ ಹೇಳದೇ ಇರದಿರುವುದರಿಂದ ಎರಡಕ್ಕೂ ಅನ್ವಯಿಸುತ್ತದೆ. ಅಥವಾ **'ನ ಕೇಸರಿಣೋ ದದಾತಿ'** ಎಂಬ ಸ್ಮೃತಿವಚನವು ಲೌಕಿಕವಾದ ಅಶ್ವದಾನವನ್ನು ನಿಷೇಧಿಸಿರುವುದರಿಂದ ಲೌಕಿಕದಾನಕ್ಕೇ ಈ ಪ್ರಾಯಶ್ಚಿತ್ತವೂ ಅನ್ವಯಿಸುತ್ತದೆ. ಇದು ಇಲ್ಲಿನ **ಪೂರ್ವಪಕ್ಷ.**

ಲೌಕಿಕವಾದ ಅಶ್ವದಾನದಲ್ಲಿ ಜಲೋದರರೋಗವು ಬರುವುದೆಂದು ಎಲ್ಲಿಯೂ ಹೇಳಿಲ್ಲ. **'ವರುಣೋ ವಾ ಏತಂ ಗೃಹ್ಣಾತಿ'** ಎಂಬ ಅರ್ಥವಾದದಲ್ಲಿ ವೈದಿಕಾಶ್ವದಾನದಲ್ಲಿ ಜಲೋದರಪ್ರಾಪ್ತಿಯನ್ನು ಹೇಳಲಾಗಿದೆ. ಹೀಗಾಗಿ ಈ ಪ್ರಾಯಶ್ಚಿತ್ತವು ವೈದಿಕಾಶ್ವದಾನದಲ್ಲಿಯೇ ಎಂಬುದು ಇಲ್ಲಿನ **ಸಿದ್ಧಾಂತ.**

**2) ಈ ಪ್ರಾಯಶ್ಚಿತ್ತವು ಯಾರಿಗೆ ?**

**[ಜೈ.ಸೂ. 3.4.29.30]**

ಈ ಪ್ರಾಯಶ್ಚಿತ್ತವು ದಾತೃವಿಗೇ ಅಥವಾ ಪ್ರತಿಗೃಹೀತೃವಿಗೇ ? ಎಂಬುದು **ಸಂಶಯ.**

**'ಯಾವತೋಽಶ್ವಾನ್ಪ್ರತಿಗೃಹ್ಣೀಯಾತ್'** ಎಂಬುದಾಗಿ ಎಷ್ಟು ಸಂಖ್ಯೆಯ ಅಶ್ವಗಳನ್ನು ಪ್ರತಿಗ್ರಹ ಮಾಡುತ್ತಾನೆಯೋ ಎಂದಿರುವುದರಿಂದ ಈ ಪ್ರಾಯಶ್ಚಿತ್ತವು ಪ್ರತಿಗೃಹೀತೃವಿಗೇ ಸರಿ. ಇದು ಇಲ್ಲಿನ **ಪೂರ್ವಪಕ್ಷ.**

ಉಪಕ್ರಮದಲ್ಲಿ **'ಪ್ರಜಾಪತಿರ್ವರುಣಾಯಾಶ್ವಮನಯತ್, ಸಃ ಸ್ವಾಮ್ ದೇವತಾಮಾರ್ಚ್ಛತ್'** ಎಂದಿರುವುದರಿಂದ ಅಲ್ಲಿ ಅಶ್ವದಾನವನ್ನು ಮಾಡಿದ ಪ್ರಜಾಪತಿಗೇ ರೋಗಪ್ರಾಪ್ತಿಯೆಂದು ಹೇಳಿದೆ. ಅಸಂಜಾತವಿರೋಧಿನ್ಯಾಯದಿಂದ ದಾತೃವಿಗೇ ಈ ಪ್ರಾಯಶ್ಚಿತ್ತೇಷ್ಟಿ. ವಿಧಿವಾಕ್ಯದಲ್ಲಿ **'ಪ್ರತಿಗೃಹ್ಣೀಯಾತ್'** ಎಂಬುದನ್ನು **'ಪ್ರತಿಗ್ರಾಹಯೇತ್'** ಎಂಬ ಣಿಜಂತರೂಪವನ್ನಾಗಿ ಪರಿಗಣಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

**3) ಚತುಷ್ಕಪಾಲಪುರೋಡಾಶಗಳಿಗೆ ಸಂಸ್ಕಾರವು ಹೇಗೆ ?**

**[ಜೈ.ಸೂ. 5.2.3]**

ನೂರಾರು ಅಶ್ವಗಳನ್ನು ದಾನ ಮಾಡಿದ ಪ್ರಸಂಗದಲ್ಲಿ ಒಂದೊಂದು ಚತುಷ್ಕಪಾಲ ದಲ್ಲಿಯೂ ಶ್ರಪಣಾದಿಸಂಸ್ಕಾರಗಳನ್ನು ಒಂದೊಂದಾಗಿ ಅನುಷ್ಠಿಸಬೇಕೇ ? ಅಥವಾ ಒಂದರಲ್ಲಿ ಎಲ್ಲ ಪುರೋಡಾಶಸಂಸ್ಕಾರವನ್ನೂ ಮುಗಿಸಿ, ಇನ್ನೊಂದರಲ್ಲಿ ಮಾಡಬೇಕೇ ? ಇದು ಇಲ್ಲಿನ **ಸಂಶಯ.**

ಒಂದೊಂದಾಗಿ ಅನುಷ್ಠಾನ ಮಾಡಿದರೆ ಬಿಸಿಯಾದ ಕಪಾಲಗಳಲ್ಲಿ ಇಟ್ಟ ಪುರೋಡಾಶಗಳಲ್ಲಿ ಪ್ರಥಮಪುರೋಡಾಶವು ಒಣಗಿ ಸುಟ್ಟು ಹೋಗಬಹುದು. ಆದುದರಿಂದ ಕಾಂಡಾನುಸಮಯಪಕ್ಷದಂತೆ ಒಂದೊಂದರಲ್ಲಿಯೂ ಸಂಸ್ಕಾರವನ್ನು ಪೂರ್ಣಗೊಳಿಸಿ, ಮತ್ತೊಂದನ್ನು ಮಾಡಬೇಕು. ಇದು ಇಲ್ಲಿನ **ಸಿದ್ಧಾಂತ.**

**4) ಚತುಷ್ಕಪಾಲದ ಆಕೃತಿ ಹೇಗೆ ?**

ಒಂದೇ ಒಂದು ದೊಡ್ಡ ಚತುಷ್ಕಪಾಲಪುರೋಡಾಶವನ್ನು ಮಾಡಬೇಕೇ ? ಅಥವಾ ಬೇರೆ ಬೇರೆಯಾಗಿ ಚತುಷ್ಕಪಾಲಗಳನ್ನು ಮಾಡಬೇಕೇ ? ಇದು **ಸಂಶಯ.**

ಪ್ರಕೃತಿಯಾಗದಂತೆಯೇ ಪ್ರತ್ಯೇಕ ಚತುಷ್ಕಪಾಲಪುರೋಡಾಶಗಳನ್ನು ಮಾಡಿ ಯಾಗವನ್ನು ಅನುಷ್ಠಿಸಬೇಕು. ಇದು ಇಲ್ಲಿನ **ಸಿದ್ಧಾಂತ.**

* * *

## ॥ ತ್ರಯೋದಶೋಽನುವಾಕಃ ॥

### ಯಾ ವಾಮಿಂದ್ರಾವರುಣಾ ಯತವ್ಯಾ

ಯಾ । ವಾಮ್ । ಇಂದ್ರಾವರುಣೇತೀಂದ್ರಾ–ವರುಣಾ । ಯತವ್ಯಾ ।

ಹನ್ನೆರಡನೆಯ ಅನುವಾಕದಲ್ಲಿ ಅಶ್ವದಾನಪ್ರಾಯಶ್ಚಿತ್ತೇಷ್ಟಿಯನ್ನು ಹೇಳಿಯಾಯಿತು. ಈ ಹದಿಮೂರನೆಯ ಅನುವಾಕದಲ್ಲಿ ಪಾಪಗ್ರಸ್ತನಾದವನಿಗೆ ಆ ಪಾಪ ಪರಿಹಾರಾರ್ಥವಾಗಿ ಐಂದ್ರಾವರುಣವಾದ ಪಯಸ್ಯಾಯಾಗದ ವಿಧಿಯೂ, ಅದಕ್ಕೆ ಸಂಬಂಧಿಸಿದ ಮಂತ್ರಗಳೂ ಹೇಳಲ್ಪಟ್ಟಿವೆ.

**ಇಷ್ಟಿಯ ಪ್ರಯೋಗಕ್ರಮ**

ಮೊದಲು ಐಂದ್ರಾವರುಣಪುರೋಡಾಶಕ್ಕಾಗಿ ನಿರ್ವಾಪವನ್ನು ಮಾಡಬೇಕು. ಬಳಿಕ ಪಯಸ್ಯಾಯಾಗಕ್ಕೆ ನಿರ್ವಾಪವನ್ನು ಮಾಡಬೇಕು. ಪುರೋಡಾಶಪಾಕವಾದ ಮೇಲೆ ಉದ್ವಾಸನೆ ಮಾಡಿ ಅಲಂಕರಿಸಿ ಇಡಬೇಕು. ಬಳಿಕ ಪಯಸ್ಯೆಯಲ್ಲಿ ಪುರೋಡಾಶವನ್ನು ಹಾಕಬೇಕು. ಪಯಸ್ಸಿನಿಂದಲೇ ಪ್ರಚ್ಛಾದನವನ್ನು ಮಾಡಬೇಕು. ಬಳಿಕ ಹವಿರಾಸಾದನೆಯನ್ನು ಮಾಡಬೇಕು. ಅನಂತರ ಮುಂದಿನ **'ಯಾ ವಾಮ್'** ಎಂಬ ನಾಲ್ಕು ಮಂತ್ರಗಳಿಂದ ಪ್ರತಿದಿಕ್ಕಿಗೂ ಪುರೋಡಾಶವನ್ನು ಹರಡಬೇಕು. ಬಳಿಕ ಆ ಮಂತ್ರಗಳಿಂದಲೇ **'ಅಮುಕ್ತಮ್'** [ಪಾಪಪರಿಹಾರವನ್ನು ಮಾಡಿದಿರಿ] ಎಂಬ ಮಂತ್ರಾಂಶವನ್ನು ಅನುಷಂಗ ಮಾಡಿ ಒಟ್ಟುಗೂಡಿಸಬೇಕು. **'ಯಾ ವಾಮ್'** ಎಂಬ ಮಂತ್ರಗಳ ಬಳಿಕ ಪಠಿತವಾಗಿರುವ **'ಯೋ ವಾಮ್'** ಮುಂತಾದವುಗಳು ಉಪಹೋಮಮಂತ್ರಗಳು.

| **ಮಂತ್ರ** | **ವಿನಿಯೋಗ** |
|---|---|
| **ಯಾ ವಾಮ್... ಯತವ್ಯಾ...** | ವ್ಯೂಹನದಲ್ಲಿ ಪ್ರಥಮಮಂತ್ರ. |

**ಮುಂಚತಮ್ ।**

**ಇಂದ್ರಾವರುಣಾ** = ಇಂದ್ರಾವರುಣದೇವತೆಗಳೇ ! **ಯಾ** = ಯಾವುದು, **ವಾಮ್** = ನಿಮ್ಮಿಬ್ಬರ; **ಯತವ್ಯಾ** = ಪಾಪವನ್ನು ಬಿಡಿಸಲು ಯತ್ನಿಸುವ/ರಕ್ಷೋನಾಶಕವಾದ,

**ತನೂಸ್ತಯೇಮಮಗ್ಂಹಸೋ ಮುಂಚತಂ**

**ಯಾ ವಾಮಿಂದ್ರಾವರುಣಾ ಸಹಸ್ಯಾ* ರಕ್ಷಸ್ಯಾ***

**ತೇಜಸ್ಯಾ ತನೂಸ್ತಯೇಮಮಗ್ಂಹಸೋ ಮುಂಚತಂ**

---

ತನೂಃ। ತಯಾ। ಇಮಮ್। ಅಗ್ಂಹಸಃ। ಮುಂಚತಮ್। **ಯಾ**। ವಾಮ್।
ಇಂದ್ರಾವರುಣೇತೀಂದ್ರಾ–ವರುಣಾ। **ಸಹಸ್ಯಾ**। **ರಕ್ಷಸ್ಯಾ**। **ತೇಜಸ್ಯಾ**। ತನೂಃ। ತಯಾ।
ಇಮಮ್। ಅಗ್ಂಹಸಃ। ಮುಂಚತಮ್।

---

| ಮಂತ್ರ | ವಿನಿಯೋಗ |
| --- | --- |
| **ಯಾ ವಾಮ್.. ಸಹಸ್ಯಾ...** ಮುಂಚತಮ್। | ವ್ಯೂಹನದಲ್ಲಿ ಎರಡನೆಯ ಮಂತ್ರ. |
| ಯಾ ವಾಮ್.. **ರಕ್ಷಸ್ಯಾ...** ಮುಂಚತಮ್। | ವ್ಯೂಹನದಲ್ಲಿ ಮೂರನೆಯ ಮಂತ್ರ |
| ಯಾ ವಾಮ್.. **ತೇಜಸ್ಯಾ.. ಮುಂಚತಮ್।** | ವ್ಯೂಹನದಲ್ಲಿ ನಾಲ್ಕನೆಯ ಮಂತ್ರ |

---

**ತನೂಃ** = ಶರೀರವಿದೆಯೋ; **ತಯಾ** = ಆ ಶರೀರದಿಂದ; **ಇಮಮ್** = ಈ ಯಜಮಾನನನ್ನು; **ಅಗ್ಂಹಸಃ ಮುಂಚತಮ್** = ಪಾಪದಿಂದ ಬಿಡಿಸಿರಿ, ❖ **ಇಂದ್ರಾವರುಣಾ** = ಇಂದ್ರಾವರುಣರೇ! **ಯಾ ವಾಮ್** = ಯಾವುದು ನಿಮ್ಮಿಬ್ಬರ; **ಸಹಸ್ಯಾ** = ಬಲಶಾಲಿಯಾದ; **ತನೂಃ ತಯಾ ಇಮಮ್ ಅಗ್ಂಹಸಃ ಮುಂಚತಮ್** = ಶರೀರವಿದೆಯೋ ಅದರಿಂದ ಈ ಯಜಮಾನನನ್ನು ಪಾಪದಿಂದ ಬಿಡಿಸಿರಿ. ❖ ಇಂದ್ರಾವರುಣಾ ಯಾ ವಾಮ್ = ಇಂದ್ರಾವರುಣರೇ! ಯಾವುದು ನಿಮ್ಮಿಬ್ಬರ; **ರಕ್ಷಸ್ಯಾ** = ರಕ್ಷಿಸಬಲ್ಲ/ರಕ್ಷೋನಾಶಕವಾದ; ತನೂಃ ತಯಾ ಇಮಮ್ ಅಗ್ಂಹಸಃ ಮುಂಚತಮ್ = ಶರೀರವಿದೆಯೋ ಅದರಿಂದ ಈ ಯಜಮಾನನನ್ನು ಪಾಪದಿಂದ ದೂರಮಾಡಿರಿ; ❖ ಇಂದ್ರಾವರುಣಾ ವಾಮ್ ಯಾ = ಇಂದ್ರಾವರುಣರೇ! ನಿಮ್ಮಿಬ್ಬರ ಯಾವ; **ತೇಜಸ್ಯಾ** = ಪ್ರಕಾಶಪಡಿಸಬಲ್ಲ; **ತನೂಃ ತಯಾ ಇಮಮ್ ಅಗ್ಂಹಸಃ ಮುಂಚತಮ್** = ಶರೀರವಿದೆಯೋ ಆ ಶರೀರದಿಂದ ಈ ಯಜಮಾನನನ್ನು ಪಾಪಗಳಿಂದ ಬಿಡಿಸಿರಿ.

**ಯೋ ವಾಮಿಂದ್ರಾವರುಣಾವಗ್ನೌ ಸ್ರಾಮಸ್ತಂ**

**ವಾಮೇತೇನಾವಯಜೇ ಯೋ ವಾಮಿಂದ್ರಾವರುಣಾ**

**ದ್ವಿಪಾತ್ಸು ಪಶುಷು***

---

**ಯಃ** । ವಾಮ್ । ಇಂದ್ರಾವರುಣಾವಿತೀಂದ್ರಾ – ವರುಣೌ । ಅಗ್ನೌ । ಸ್ರಾಮಃ । ತಮ್ । ವಾಮ್ । ಏತೇನ । ಅವೇತಿ । ಯಜೇ । **ಯಃ** । ವಾಮ್ । ಇಂದ್ರಾವರುಣೇತೀಂದ್ರಾ– ವರುಣಾ । ದ್ವಿಪಾತ್ಸ್ವಿತಿ ದ್ವಿಪಾತ್–ಸು । ಪಶುಷು ।

---

| **ಮಂತ್ರ** | **ವಿನಿಯೋಗ** |
|---|---|
| ಯಃ.... ಅವಯಜೇ । | ಉಪಹೋಮಗಳಲ್ಲಿ ಪ್ರಥಮ ಮಂತ್ರ |
| ಯಃ... ದ್ವಿಪಾತ್ಸುಪಶುಷು... ಯಜೇ । | ಉಪಹೋಮಗಳಲ್ಲಿ ದ್ವಿತೀಯ ಮಂತ್ರ |

---

❖ **ಇಂದ್ರಾವರುಣೌ** = ಇಂದ್ರ ವರುಣ ದೇವತೆಗಳೇ ! **ವಾಮ್ ಯಃ** = ನಿಮಗೆ ಸಂಬಂಧಿಸಿದ ಯಾವ; **ಅಗ್ನೌ ಸ್ರಾಮಃ** = ಅಗ್ನಿಯ ವಿಷಯದಲ್ಲಿ [ಯಜಮಾನನು ಮಾಡಿದ] ಪಾಪವಿದೆಯೋ; **ತಮ್** = ಆ ಪಾಪವನ್ನು ; **ವಾಮ್ ಏತೇನ** = ನಿಮಗೆ ಸಂಬಂಧಿಸಿದ ಈ ಹೋಮದಿಂದ; **ಅವಯಜೇ** = ನಾಶಪಡಿಸುತ್ತೇನೆ. ❖ **ಇಂದ್ರಾವರುಣಾ** = ಇಂದ್ರ–ವರುಣದೇವತೆಗಳೇ ! **ಯಃ** = ಯಾವ; **ವಾಮ್** = ನಿಮಗೆ ಸಂಬಂಧಿಸಿದ; **ದ್ವಿಪಾತ್ಸು ಪಶುಷು** = ಎರಡು ಕಾಲಿನ ಮನುಷ್ಯಾದಿ ವಿಷಯದಲ್ಲಿ; ಸ್ರಾಮಃ ತಮ್ ವಾಮ್ ಏತೇನ ಅವಯಜೇ = [ಯಜಮಾನನು ಮಾಡಿರುವ ಅಪರಾಧದಿಂದ ಸಂಭವಿಸಿದ] ಪಾಪವಿದೆಯೋ ಅದನ್ನು ನಿಮಗಾಗಿ ಮಾಡುವ ಈ ಉಪಹೋಮದಿಂದ ದೂರ ಮಾಡುತ್ತೇನೆ.

---

ಇಂದ್ರಾವರುಣರೇ! ನಿಮಗೆ ಪಾಪದಿಂದ ಬಿಡಿಸಬಲ್ಲ ಶರೀರವೂ ಇದೆ. ಬಲವುಳ್ಳ ಶರೀರವೂ ಇದೆ. ರಾಕ್ಷಸರಿಂದ ರಕ್ಷಿಸಬಲ್ಲ ಶರೀರವೂ ಇದೆ. ತೇಜೋಯುಕ್ತವಾದ ಶರೀರವೂ ಇದೆ. ಆ ಶರೀರಗಳಿಂದ ನೀವು ಯಜಮಾನನ ಪಾಪಗಳನ್ನು ಪರಿಹರಿಸಿ, ಯಜಮಾನನಿಗೆ ಬಲವನ್ನು ಕೊಟ್ಟು, ರಕ್ಷೋಬಾಧೆಯನ್ನು ಪರಿಹರಿಸಿ, ರಕ್ಷಿಸಿ, ತೇಜಸ್ಸನ್ನೂ ಕೊಟ್ಟು ಪಾಪಮುಕ್ತನನ್ನಾಗಿ ಮಾಡಿರಿ.

# ಚತುಷ್ಪಾತ್ಸು* ಗೋಷ್ಠೇ* ಗೃಹೇಷ್ವ*ಪ್ಸ್ವೋ*ಷಧೀಷು*

---

**ಚತುಷ್ಪಾತ್ಸ್ವಿತಿ ಚತುಷ್ಪಾತ್–ಸು। ಗೋಷ್ಠ ಇತಿ ಗೋ–ಸ್ಥೇ। ಗೃಹೇಷು। ಅಪ್ಸ್ವಿತ್ಯಪ್–ಸು । ಓಷಧೀಷು ।**

---

| ಮಂತ್ರ | ವಿನಿಯೋಗ |
|---|---|
| ಯಃ... **ಚತುಷ್ಪಾತ್ಸು ಪಶುಷು...**ಯಜೇ। | ಉಪಹೋಮದ ತೃತೀಯಮಂತ್ರ |
| ಯಃ.... **ಗೋಷ್ಠೇ.....** ಯಜೇ। | ಉಪಹೋಮದ ಚತುರ್ಥಮಂತ್ರ |
| ಯಃ.... **ಗೃಹೇಷು .....** ಯಜೇ। | ಉಪಹೋಮದ ಪಂಚಮಮಂತ್ರ |
| ಯಃ....... **ಅಪ್ಸು.....** ಯಜೇ। | ಉಪಹೋಮದ ಷಷ್ಠಮಂತ್ರ |
| ಯಃ...... **ಓಷಧೀಷು.....** ಯಜೇ। | ಉಪಹೋಮದ ಸಪ್ತಮಮಂತ್ರ |

---

❖ ಇಂದ್ರಾವರುಣಾ ಯಃ ವಾಮ್ = ಇಂದ್ರ–ವರುಣ ದೇವತೆಗಳೇ! ಯಾವ ನಿಮಗೆ ಸಂಬಂಧಿಸಿದ; **ಚತುಷ್ಪಾತ್ಸು** ಪಶುಷು = ನಾಲ್ಕು ಕಾಲಿನ ಗವಾದಿಪಶುಗಳ ವಿಷಯದಲ್ಲಿ; ಸ್ರಾಮಃ ತವ್ ವಾವ್ ಏತೇನ ಅವಯಜೇ = [ಯಜಮಾನನು ಮಾಡಿರುವ ಅಪರಾಧದಿಂದ ಸಂಭವಿಸಿದ] ಪಾಪವಿದೆಯೋ, ಅದನ್ನು ನಿಮಗಾಗಿ ಮಾಡುವ ಈ ಉಪಹೋಮದಿಂದ ದೂರ ಮಾಡುತ್ತೇನೆ. ❖ ಇಂದ್ರಾವರುಣಾ ಯಃ ವಾಮ್ = ಇಂದ್ರ–ವರುಣ ದೇವತೆಗಳೇ ! ಯಾವ ನಿಮಗೆ ಸಂಬಂಧಿಸಿದ; **ಗೋಷ್ಠೇ** = ಕೊಟ್ಟಿಗೆಯ ವಿಷಯದಲ್ಲಿ; ಸ್ರಾಮಃ ತವ್ ವಾವ್ ಏತೇನ ಅವಯಜೇ = [ಯಜಮಾನನು ಮಾಡಿರುವ ಅಪರಾಧದಿಂದ ಸಂಭವಿಸಿರುವ] ಪಾಪವಿದೆಯೋ, ಅದನ್ನು ನಿಮಗಾಗಿ ಮಾಡುವ ಈ ಉಪಹೋಮದಿಂದ ದೂರ ಮಾಡುತ್ತೇನೆ.

❖ ಇಂದ್ರಾವರುಣಾ ಯಃ ವಾಮ್ = ಇಂದ್ರ–ವರುಣ ದೇವತೆಗಳೇ ಯಾವ ನಿಮಗೆ ಸಂಬಂಧಿಸಿದ; **ಗೃಹೇಷು** = ಮನೆಗಳ ವಿಷಯದಲ್ಲಿ; ಸ್ರಾಮಃ ತವ್ ವಾವ್ ಏತೇನ ಅವಯಜೇ = [ಯಜಮಾನನು ಮಾಡಿರುವ ಅಪರಾಧದಿಂದ ಸಂಬಂಧಿಸಿರುವ] ಪಾಪ ವಿದೆಯೋ, ಅದನ್ನು ನಿಮಗಾಗಿ ಮಾಡುವ ಈ ಉಪಹೋಮದಿಂದ ದೂರಮಾಡುತ್ತೇನೆ. ❖ ಇಂದ್ರಾವರುಣಾ ಯಃ ವಾಮ್ = ಇಂದ್ರ–ವರುಣ ದೇವತೆಗಳೇ! ಯಾವ ನಿಮಗೆ ಸಂಬಂಧಿಸಿದ; **ಅಪ್ಸು** = ನೀರುಗಳ ವಿಷಯದಲ್ಲಿ; ಸ್ರಾಮಃ ತವ್ ವಾವ್ ಏತೇನ

# ವನಸ್ಪತಿಷು ಸ್ರಾಮಸ್ತಂ ವಾಮೇತೇನಾವಯಜ

# ಇಂದ್ರೋ ವಾ ಏತಸ್ಯೇಂದ್ರಿಯೇಣಾಪಕ್ರಾಮತಿ

# [ಏತಸ್ಯ (೧) ಇಂದ್ರಿಯೇಣಾಪಕ್ರಾಮತಿ]

---

**ವನಸ್ಪತಿಷು** । ಸ್ರಾಮಃ । ತಮ್ । ವಾಮ್ । ಏತೇನ । ಅವೇತಿ । ಯಜೇ । **ಇಂದ್ರಃ** । ವೈ । ಏತಸ್ಯ । ಇಂದ್ರಿಯೇಣ । ಅಪೇತಿ । ಕ್ರಾಮತಿ ।

---

| **ಮಂತ್ರ** | **ವಿನಿಯೋಗ** |
|---|---|
| ಯಃ...... **ವನಸ್ಪತಿಷು.... ಯಜೇ ।** | ಉಪಹೋಮದ ಅಷ್ಟಮಮಂತ್ರ |

---

ಅವಯಜೇ = [ಯಜಮಾನನು ಮಾಡಿರುವ ಅಪರಾಧದಿಂದ ಸಂಭವಿಸಿದ] ಪಾಪವಿದೆಯೋ, ಅದನ್ನು ನಿಮಗಾಗಿ ಮಾಡುವ ಈ ಉಪಹೋಮದಿಂದ ದೂರಮಾಡುತ್ತೇನೆ. ❖ ಇಂದ್ರಾವರುಣಾ ಯಃ ವಾಮ್ = ಇಂದ್ರ–ವರುಣ ದೇವತೆಗಳೇ ! ಯಾವ ನಿಮಗೆ ಸಂಬಂಧಿಸಿದ; **ಓಷಧೀಷು** = ಓಷಧಿಗಳ ವಿಷಯದಲ್ಲಿ; ಸ್ರಾಮಃ ತಮ್ ವಾಮ್ ಏತೇನ ಅವಯಜೇ = [ಯಜಮಾನನು ಮಾಡಿರುವ ಅಪರಾಧದಿಂದ ಸಂಭವಿಸಿದ] ಪಾಪವಿದೆಯೋ, ಅದನ್ನು ನಿಮಗಾಗಿ ಮಾಡುವ ಈ ಉಪಹೋಮದಿಂದ ದೂರ ಮಾಡುತ್ತೇನೆ. ಇಂದ್ರಾವರುಣಾ ಯಃ ವಾಮ್ = ಇಂದ್ರ–ವರುಣ ದೇವತೆಗಳೇ ! ಯಾವ ನಿಮಗೆ ಸಂಬಂಧಿಸಿದ; **ವನಸ್ಪತಿಷು** = ವನಸ್ಪತಿಗಳ ವಿಷಯದಲ್ಲಿ; ಸ್ರಾಮಃ ತಮ್ ವಾಮ್ ಏತೇನ ಅವಯಜೇ = [ಯಜಮಾನನು ಮಾಡಿರುವ ಅಪರಾಧದಿಂದ ಸಂಭವಿಸಿದ] ಪಾಪವಿದೆಯೋ, ಅದನ್ನು ನಿಮಗಾಗಿ ಮಾಡುವ ಈ ಉಪಹೋಮದಿಂದ ದೂರ ಮಾಡುತ್ತೇನೆ.

## ಐಂದ್ರಾವರುಣಯಾಗವಿಧಿ; ಅರ್ಥವಾದ

| | |
|---|---|
| **ಯಃ ಪಾಪ್ಮನಾ ಗೃಹೀತಃ ಭವತಿ** | ಯಾವನು ಪಾಪಗ್ರಸ್ತನಾಗಿರುವನೋ |
| **ಏತಸ್ಯ ಇಂದ್ರಿಯೇಣ ಇಂದ್ರಃ ಅಪಕ್ರಾಮತಿ** | ಇಂದ್ರದೇವನು ಇಂತಹ ಯಜಮಾನನ ಇಂದ್ರಿಯಶಕ್ತಿಯೊಡನೆ ದೂರವಾಗಿ ಹೋಗುತ್ತಾನೆ. |

ವರುಣ ಏನಂ ವರುಣಪಾಶೇನ ಗೃಹ್ಣಾತಿ ಯಃ ಪಾಪ್ಮನಾ

ಗೃಹೀತೋ ಭವತಿ ಯಃ ಪಾಪ್ಮನಾ ಗೃಹೀತಃ ಸ್ಯಾತ್ತಸ್ಮೈ

---

ವರುಣಃ । ಏನಮ್ । ವರುಣಪಾಶೇನೇತಿ ವರುಣ–ಪಾಶೇನ । ಗೃಹ್ಣಾತಿ । ಯಃ ।
ಪಾಪ್ಮನಾ । ಗೃಹೀತಃ । ಭವತಿ । ಯಃ । ಪಾಪ್ಮನಾ । ಗೃಹೀತಃ । ಸ್ಯಾತ್ । ತಸ್ಮೈ ।

---

| | |
|---|---|
| ಏನಮ್ ವರುಣಃ ವರುಣಪಾಶೇನ ಗೃಹ್ಣಾತಿ | ವರುಣದೇವನು ಈತನನ್ನು ವರುಣಪಾಶ ರೂಪವಾದ ರೋಗದಿಂದ ಆಕ್ರಮಿಸಿ ಬಿಡುತ್ತಾನೆ. |
| ಯಃ ಪಾಪ್ಮನಾ ಗೃಹೀತಃ ಸ್ಯಾತ್ | [ಆದುದರಿಂದ] ಯಾವನು ಪಾಪಗ್ರಸ್ತನಾಗಿರುತ್ತಾನೆಯೋ |

---

ಇಂದ್ರ–ವರುಣರೇ ! ನಿಮಗೆ ಸಂಬಂಧಿಸಿದ ಅಗ್ನಿಯ ವಿಷಯದಲ್ಲಿ ಯಜಮಾನನು ಮಾಡಿರಬಹುದಾದ ಅಪರಾಧದಿಂದ ಉಂಟಾದ ಪಾಪವನ್ನು ನಿಮಗೋಸ್ಕರ ಮಾಡುವ ಈ ಹೋಮದಿಂದ ಹೋಗಲಾಡಿಸುತ್ತೇನೆ. ನೀವು ಆ ಪಾಪಪರಿಹಾರವಾಗುವಂತೆ ಅನುಗ್ರಹಿಸಿರಿ.

ಇಂದ್ರ–ವರುಣರೇ! ಯಜಮಾನನು ನಿಮಗೆ ಸಂಬಂಧಿಸಿದ ಋತ್ವಿಗಾದಿರೂಪ ಮನುಷ್ಯರ ವಿಷಯದಲ್ಲಿಯೂ, ಗವಾದಿಪಶುಗಳು, ಕೊಟ್ಟಿಗೆ, ಮನೆ, ನೀರು, ವ್ರೀಹ್ಯಾದಿ ಸಸ್ಯಗಳು, ಅಶ್ವತ್ಥಾದಿವೃಕ್ಷಗಳು ಇವುಗಳ ವಿಷಯದಲ್ಲಿಯೂ ಅಪರಾಧವನ್ನು ಮಾಡಿರಬಹುದು. ನಿಮಗಾಗಿ ಮಾಡುವ ಈ ಉಪಹೋಮಗಳಿಂದ ಆ ಅಪರಾಧದ ಪಾಪವು ಪರಿಹಾರವಾಗುವಂತೆ ಮಾಡುತ್ತೇನೆ. ನಿಮ್ಮ ಪ್ರಸಾದದಿಂದ ಆ ಪಾಪವು ಪರಿಹಾರವಾಗಲಿ. ಯಜಮಾನನು ವರುಣಪಾಶದಿಂದ ಮುಕ್ತನಾಗಲಿ.

ಪಾಪವನ್ನು ಮಾಡಿದವನ ಇಂದ್ರಿಯಶಕ್ತಿಯನ್ನೂ ತೆಗೆದುಕೊಂಡು ಇಂದ್ರನು ದೂರವಾಗುತ್ತಾನೆ. ವರುಣನು ರೋಗದಿಂದ ಇವನನ್ನು ಆಕ್ರಮಿಸುತ್ತಾನೆ. ಇಂತಹವನಿಗಾಗಿ

ಏತಾಮ್ಬೆಂದ್ರಾವರುಣೀಂ ಪಯಸ್ಯಾಂ ನಿರ್ವಪೇದಿಂದ್ರ

ಏವಾಸ್ಮಿನ್ನಿಂದ್ರಿಯಂ ದಧಾತಿ ವರುಣ ಏನಂ

ವರುಣಪಾಶಾನ್ಮುಂಚತಿ ಪಯಸ್ಯಾ ಭವತಿ

---

ಏತಾಮ್ । ಐಂದ್ರಾವರುಣೀಮಿತ್ಯೈಂದ್ರಾ-ವರುಣೀಮ್ । ಪಯಸ್ಯಾಮ್ । ನಿರಿತಿ । ವಪೇತ್ । **ಇಂದ್ರಃ** । ಏವ । ಅಸ್ಮಿನ್ನ್ । ಇಂದ್ರಿಯಮ್ । ದಧಾತಿ । ವರುಣಃ । ಏನಮ್ । ವರುಣಪಾಶಾದಿತಿ ವರುಣ-ಪಾಶಾತ್ । ಮುಂಚತಿ । **ಪಯಸ್ಯಾ** । ಭವತಿ ।

---

| | |
|---|---|
| ತಸ್ಮೈ ಏತಾಮ್ ಐಂದ್ರಾವರುಣೀಮ್ ಪಯಸ್ಯಾಮ್ ನಿರ್ವಪೇತ್ | ಅವನಿಗಾಗಿ ಇಂದ್ರಾವರುಣದೇವತಾಕವಾದ ಆಮಿಕ್ಷಾದ್ರವ್ಯಕವಾದ ಯಾಗವನ್ನು ಋತ್ವಿಜರು ಮಾಡಬೇಕು/ಅವನು ಈ ಯಾಗವನ್ನು ಅನುಷ್ಠಿಸಬೇಕು. |

**ಈ ಯಾಗದ ಫಲಪ್ರಶಂಸೆ**

| | |
|---|---|
| ಅಸ್ಮಿನ್ ಇಂದ್ರಃ ಏವ ಇಂದ್ರಿಯಮ್ ದಧಾತಿ | ಇಂದ್ರದೇವನು ಈ ಯಾಗದಿಂದ ಪ್ರಸನ್ನವಾಗಿ ಇಂದ್ರಿಯಶಕ್ತಿಯನ್ನು ಕೊಡುತ್ತಾನೆ. |
| ವರುಣಃ ಏನಮ್ ವರುಣ ಪಾಶಾತ್ ಮುಂಚತಿ | ವರುಣದೇವನು ತೃಪ್ತನಾಗಿ ಈತನ ರೋಗವನ್ನು ಪರಿಹರಿಸುತ್ತಾನೆ. |

**ಪಯಸ್ಯಾದ್ರವ್ಯದ ಪ್ರಶಂಸೆ**

| | |
|---|---|
| ಪಯಸ್ಯಾ ಭವತಿ | ಪಯಸ್ಯಾಶಬ್ದವಾಚ್ಯವಾದ ಆಮಿಕ್ಷೆಯು* ಈ ಯಾಗದ ಹವಿಸ್ಸಾಗಿದೆ. |

---

**ಇಂದ್ರಾವರುಣ**ದೇವತಾಕವಾದ ಪಯಸ್ಯಾಯಾಗವನ್ನು ಅನುಷ್ಠಿಸಬೇಕು. ಅವನು ಈ **ಯಾಗವನ್ನು** ಅನುಷ್ಠಿಸಬೇಕೆಂದು ತಾತ್ಪರ್ಯ.

ಪಯೋ ಹಿ ವಾ ಏತಸ್ಮಾದಪಕ್ರಾಮತ್ಯಥೈಷ ಪಾಪ್ಮನಾ
ಗೃಹೀತೋ ಯತ್ಪಯಸ್ಯಾ ಭವತಿ ಪಯ ಏವಾಸ್ಮಿನ್ತಯಾ
ದಧಾತಿ ಪಯಸ್ಯಾಯಾಂ [(೨) ಪುರೋಡಾಶ]

---

ಪಯಃ । ಹಿ । ವೈ । ಏತಸ್ಮಾತ್ । ಅಪಕ್ರಾಮತೀತ್ಯಪ–ಕ್ರಾಮತಿ । ಅಥ । ಏಷಃ । ಪಾಪ್ಮನಾ । ಗೃಹೀತಃ । ಯತ್ । ಪಯಸ್ಯಾ । ಭವತಿ । ಪಯಃ । ಏವ । ಅಸ್ಮಿನ್ನ್ । ತಯಾ । ದಧಾತಿ । **ಪಯಸ್ಯಾಯಾವ್ ।**

---

| | |
|---|---|
| ಪಯಃ ಹಿ ವೈ ಏತಸ್ಮಾತ್ ಅಪಕ್ರಾಮತಿ ಅಥ ಏಷಃ ಪಾಪ್ಮನಾ ಗೃಹೀತಃ ಭವತಿ | ಪಯಃಶಬ್ದವಾಚ್ಯವಾದ ಪುಣ್ಯಕರ್ಮವು ಈ ಯಜಮಾನನಿಂದ ದೂರವಾದರೆ ಆಗ ಈ ಯಜಮಾನನು ಪಾಪದಿಂದ ಗ್ರಸ್ತನಾಗುತ್ತಾನೆ. |
| ಯತ್ ಪಯಸ್ಯಾ ಭವತಿ | ಪಯಸ್ಯಾದ್ರವ್ಯವು/ ಆಮಿಕ್ಷೆಯು ಹವಿಸ್ಸಾದರೆ |
| ಪಯಃ ಏವ ಅಸ್ಮಿನ್ ತಯಾ ದಧಾತಿ | [ಆ ದ್ರವ್ಯದ ಫಲವಾಗಿ] ಈ ಯಜಮಾನನಲ್ಲಿ ಶ್ರದ್ಧೆಯಿಂದ ಮಾಡಿದ ಪುಣ್ಯಫಲವನ್ನು ಇಂದ್ರ–ವರುಣರು ಅನುಗ್ರಹಿಸುತ್ತಾರೆ. |

**ಪ್ರಯೋಗವಿಶೇಷವಿಧಾನ; ಪ್ರಶಂಸೆ**

| | |
|---|---|
| ಪಯಸ್ಯಾಯಾವ್ | ಆಮಿಕ್ಷಾದ್ರವ್ಯದಲ್ಲಿ |

---

ಈ ಯಾಗದಿಂದ ತೃಪ್ತನಾದ ಇಂದ್ರದೇವನು ಇಂದ್ರಿಯಸಾಮರ್ಥ್ಯವನ್ನು ನೀಡುತ್ತಾನೆ. ವರುಣನು ತನ್ನ ಪಾಶರೂಪವಾದ ರೋಗದಿಂದ ಇವನನ್ನು ಬಿಡುಗಡೆ ಮಾಡುತ್ತಾನೆ.

---

* **'ತಪ್ತೇ ಪಯಸಿ ದಧ್ಯಾನಯತಿ ಸಾ ಆಮಿಕ್ಷಾ'** ಕುದಿಸಿದ ಬಿಸಿಯಾದ ಹಾಲಿನಲ್ಲಿ ಮೊಸರನ್ನು ಸೇರಿಸಿದಾಗ ಉಂಟಾಗುವ ಒಡಕುದ್ರವದಲ್ಲಿನ ಗಟ್ಟಿಭಾಗವು ಆಮಿಕ್ಷಾ ನೀರಾದ ದ್ರವ್ಯವು ವಾಜಿನ. **ಆಮಿಕ್ಷಾ ಸಾ ಶೃತೋಷ್ಣೇ ಯಾ ಕ್ಷೀರೇ ಸ್ಯಾದ್ದಧಿಯೋಗತಃ ॥**

**ಅಮರಕೋಶ, ಬ್ರಹ್ಮವರ್ಗಃ**

ಪುರೋಡಾಶಮವ ದಧಾತ್ಯಾತ್ಮನ್ವಂತಮೇವೈನಂ

ಕರೋತ್ಯಥೋ ಆಯತನವಂತಮೇವ ಚತುರ್ಧಾ ವ್ಯೂಹತಿ

---

ಪುರೋಡಾಶಮ್ । ಅವೇತಿ । ದಧಾತಿ । ಆತ್ಮನ್ವಂತಮಿತ್ಯಾತ್ಮನ್ನ್-ವಂತಮ್ । ಏವ । ಏನಮ್ । ಕರೋತಿ । ಅಥೋ ಇತಿ । ಆಯತನವಂತಮಿತ್ಯಾಯತನ-ವಂತಮ್ । ಏವ । **ಚತುರ್ಧೇತಿ ಚತುಃ-ಧಾ** । ವೀತಿ । ಊಹತಿ ।

---

| | |
|---|---|
| **ಪುರೋಡಾಶಮ್ ಅವದಧಾತಿ** | ಏಕಾದಶಕಪಾಲ ಪುರೋಡಾಶದ್ರವ್ಯವನ್ನು ಹಾಕಬೇಕು. |
| **ಏನಮ್ ಆತ್ಮನ್ವಂತಮ್ ಏವ ಕರೋತಿ** | [ಅಧ್ವರ್ಯುವು] ಯಜಮಾನನನ್ನು ಗಟ್ಟಿಮುಟ್ಟಾದ ಶರೀರವುಳ್ಳವನನ್ನಾಗಿ ಮಾಡುತ್ತಾನೆ. |
| **ಅಥೋ ಆಯತನವಂತಮ್ ಏವ ಕರೋತಿ** | ಮತ್ತು ಯಜಮಾನನನ್ನು ಮನೆ ಮೊದಲಾದ ಆಶ್ರಯವುಳ್ಳವನನ್ನಾಗಿಯೂ ಮಾಡುತ್ತಾನೆ. |

**ಮತ್ತೆ ಕೆಲವು ವಿಶೇಷಗಳ ವಿಧಾನ; ಪ್ರಶಂಸೆ**

| | |
|---|---|
| **ಚತುರ್ಧಾ ವ್ಯೂಹತಿ** | [ಆಮಿಕ್ಷಾಮಿಶ್ರಿತವಾದ ಪುರೋಡಾಶವನ್ನು] ನಾಲ್ಕು ಭಾಗಗಳಾಗಿ ವಿಂಗಡಿಸಬೇಕು. |

---

ಆಮಿಕ್ಷಾದ್ರವ್ಯವು ಪುರೋಡಾಶದೊಡನೆ ಈ ಯಾಗದ ಹವಿಸ್ಸಾಗಿದೆ. ಈ ಯಜಮಾನನು ಶ್ರದ್ಧೆಯಿಂದ ಮಾಡಿದ ಪುಣ್ಯಕರ್ಮವು ದೂರವಾದರೆ ಆಗ ಈ ಯಜಮಾನನು ಪಾಪಗ್ರಸ್ತನೂ, ರೋಗಗ್ರಸ್ತನೂ ಆಗುತ್ತಾನೆ. ಪಯಸ್ಯಾದ್ರವ್ಯವು ಹವಿಸ್ಸಾಗುವುದರಿಂದ ಈ ಯಜಮಾನನಿಗೆ ದೇವತಾನುಗ್ರಹದಿಂದ ಪುಣ್ಯಕರ್ಮದಲ್ಲಿ ಶ್ರದ್ಧೆಯು ಉಂಟಾಗಿ ಪಾಪಪರಿಹಾರವೂ, ರೋಗ ಪರಿಹಾರವೂ ಆಗುತ್ತದೆ.

ಆಮಿಕ್ಷೆಯಲ್ಲಿ ಪುರೋಡಾಶವನ್ನು ಹಾಕಬೇಕು. ಇದರಿಂದ ಯಜಮಾನನು ದೃಢ

ದಿಕ್ಷ್ವೇವ ಪ್ರತಿತಿಷ್ಠತಿ ಪುನಃ ಸಮೂಹತಿ ದಿಗ್ಭ್ಯ ಏವಾಸ್ಮೈ ಭೇಷಜಂ ಕರೋತಿ ಸಮೂಹ್ಯಾವದ್ಯತಿ ಯಥಾಽಽವಿದ್ಧಂ ನಿಷ್ಕೃಂತತಿ ತಾದೃಗೇವ ತದ್ಯೋ ವಾಮಿಂದ್ರಾವರುಣಾವಗ್ನೌ

---

ದಿಕ್ಷು । ಏವ । ಪ್ರತೀತಿ । ತಿಷ್ಠತಿ । ಪುನಃ । ಸಮಿತಿ । ಊಹತಿ । ದಿಗ್ಭ್ಯ ಇತಿ ದಿಕ್-ಭ್ಯಃ । ಏವ । ಅಸ್ಮೈ । ಭೇಷಜಮ್ । ಕರೋತಿ । ಸಮೂಹ್ಯೇತಿ ಸಮ್-ಊಹ್ಯ । ಅವೇತಿ । ದ್ಯತಿ । ಯಥಾ । ಆವಿದ್ಧಮಿತ್ಯಾ-ವಿದ್ಧಮ್ । ನಿಷ್ಕೃಂತತೀತಿ ನಿಃ-ಕೃಂತತಿ । ತಾದೃಕ್ । ಏವ । ತತ್ । ಯಃ । ವಾಮ್ । ಇಂದ್ರಾವರುಣಾವಿತೀಂದ್ರಾ-ವರುಣೌ । ಅಗ್ನೌ ।

---

| | |
|---|---|
| ದಿಕ್ಷು ಏವ ಪ್ರತಿತಿಷ್ಠತಿ | [ಇದರಿಂದ ಯಜಮಾನನು] ನಾಲ್ಕು ದಿಕ್ಕುಗಳಲ್ಲಿಯೂ ಸ್ಥಿರನಾಗಿರುವಂತಾಗುತ್ತದೆ. |
| ಪುನಃ ಸಮೂಹತಿ | ವಿಭಾಗ ಮಾಡಿದ ಹವಿಸ್ಸನ್ನು ಮತ್ತೆ ಒಟ್ಟುಗೂಡಿಸಬೇಕು. |
| ದಿಗ್ಭ್ಯಃ ಏವ ಅಸ್ಮೈ ಭೇಷಜಮ್ ಕರೋತಿ | ಇದರಿಂದ ಎಲ್ಲ ದಿಕ್ಕುಗಳಲ್ಲಿಯೂ ಯಜಮಾನನಿಗೆ ರೋಗಪರಿಹಾರಕವಾದ ಚಿಕಿತ್ಸೆಯನ್ನು ಮಾಡಿದಂತಾಗುತ್ತದೆ. |
| ಸಮೂಹ್ಯ ಅವದ್ಯತಿ | ಒಟ್ಟುಗೂಡಿಸಿದ ಆಮಿಕ್ಷಾ-ಪುರೋಡಾಶಗಳನ್ನು ಹೋಮಕ್ಕಾಗಿ ಅವದಾನ ಮಾಡಬೇಕು. |
| ಯಥಾ ಆವಿದ್ಧಮ್ ನಿಷ್ಕೃಂತತಿ ತಾದೃಕ್ ಏವ ತತ್ | ಅದು ದೇಹದಲ್ಲಿ ಚುಚ್ಚಿಕೊಂಡಿರುವ ಬಾಣಾದಿಗಳನ್ನು ಕಿತ್ತು ನಾಶಪಡಿಸಿದಂತೆ ಆಗುತ್ತದೆ. |

**ಪ್ರಥಮ ಉಪಹೋಮದ ವಿವರಣೆ**

| | |
|---|---|
| ಯಃ ವಾಮ್ ಇಂದ್ರಾವರುಣೌ ಅಗ್ನೌ | 'ಇಂದ್ರಾವರುಣರೇ! ಅಗ್ನಿಗೆ ಸಂಬಂಧಿಸಿದಂತೆ ಯಜಮಾನನು |

---

ಶರೀರವುಳ್ಳವನೂ, ಮನೆಯೇ ಮೊದಲಾದ ಆಶ್ರಯವುಳ್ಳವನೂ ಆಗುತ್ತಾನೆ.

## ಸ್ರಾಮಸ್ತಂ ವಾಮೇತೇನಾವಯಜ ಇತ್ಯಾಹ

## ದುರಿಷ್ಟ್ಯಾ ಏವೈನಂ ಪಾತಿ

---

ಸ್ರಾಮಃ । ತಮ್ । ವಾಮ್ । ಏತೇನ । ಅವೇತಿ । ಯಜೇ । ಇತಿ । ಆಹ । ದುರಿಷ್ಟ್ಯಾ ಇತಿ ದುಃ-ಇಷ್ಟ್ಯಾಃ । ಏವ । ಏನಮ್ । ಪಾತಿ ।

---

| | |
|---|---|
| ಸ್ರಾಮಃ ತಮ್ ವಾಮ್ ಏತೇನ ಅವಯಜೇ ಇತಿ ಆಹ | ಎಸಗಿದ ಅಪರಾಧದಿಂದಾದ ಪಾಪವನ್ನು ಈ ಉಪಹೋಮದಿಂದ ನಾನು ಹೋಗಲಾಡಿಸುತ್ತೇನೆ' ಎಂದು ಈ ಉಪಹೋಮ ಮಂತ್ರವು ಹೇಳುತ್ತದೆ. |
| ಏನಮ್ ದುರಿಷ್ಟ್ಯಾಃ ಏವ ಪಾತಿ | ಅಗ್ನಿಯಲ್ಲಿ ಹೋಮಕ್ಕೆ ಸಂಬಂಧಿಸಿದ ಯಜಮಾನನ ಅಪರಾಧದೋಷದಿಂದ ಈ ಉಪಹೋಮವು ಯಜಮಾನನನ್ನು ರಕ್ಷಿಸುತ್ತದೆ. |

---

ಆಮಿಕ್ಷಾಮಿಶ್ರಿತವಾದ ಪುರೋಡಾಶವನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿ, ಮತ್ತೆ ಒಟ್ಟುಗೂಡಿಸಬೇಕು. ವಿಂಗಡಿಸಿದುದರಿಂದ ಯಜಮಾನನನ್ನು ನಾಲ್ಕು ದಿಕ್ಕುಗಳಲ್ಲಿಯೂ ಸ್ಥಿರನಾಗಿರುವವನನ್ನಾಗಿ ಮಾಡಿದಂತಾಗುತ್ತದೆ. ಪುನಃ ಒಗ್ಗೂಡಿಸಿದುದರಿಂದ ಎಲ್ಲ ದಿಕ್ಕುಗಳಲ್ಲಿಯೂ ಯಜಮಾನನಿಗೆ ರೋಗಪರಿಹಾರಕ್ಕಾಗಿ ಚಿಕಿತ್ಸೆಯನ್ನು ಮಾಡಿದಂತಾಗುತ್ತದೆ. ಆಮಿಕ್ಷಾ-ಪುರೋಡಾಶಗಳ ಅವದಾನದಿಂದ ದೇಹದಲ್ಲಿ ಚುಚ್ಚಿದ ಬಾಣಾದಿಗಳನ್ನು ತೆಗೆದಂತಾಗುತ್ತದೆ. ಯಜಮಾನನ ಪಾಪವನ್ನು ಹೋಗಲಾಡಿಸಿದಂತಾಗುತ್ತದೆ.

ಈ ಉಪಹೋಮದಿಂದ ಅಗ್ನಿಗೆ ಸಂಬಂಧಿಸಿದಂತೆ ಯಜಮಾನನು ಮಾಡಿರಬಹುದಾದ ಅಪರಾಧದ ಪಾಪವನ್ನು ಹೋಗಲಾಡಿಸಿ, ಅಧ್ವರ್ಯುವು ಯಜಮಾನನನ್ನು ರಕ್ಷಿಸುತ್ತಾನೆ.

## ಯೋ ವಾಮಿಂದ್ರಾವರುಣಾ ದ್ವಿಪಾತ್ಸು ಪಶುಷು

## ಸ್ರಾಮಸ್ತಂ ವಾಮೇತೇನಾವಯಜ ಇತ್ಯಾಹೈತಾವತೀರ್ವಾ

## ಆಪ ಓಷಧಯೋ ವನಸ್ಪತಯಃ ಪ್ರಜಾಃ ಪಶವ

---

ಯಃ । ವಾಮ್ । ಇಂದ್ರಾವರುಣೇತೀಂದ್ರ-ವರುಣಾ । ದ್ವಿಪಾತ್ಸ್ವಿತಿ ದ್ವಿಪಾತ್-ಸು ।
ಪಶುಷು । ಸ್ರಾಮಃ । ತಮ್ । ವಾಮ್ । ಏತೇನ । ಅವೇತಿ । ಯಜೇ । ಇತಿ । ಆಹ ।
ಏತಾವತೀಃ । ವೈ । ಆಪಃ । ಓಷಧಯಃ । ವನಸ್ಪತಯಃ । ಪ್ರಜಾ ಇತಿ ಪ್ರ-ಜಾಃ । ಪಶವಃ ।

---

### ಉಳಿದ ಉಪಹೋಮಮಂತ್ರಗಳ ವಿವರಣೆ

| | |
|---|---|
| ಇಂದ್ರಾವರುಣಾ ಯಃ<br>ವಾಮ್ ದ್ವಿಪಾತ್ಸು ಪಶುಷು<br>ಸ್ರಾಮಃ ತಮ್ ವಾಮ್ ಏತೇನ<br>ಅವಯಜೇ ಇತಿ ಆಹ | 'ಇಂದ್ರಾವರುಣರೇ ! ನಿಮಗೆ ಸಂಬಂಧಿಸಿದಂತೆ ಮನುಷ್ಯರ ವಿಷಯದಲ್ಲಿ *ಗವಾದಿ ಪಶುಗಳ ವಿಷಯದಲ್ಲಿ, ಕೊಟ್ಟಿಗೆ, ಮನೆ, ನೀರು, ಮರಗಳು ಇವುಗಳ ವಿಷಯದಲ್ಲಿ ಯಜಮಾನನ ಅಪರಾಧಪಾಪವನ್ನು ಹೋಗಲಾಡಿಸುತ್ತೇನೆ' ಎಂದು ಈ ಉಪಹೋಮ ಮಂತ್ರಗಳು ಹೇಳುತ್ತವೆ. |
| ಆಪಃ, ಓಷಧಯಃ, ವನಸ್ಪತಯಃ<br>ಪ್ರಜಾಃ, ಪಶವಃ ಏತಾವತೀಃ<br>ವೈ | ನೀರು, ಸಸ್ಯಗಳು, ವನಸ್ಪತಿಗಳು, ಪ್ರಜೆಗಳು, ಪಶುಗಳು, *ಕೊಟ್ಟಿಗೆ, *ಮನೆಗಳು ಇಷ್ಟೇ ತಾನೇ |

---

ಉಳಿದ ಏಳು ಉಪಹೋಮಗಳಿಂದ ಇಂದ್ರಾವರುಣರಿಗೆ ಸಂಬಂಧಿಸಿದ ಮನುಷ್ಯರು, ಗವಾದಿ ಪಶುಗಳು, ಕೊಟ್ಟಿಗೆ, ಮನೆ, ನೀರು, ಸಸ್ಯಗಳು, ಮರಗಳು – ಇವುಗಳ ವಿಷಯದಲ್ಲಿ ಯಜಮಾನನು ಮಾಡಿರಬಹುದಾದ ಅಪರಾಧದ ಪಾಪವನ್ನು ಹೋಗಲಾಡಿಸಿ, ಅಧ್ವರ್ಯುವು ಯಜಮಾನನನ್ನು ರಕ್ಷಿಸುತ್ತಾನೆ.

* ಇಲ್ಲಿ ಶ್ರುತಿಯಲ್ಲಿ ಒಂದು ಮಂತ್ರವು ಇದ್ದರೂ ಉಳಿದ ಮಂತ್ರಗಳನ್ನು ಸೇರಿಸಿಕೊಳ್ಳಬೇಕು. ಅಂತೆಯೇ ವಿವರಣೆಯನ್ನು ನೀಡಲಾಗಿದೆ.

* ಗೋಷ್ಠೇ, ಗೃಹೇಷು ಎಂಬ ಮಂತ್ರಗಳ ಅರ್ಥವನ್ನೂ ಸೇರಿಸಿಕೊಳ್ಳಬೇಕು. ಅಂತೆಯೇ ವಿವರಣೆ ಇದೆ.

ಉಪಜೀವನೀಯಾಸ್ತಾ ಏವಾಸ್ಮೈ

ವರುಣಪಾಶಾನ್ಮುಂಚತಿ ॥೫೦–13॥

[ಏತಸ್ಯ ಪಯಸ್ಯಾಯಾಂ ಪಾತಿ ಷಡ್ವಿಗ್ಂಶತಿಶ್ಚ ।]

---

ಉಪಜೀವನೀಯಾ ಇತ್ಯುಪ–ಜೀವನೀಯಾಃ । ತಾಃ । ಏವ । ಅಸ್ಮೈ । ವರುಣಪಾಶಾದಿತಿ ವರುಣ–ಪಾಶಾತ್ । ಮುಂಚತಿ ॥13॥

---

ಉಪಜೀವನೀಯಾಃ : ಮನುಷ್ಯನು ಬಾಳಲು ಆವಶ್ಯಕವಾದವುಗಳು.

ಅಸ್ಮೈ ತಾಃ ಏವ ವರುಣ ಪಾಶಾತ್ ಮುಂಚತಿ : ಆ ವಸ್ತುಗಳನ್ನೇ ವರುಣನ ಕೋಪದಿಂದ ಬಿಡಿಸಿ ಯಜಮಾನನು ರೋಗರಹಿತನಾಗಿ ಬಾಳುವಂತೆ ಅಧ್ವರ್ಯುವು ಮಾಡುತ್ತಾನೆ.

ಈ ವಸ್ತುಗಳು ತಾನೇ ಮನುಷ್ಯನು ಬಾಳಲು ಆವಶ್ಯಕವಾದವುಗಳು. ಅಧ್ವರ್ಯುವು ಆ ವಸ್ತುಗಳನ್ನು ವರುಣನ ಕೋಪದಿಂದ ಬಿಡಿಸಿ, ಯಜಮಾನನು ರೋಗರಹಿತನಾಗಿ ಬಾಳುವಂತೆ ಮಾಡುತ್ತಾನೆ.

* * *

## ತ್ರಯೋದಶಾನುವಾಕವಿಷಯಸಂಗ್ರಹ

**1–4ಯಾ ವಾಮಿತಿ ಚತುರ್ಮಂತ್ರೈಶ್ಚತುರ್ಧಾ ವ್ಯೂಹತೇ ಹವಿಃ ।**
**5–12ಯೋ ವಾಮಿತ್ಯಷ್ಟಭಿರ್ಮಂತ್ರೈರುಪಹೋಮಾ ಇಹೇರಿತಾಃ ॥**

**ದ್ವಿಪಾಚ್ಚಿತ್ಯಾದಿನಾ ಮಂತ್ರಭೇದಸ್ಸಪ್ತವಿಧೋ ಭವೇತ್ ।**
**ತ್ರಯೋದಶೇಽನುವಾಕೇಽಸ್ಮಿನ್ ಮಂತ್ರಾ ದ್ವಾದಶ ವರ್ಣಿತಾಃ ॥**

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ – 12**

* * *

## || ಚತುರ್ದಶೋಽನುವಾಕಃ ||

### *ಸ ಪ್ರತ್ನವ*ನ್ನಿಕಾವ್ಯೇಂದ್ರಂ ವೋ*

### ವಿಶ್ವತಸ್ಪರೀಂದ್ರಂ ನರಃ* ||

---

||ವೈ|| ಸಃ | ಪ್ರತ್ನವದಿತಿ ಪ್ರತ್ನ–ವತ್ | ನೀತಿ | ಕಾವ್ಯಾ | ಇಂದ್ರಮ್ | ವಃ | ವಿಶ್ವತಃ | ಪರೀತಿ | ಇಂದ್ರಮ್ | ನರಃ ||

---

**ಹದಿಮೂರನೆಯ ಅನುವಾಕದಲ್ಲಿ ಪಾಪಪರಿಹಾರೇಷ್ಟಿಯು ಹೇಳಲ್ಪಟ್ಟಿದೆ. ಈ ಹದಿನಾಲ್ಕನೆಯ ಅನುವಾಕದಲ್ಲಿ ಯಾಜ್ಯಾ–ಪುರೋನುವಾಕ್ಯೆಗಳು ಹೇಳಲ್ಪಟ್ಟವೆ.**

| ಮಂತ್ರ | ವಿನಿಯೋಗ |
|---|---|
| *ಸ........ ಭಾನುನಾ \|\| | ಯಜ್ಞವಿಭ್ರಷ್ಟೇಷ್ಟಿಯ ಆಗ್ನೇಯಯಾಗದ ಪುರೋನುವಾಕ್ಯೆಯ ಪ್ರತೀಕಗ್ರಹಣ. |
| *ನಿ ಕಾವ್ಯಾ.... ವಿಶ್ವಾ \|\| | ಈ ಆಗ್ನೇಯಯಾಗದ ಯಾಜ್ಯೆಯ ಪ್ರತೀಕ ಗ್ರಹಣ. |

---

***ತಾತ್ಪರ್ಯ :** ಎಲೈ ! ಅಗ್ನಿಯೇ ! ನೀನು ಪುರಾತನನಾದವನು. ನೀನು ಹೊಸದಾದ ನಿನ್ನನ್ನೇ ಕೂಡಿಕೊಂಡಿರುವ ಯಶಸ್ಸಿನಿಂದ ಯುಕ್ತನಾದವನು. ನಿನ್ನ ತೇಜಸ್ಸಿನಿಂದ ವಿಶ್ವವನ್ನು ವ್ಯಾಪಿಸು.

---

* ಸ ಪ್ರತ್ನವನ್ನವೀಯಸಾಽಗ್ನೇ ದ್ಯುಮ್ನೇನ ಸಂಯತಾ || ಬೃಹತ್ತತಂಥ ಭಾನುನಾ ||1||

* ನಿ ಕಾವ್ಯಾ ವೇಧಸಃ ಶಶ್ವತಸ್ಕರ್ ಹಸ್ತೇ ದಧಾನೋ ನರ್ಯಾ ಪುರೂಣಿ |
ಅಗ್ನಿರ್ಭುವದ್ರಯೀಪತೀ ರಯೀಣಾಗ್ಂ ಸತ್ರಾ ಚಕ್ರಾಣೋ ಅಮೃತಾನಿ ವಿಶ್ವಾ ||

* ಇಂದ್ರಂ ವೋ ವಿಶ್ವತಸ್ಪರಿ ಹವಾಮಹೇ ಜನೇಭ್ಯಃ | ಅಸ್ಮಾಕಮಸ್ತು ಕೇವಲಃ ||

* ಇಂದ್ರಂ ನರೋ ನೇಮಧಿತಾ ಹವಂ ತೇ ಯತ್ಪಾರ್ಯಾ ಯುನಜತೇ ಧಿಯಸ್ತಾಃ |
ಶೂರೋ ನೃಷಾತಾ ಶವಸಶ್ಚಕಾನ ಆ ಗೋಮತಿ ವ್ರಜೇ ಭಜಾ ತ್ವಂ ನಃ ||

ಈ ಎರಡು ಮಂತ್ರಗಳೂ 'ಹಿರಣ್ಯಗರ್ಭ' ತೈ.ಸಂ. 2.2.12) ಅನುವಾಕದಲ್ಲಿವೆ. ಪದಶಃ ಅರ್ಥ, ತಾತ್ಪರ್ಯಗಳು ಅಲ್ಲಿ ವಿಸ್ತಾರವಾಗಿ ತಿಳಿಸಲ್ಪಟ್ಟಿವೆ. ಇಲ್ಲಿ ಸಂಕ್ಷಿಪ್ತತಾತ್ಪರ್ಯವನ್ನು ನೀಡಲಾಗಿದೆ.

**ತ್ವಂ ನಃ ಸೋಮ ವಿಶ್ವತೋ ರಕ್ಷಾ ರಾಜನ್ನಘಾಯತಃ ।**

**ನ ರಿಷ್ಯೇತ್ತ್ವಾವತಃ ಸಖಾ ॥**

**ತ್ವಮ್** । ನಃ । ಸೋಮ । ವಿಶ್ವತಃ । ರಕ್ಷ । ರಾಜನ್ನ್ । ಅಘಾಯತ ಇತ್ಯಘ–ಯತಃ ॥

ನ । ರಿಷ್ಯೇತ್ । ತ್ವಾವತ ಇತಿ ತ್ವ–ವತಃ । ಸಖಾ ॥

| ಮಂತ್ರ | ವಿನಿಯೋಗ |
|---|---|
| ಇಂದ್ರಂ ವೋ..... ಕೇವಲಃ ॥ | ಐಂದ್ರಯಾಗದ ಪುರೋನುವಾಕ್ಯೆಯ ಪ್ರತೀಕ ಗ್ರಹಣ |
| ಇಂದ್ರಂ ನರೋ.... ನಃ ॥ | ಈ ಯಾಗದ ಯಾಜ್ಯಾನುವಾಕ್ಯೆಯ ಪ್ರತೀಕ ಗ್ರಹಣ |
| ತ್ವಂ ನಃ........ ಸಖಾ । | ಆ ಇಷ್ಟಿಯ ಸೋಮಯಾಗದ ಪುರೋನುವಾಕ್ಯೆ |

**ರಾಜನ್ ಸೋಮ** = ರಾಜನಾದ ಸೋಮದೇವನೇ ! **ತ್ವಮ್** = ನೀನು; **ನಃ** = ನಮ್ಮನ್ನು; **ವಿಶ್ವತಃ ಅಘಾಯತಃ** = ನಮ್ಮನ್ನು ಹಿಂಸಿಸಲು ಇಚ್ಛಿಸುವ ಎಲ್ಲರಿಂದಲೂ; **ರಕ್ಷ** = ಕಾಪಾಡು. **ತ್ವಾವತಃ** = ನಿನ್ನಂತಹವನ; **ಸಖಾ** = ಸ್ನೇಹಿತನು; ನ **ರಿಷ್ಯೇತ್** = ಹಿಂಸೆಗೆ ಗುರಿಯಾಗಲಾರನು.

ಮನುಷ್ಯರಿಗೆ ಹಿತವಾದ, ನಾಶವಿಲ್ಲದ, ಹಿರಣ್ಯಗಳನ್ನು ಕೈಗಳಲ್ಲಿಯೇ ಭಕ್ತರಿಗೆ ಕೊಡಲು ಇಟ್ಟುಕೊಂಡು ಧನವಂತರಲ್ಲಿ ಶ್ರೇಷ್ಠನಾಗಿ, ನಮಗೂ ಧನವನ್ನು ಕೊಟ್ಟು ಯಾಗಾನುಷ್ಠಾನ ಮಾಡುವಂತೆ ಮಾಡಿ, ಯಜ್ಞವಿಭ್ರಷ್ಟಿದೋಷವನ್ನು ಪರಿಹರಿಸಲಿ.

ಎಲೈ ! ಋತ್ವಿಗ್ಯಜಮಾನರೇ ! ನಮ್ಮೆಲ್ಲರ ಮತ್ತು ನಮ್ಮ ಸಂಬಂಧಿಗಳ ಹಿತಕ್ಕಾಗಿ ಎಲ್ಲರಿಗಿಂತಲೂ ಮುಖ್ಯನಾಗಿರುವ ಇಂದ್ರನನ್ನು ಆಹ್ವಾನಿಸುತ್ತೇವೆ. ಅವನು ನಮ್ಮ ಕಾರ್ಯಗಳನ್ನೇ ಸಾಧಿಸಿಕೊಡಲಿ. ಯಜ್ಞವಿಭ್ರಷ್ಟಿದೋಷವನ್ನು ಪರಿಹರಿಸಲಿ.

ಜನರು ಇಂದ್ರನನ್ನು *ಅರ್ಧಭಾಗಾರ್ಹನನ್ನಾಗಿ ಆಹ್ವಾನಿಸುತ್ತಾರೆ. ಪರಲೋಕ ಸಾಧಕಗಳಾದ ಎಲ್ಲ ಯಾಗಾದಿಕರ್ಮಗಳಲ್ಲಿಯೂ ಇಂದ್ರನನ್ನು ಸಂಬಂಧಿಸುತ್ತಾರೆ. ಆ

* ಯತ್ಸರ್ವೇಷಾಮರ್ಧಮಿಂದ್ರಃ......' ಎಂಬ ಶ್ರುತಿ ಇದೆ.

# ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ ಯಾ ಪರ್ವತೇಷ್ವೋಷಧೀಷ್ವಪ್ಸು ।

ಯಾ । ತೇ । ಧಾಮಾನಿ । ದಿವಿ । ಯಾ । ಪೃಥಿವ್ಯಾಮ್ । ಯಾ । ಪರ್ವತೇಷು । ಓಷಧೀಷು । ಅಪ್ಸ್ವಿತ್ಯಪ್–ಸು ॥

| ಮಂತ್ರ | ವಿನಿಯೋಗ |
|---|---|
| ಯಾ ತೇ... ಗೃಭಾಯ । | ಸೋಮಯಾಗದ ಯಾಜ್ಯಾನುವಾಕ್ಯೆ |

❖ **ರಾಜನ್ ಸೋಮ** = ರಾಜನಾದ ಸೋಮದೇವನೇ ! **ತೇ** = ನಿನಗೆ; **ದಿವಿ** = ಸ್ವರ್ಗದಲ್ಲಿ; **ಯಾ ಧಾಮಾನಿ** (ಸಂತಿ) = ಯಾವ ಸ್ಥಾನಗಳಿವೆಯೋ; **ಯಾ ಪೃಥಿವ್ಯಾಮ್** (ಧಾಮಾನಿ ಸಂತಿ) = ಭೂಮಿಯಲ್ಲಿ ಯಾವ ಸ್ಥಾನಗಳಿವೆಯೋ; **ಯಾ ಪರ್ವತೇಷು** (ಧಾಮಾನಿ ಸಂತಿ) = ಪರ್ವತಗಳಲ್ಲಿ ಯಾವ ಸ್ಥಾನಗಳು ಇವೆಯೋ; **ಓಷಧೀಷು ಅಪ್ಸು** ಯಾ ಧಾಮಾನಿ ಸಂತಿ = ಸಸ್ಯಗಳಲ್ಲಿಯೂ, ನೀರಿನಲ್ಲಿಯೂ ಯಾವ ಸ್ಥಾನಗಳು ಇವೆಯೋ;

ಇಂದ್ರನು ಮನುಷ್ಯರಿಗೆ ಧನವನ್ನು ಕೊಡತಕ್ಕವನು. ತೃಪ್ತಿಶೀಲನು. ಇಂತಹ ಪ್ರಭಾವಯುಕ್ತನಾದ ಇಂದ್ರನೇ ! ನೀನು ನಮ್ಮ ಯಜ್ಞವಿಭ್ರಷ್ಟಿದೋಷವನ್ನು ಪರಿಹರಿಸು. ನಮ್ಮ ಕೊಟ್ಟಿಗೆಗಳು ಸದಾ ಪಶುಧನಸಮೃದ್ಧವಾಗುವಂತೆ ಮಾಡು.

ಎಲೈ ಸೋಮರಾಜನೇ! ನಮ್ಮನ್ನು ಹಿಂಸಿಸಲು ಬಯಸುವ ಎಲ್ಲರಿಂದಲೂ ನಮ್ಮನ್ನು ರಕ್ಷಿಸು. ನಿನ್ನಂತಹ ಪ್ರಭುವಿನ ಗೆಳೆಯನಾದವನು ಹಿಂಸಿಸಲು ಯೋಗ್ಯನಾಗಲಾರನು. ನಿನ್ನಂತಹ ಪ್ರಭುವಿನ ಗೆಳೆಯನಾದ ಸಮರ್ಥನೂ ನಿನ್ನ ಅನುಗ್ರಹಬಲವಿರುವ ನಮ್ಮನ್ನು ಹಿಂಸಿಸಲಾರನು ಎಂದ ಮೇಲೆ ಉಳಿದವರು ನಮ್ಮನ್ನು ಹಿಂಸಿಸಬಲ್ಲರೇ?

ಸೋಮರಾಜನೇ ! ನೀನು ಸರ್ವವ್ಯಾಪಕನು. ನಿನಗೆ ಸ್ವರ್ಗದಲ್ಲಿಯೂ, ಭೂಮಿಯಲ್ಲಿಯೂ, ಪರ್ವತಗಳಲ್ಲಿಯೂ, ಓಷಧಿಗಳಲ್ಲಿಯೂ, ನೀರುಗಳಲ್ಲಿಯೂ ಸ್ಥಾನಗಳು ಇವೆ.

**ತೇಭಿರ್ನೋ ವಿಶ್ವೈಃ ಸುಮನಾ ಅಹೇಡನ್ರಾಜನ್ಸೋಮ ಪ್ರತಿ ಹವ್ಯಾ ಗೃಭಾಯ ॥ ಅಗ್ನೀಷೋಮಾ ಸವೇದಸಾ ಸಹೂತೀ ವನತಂ ಗಿರಃ। ಸಂ ದೇವತ್ರಾ ಬಭೂವಥುಃ ॥**

---

ತೇಭಿಃ । ನಃ । ವಿಶ್ವೈಃ । ಸುಮನಾ ಇತಿ ಸು–ಮನಾಃ । ಅಹೇಡನ್ನ್ । ರಾಜನ್ನ್ । ಸೋಮ । ಪ್ರತೀತಿ । ಹವ್ಯಾ । ಗೃಭಾಯ ॥ **ಅಗ್ನೀಷೋಮೇತ್ಯಗ್ನೀ–ಸೋಮಾ** । ಸವೇದಸೇತಿ ಸ–ವೇದಸಾ । ಸಹೂತೀ ಇತಿ ಸ–ಹೂತೀ । ವನತಮ್ । ಗಿರಃ ॥ ಸಮಿತಿ । ದೇವತ್ರೇತಿ ದೇವ – ತ್ರಾ । ಬಭೂವಥುಃ ॥

---

| ಮಂತ್ರ | ವಿನಿಯೋಗ |
|---|---|
| **ಅಗ್ನೀಷೋಮಾ... ಬಭೂವಥುಃ ॥** | ಕಾಮಪ್ರಾಪ್ತಿಗಾಗಿ ವಿಹಿತವಾದ ಅಗ್ನೀಷೋಮೀಯೇಷ್ಟಿಯ ಪುರೋನುವಾಕ್ಯೆ |

---

**ತೇಭಿಃ ವಿಶ್ವೇಭಿಃ** = ಆ ಎಲ್ಲಾ ಸ್ಥಾನಗಳಿಂದ ಕೂಡಿದ ನೀನು (ಎಲ್ಲಿದ್ದರೂ ಬಂದು) **ಸುಮನಾಃ** = ಅನುಗ್ರಹ ಮಾಡಬೇಕೆಂಬ ಒಳ್ಳೆಯ ಬುದ್ಧಿಯುಳ್ಳವನಾಗಿ; **ಅಹೇಡನ್** = ಕೋಪವಿಲ್ಲದವನಾಗಿ; **ನಃ** = ನಮ್ಮ; **ಹವ್ಯಾ**=ಹವಿಸ್ಸುಗಳನ್ನು; **ಪ್ರತಿ ಗೃಭಾಯ**= ಪ್ರತಿಗ್ರಹಿಸು. ✤ **ಅಗ್ನೀಷೋಮಾ**=ಅಗ್ನೀಷೋಮದೇವತೆಗಳೇ! ನೀವು; **ಸವೇದಸಾ** = ಸಮಾನಜ್ಞಾನ/ಧನವುಳ್ಳವರಾಗಿ; **ಸಹೂತೀ** = ಸಮಾನವಾದ ಆಹ್ವಾನವುಳ್ಳವರಾಗಿ; **ದೇವತ್ರಾ** = ದೇವತೆಗಳಲ್ಲಿ; **ಸಮ್ ಬಭೂವಥುಃ** = ಯಾವಾಗಲೂ ಕೂಡಿಕೊಂಡವರಾಗಿಯೇ ಇರುತ್ತೀರಿ; (ನೀವು) **ಗಿರಃ** = ನಮ್ಮ ಸ್ತೋತ್ರಗಳನ್ನು; **ವನತಮ್** = ಆಲಿಸಿರಿ/ನಮ್ಮ ಇಷ್ಟವನ್ನು ಸಲ್ಲಿಸಿರಿ.

---

ನೀನು ಎಲ್ಲಿದ್ದರೂ ನಮ್ಮ ಆಹ್ವಾನವನ್ನು ಸ್ವೀಕರಿಸಿ, ಕೋಪ ಮಾಡಿಕೊಳ್ಳದೆ ಅನುಗ್ರಹಿಸುವ ಮನಸ್ಸುಳ್ಳವನಾಗಿ ಬಂದು, ನಾವು ಕೊಡುವ ಹವಿಸ್ಸುಗಳನ್ನು ಸ್ವೀಕರಿಸಿ, ನಮ್ಮ ಇಷ್ಟಾರ್ಥಗಳನ್ನು ಕರುಣಿಸು. ಯಜ್ಞವಿಭ್ರೇಷದೋಷವನ್ನು ಪರಿಹರಿಸು.

# [ಯುವಮ್ (೧) ಏತಾನಿ] ಯುವಮೇತಾನಿ

# ದಿವಿ ರೋಚನಾನ್ಯಗ್ನಿಶ್ಚ ಸೋಮ ಸಕ್ರತೂ ಅಧತ್ತಮ್ ॥

---

ಯುವಮ್ । ಏತಾನಿ । ದಿವಿ । ರೋಚನಾನಿ । ಅಗ್ನಿಃ । ಚ । ಸೋಮ । ಸಕ್ರತೂ ಇತಿ ಸ-ಕ್ರತೂ । ಅಧತ್ತಮ್ ॥

---

| ಮಂತ್ರ | ವಿನಿಯೋಗ |
| --- | --- |
| ಯುವಮ್..... ಗೃಭೀತಾನ್ ॥ | ಹಿಂದಿನ ಯಾಗದ ಯಾಜ್ಯಾನುವಾಕ್ಯೆ. |

---

✤ **ಸೋಮ**=ಸೋಮದೇವನೇ ! **ಅಗ್ನಿಃ ಚ** = ನೀನು ಮತ್ತು ಅಗ್ನಿಯೂ; **ಸಕ್ರತೂ**=ಸಮಾನ ಸಂಕಲ್ಪವುಳ್ಳವರಾಗಿದ್ದೀರಿ/ಸಮಾನಕರ್ಮವುಳ್ಳವರಾಗಿದ್ದೀರಿ; **ಯುವಮ್** = ನೀವಿಬ್ಬರೂ; **ಏತಾನಿ ರೋಚನಾನಿ** = ಈ ನಕ್ಷತ್ರಾದಿತೇಜಸ್ಸುಗಳನ್ನು; **ದಿವಿ** = ಅಂತರಿಕ್ಷದಲ್ಲಿ; **ಅಧತ್ತಮ್** = ಸ್ಥಾಪಿಸಿದಿರಿ.

---

ಅಗ್ನೀಷೋಮದೇವತೆಗಳೇ ! ನೀವು ಸಮಾನಜ್ಞಾನವುಳ್ಳವರು/ಸಮಾನ ಧನವುಳ್ಳವರು. ಸಮಾನವಾದ ಆಹ್ವಾನವುಳ್ಳವರು. ದೇವತೆಗಳಲ್ಲಿ ಯಾವಾಗಲೂ ಜೊತೆ ಯಾಗಿಯೇ ಇರತಕ್ಕವರು. ನೀವು ನಮ್ಮ ಸ್ತುತಿಯನ್ನು ಕೇಳಿರಿ. ಪ್ರಸನ್ನರಾಗಿ ಅನುಗ್ರಹಿಸಿರಿ.

ಅಗ್ನೀಷೋಮರೇ ! ನೀವು ಈ ಪ್ರಕಾಶಮಾನವಾದ ನಕ್ಷತ್ರಾದಿಗಳನ್ನು ಅಂತರಿಕ್ಷದಲ್ಲಿ ಇಟ್ಟಿರಿ.

**ಯುವಗ್ಂ ಸಿಂಧೂಗ್ಂರಭಿಶಸ್ತೇರವದ್ಯಾದಗ್ನೀಷೋ**

**ಮಾವಮುಂಚತಂ ಗೃಭೀತಾನ್ ॥ ಅಗ್ನೀಷೋಮಾ**

**ವಿಮಗ್ಂ ಸು ಮೇ ಶೃಣುತಂ ವೃಷಣಾ ಹವಮ್ ॥**

---

ಯುವಮ್ । ಸಿಂಧೂನ್ । ಅಭಿಶಸ್ತೇರಿತ್ಯಭಿ–ಶಸ್ತೇಃ । ಅವದ್ಯಾತ್ । ಅಗ್ನೀಷೋಮಾ ವಿತ್ಯಗ್ನೀ–ಸೋಮೌ । ಅಮುಂಚತಮ್ । ಗೃಭೀತಾನ್ ॥ **ಅಗ್ನೀಷೋಮಾವಿತ್ಯಗ್ನೀ–ಸೋಮೌ** । ಇಮಮ್ । ಸ್ವಿತಿ । ಮೇ । ಶೃಣುತಮ್ । ವೃಷಣಾ । ಹವಮ್ ।

---

| ಮಂತ್ರ | ವಿನಿಯೋಗ |
|---|---|
| **ಅಗ್ನೀಷೋಮಾವಿಮಂ... ಮಯಃ ॥** | ಬ್ರಹ್ಮವರ್ಚಸಕಾಮನಿಗೆ ವಿಹಿತವಾದ ಇಷ್ಟಿಯ ಪುರೋನುವಾಕ್ಯೆ |

---

**ಅಗ್ನೀಷೋಮೌ** = ಎಲೈ! ಅಗ್ನೀಷೋಮದೇವತೆಗಳೇ ! **ಯುವಮ್** = ನೀವಿಬ್ಬರೂ; **ಅಭಿಶಸ್ತೇಃ** = ಬೀದಿಯ ನೀರನ್ನು ಹೊಂದಿರುವ ಅಪವಾದದಿಂದಲೂ; **ಅವದ್ಯಾತ್** = ಕೆಸರೇ ಮೊದಲಾದ ದೃಷ್ಟದೋಷದಿಂದಲೂ; **ಗೃಭೀತಾನ್** = ಆಕ್ರಾಂತವಾಗಿರುವ; **ಸಿಂಧೂನ್** = ನದಿಗಳನ್ನು; **ಅಮುಂಚತಮ್** = ಬಿಡಿಸಿದಿರಿ. ✤ **ವೃಷಣಾ**=ಇಷ್ಟಾರ್ಥಗಳನ್ನು ಸುರಿಸುವ; **ಅಗ್ನೀಷೋಮೌ** = ಅಗ್ನೀಷೋಮರೇ! **ಇಮಮ್ ಮೇ ಹವಮ್** = ಈ ನನ್ನ ಆಹ್ವಾನವನ್ನು; **ಸು ಶೃಣುತಮ್** = ಚೆನ್ನಾಗಿ ಕೇಳಿರಿ.

---

ನೀವು ಹರಿಯುವ ನದಿಗಳಲ್ಲಿ ಬೀದಿಯ ನೀರಿನ ಸಂಪರ್ಕದ ಅಪವಾದವನ್ನೂ, ಕೆಸರೇ ಮೊದಲಾದ ದೋಷಗಳನ್ನೂ ಹೋಗಲಾಡಿಸಿ ಶುದ್ಧಗೊಳಿಸಿದಿರಿ. ನಮ್ಮ ಕಾಮನೆಗಳನ್ನು ಪೂರ್ಣಗೊಳಿಸಿರಿ.

ಅಗ್ನೀಷೋಮರೇ! ನೀವು ಇಷ್ಟಾರ್ಥಗಳನ್ನು ಸುರಿಸತಕ್ಕವರು. ನಮ್ಮ ಆಹ್ವಾನವನ್ನು

**ಪ್ರತಿ ಸೂಕ್ತಾನಿ ಹರ್ಯತಂ ಭವತಂ ದಾಶುಷೇ ಮಯಃ।**

**ಆಽನ್ಯಂ ದಿವೋ ಮಾತರಿಶ್ವಾ ಜಭಾರಾಽಮಥ್ನಾದನ್ಯಂ**

**ಪರಿ ಶ್ಯೇನೋ ಅದ್ರೇಃ।**

---

ಪ್ರತೀತಿ । ಸೂಕ್ತಾನೀತಿ ಸು—ಉಕ್ತಾನಿ । ಹರ್ಯತಮ್ । ಭವತಮ್ । ದಾಶುಷೇ । ಮಯಃ॥ **ಏತಿ** । ಅನ್ಯಮ್ । ದಿವಃ । ಮಾತರಿಶ್ವಾ । ಜಭಾರ । ಅಮಥ್ನಾತ್ । ಅನ್ಯಮ್ । ಪರೀತಿ । ಶ್ಯೇನಃ । ಅದ್ರೇಃ ॥

---

| **ಮಂತ್ರ** | **ವಿನಿಯೋಗ** |
|---|---|
| **ಆಽನ್ಯಂ..... ಲೋಕಮ್** ॥ | ಹಿಂದಿನ ಇಷ್ಟಿಯ ಯಾಜ್ಯಾನುವಾಕ್ಯೆ |

---

**ಸೂಕ್ತಾನಿ ಪ್ರತಿ ಹರ್ಯತಮ್** = ಸ್ತೋತ್ರರೂಪವಾದ ನಮ್ಮ ಒಳ್ಳೆಯ ಮಾತುಗಳನ್ನು ಮನಸ್ಸಿಗೆ ತಂದುಕೊಳ್ಳಿರಿ. **ದಾಶುಷೇ**=ಹವಿಸ್ಸನ್ನು ಕೊಡುವ ಯಜಮಾನನಿಗೆ; **ಮಯಃ ಭವತವ್** = ಸುಖವನ್ನು ಕೊಡುವವರಾಗಿರಿ; ✚ **ಅಗ್ನೀಷೋವೂ** = ಅಗ್ನೀಷೋಮರೇ! **ಅನ್ಯಮ್**=ನಿಮ್ಮಲ್ಲಿ ಒಬ್ಬನಾದ ಅಗ್ನಿಯನ್ನು; **ಮಾತರಿಶ್ವಾ**=ವಾಯುವು; **ದಿವಃ**=ಸ್ವರ್ಗಲೋಕದಿಂದ, **ಆ ಜಭಾರ**= ಭೂಲೋಕಕ್ಕೆ ತಂದನು. **ಶ್ಯೇನಃ** = ಶ್ಯೇನರೂಪವಾದ ಗಾಯತ್ರಿಯು; **ಅದ್ರೇಃ** = ಬೆಟ್ಟದಂತೆ ಎತ್ತರವಾದ ಸ್ಥಾನದಿಂದ; **ಅನ್ಯಮ್**=ಮತ್ತೊಬ್ಬನಾದ ಸೋಮನನ್ನು; **ಪರಿ ಅಮಥ್ನಾತ್** = ಪ್ರತಿಬಂಧಕಗಳನ್ನು ಹೋಗಲಾಡಿಸಿ, ತಂದಿರುತ್ತಾಳೆ.

---

ಕೇಳಿರಿ. ನಮ್ಮ ಸ್ತೋತ್ರಗಳನ್ನು ಮನಸ್ಸಿಗೆ ತಂದುಕೊಳ್ಳಿರಿ. ಹವಿಸ್ಸನ್ನು ಕೊಡುವ ಯಜಮಾನನಿಗೆ ಸುಖಪ್ರದರಾಗಿರಿ. ಅವನಿಗೆ ಬ್ರಹ್ಮವರ್ಚಸವನ್ನು ಕೊಡಿರಿ.

ಅಗ್ನೀಷೋಮರೇ ! ನಿಮ್ಮಲ್ಲಿ ಒಬ್ಬನಾದ ಅಗ್ನಿಯನ್ನು ವಾಯುವು ಸ್ವರ್ಗದಲ್ಲಿರುವ ಸೂರ್ಯನಿಂದ ಭೂಮಿಗೆ ತಂದಿರುತ್ತಾನೆ. ಹಾಗೆಯೇ ಇನ್ನೊಬ್ಬನಾದ ಸೋಮನನ್ನು ಶ್ಯೇನಪಕ್ಷಿರೂಪವಾದ ಗಾಯತ್ರಿಯು ಬೆಟ್ಟದಂತೆ ಉನ್ನತವಾದ ಮೂರನೆಯ ದ್ಯುಲೋಕ ದಿಂದ ಪ್ರತಿಬಂಧಕಗಳನ್ನು ನಿವಾರಿಸಿ ತಂದಿರುತ್ತಾಳೆ.

**ಅಗ್ನೀಷೋಮಾ ಬ್ರಹ್ಮಣಾ ವಾವೃಧಾನೋರುಂ ಯಜ್ಞಾಯ ಚಕ್ರಥುರು ಲೋಕಮ್ ॥ ಅಗ್ನೀಷೋಮಾ ಹವಿಷಃ ಪ್ರಸ್ಥಿತಸ್ಯ ವೀತಗ್ಂ [ವೀತಮ್ (೨) ಹರ್ಯತಮ್] ಹರ್ಯತಂ ವೃಷಣಾ ಜುಷೇಥಾಮ್ ॥**

---

ಅಗ್ನೀಷೋಮೇತ್ಯಗ್ನೀ–ಸೋಮಾ । ಬ್ರಹ್ಮಣಾ । ವಾವೃಧಾನಾ । ಉರುಮ್ । ಯಜ್ಞಾಯ । ಚಕ್ರಥುಃ । ಉ । ಲೋಕಮ್ ॥ ಅಗ್ನೀಷೋಮೇತ್ಯಗ್ನೀ – ಸೋಮಾ । ಹವಿಷಃ । ಪ್ರಸ್ಥಿತಸ್ಯೇತಿ ಪ್ರ–ಸ್ಥಿತಸ್ಯ । ವೀತಮ್ । ಹರ್ಯತಮ್ । ವೃಷಣಾ । ಜುಷೇಥಾಮ್ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೀಷೋಮಾ.... ಶಂಯೋಃ ॥ | ಹಿಂದಿನ ಇಷ್ಟಿಯ ವಿಕಲ್ಪಿತಯಾಜ್ಯ |

---

**ಬ್ರಹ್ಮಣಾ ವಾವೃಧಾನಾ** = ಮಂತ್ರದಿಂದ/ಮಹತ್ತಾದ ಹವಿಸ್ಸಿನಿಂದ ವೃದ್ಧಿ ಹೊಂದುವ; **ಅಗ್ನೀಷೋಮಾ** = ಅಗ್ನೀಷೋಮರೇ! **ಉರುಮ್ ಯಜ್ಞಾಯ ಚಕ್ರಥುಃ** = ಯಜ್ಞಕ್ಕಾಗಿ ಲೋಕವನ್ನು ವಿಸ್ತೀರ್ಣವನ್ನಾಗಿ ಮಾಡಿರಿ; **ಉ**=ಮತ್ತು; **ಲೋಕಮ್ ಉರುಮ್ ಚಕ್ರಥುಃ** = ಫಲರೂಪವಾದ ಸ್ಥಾನವನ್ನೂ ವಿಸ್ತೀರ್ಣಗೊಳಿಸಿರಿ. **ವೃಷಣಾ** = ಇಷ್ಟಾರ್ಥಗಳನ್ನು ಸುರಿಸುವ; **ಅಗ್ನೀಷೋಮಾ** = ಅಗ್ನೀಷೋಮರೇ! **ಪ್ರಸ್ಥಿತಸ್ಯ** = ನಿಮಗೆ ಸಮರ್ಪಿಸಿದ; **ಹವಿಷಃ** = ಹವಿಸ್ಸನ್ನು; **ವೀತಮ್** = ಸ್ವೀಕರಿಸಿ; **ಹರ್ಯತಮ್** = ಸ್ವೀಕರಿಸಿದ ಹವಿಸ್ಸನ್ನು/ಹವಿಸ್ಸಿನ ಸಾರವನ್ನು; **ಜುಷೇಥಾಮ್** = ಚೆನ್ನಾಗಿ ಸೇವಿಸಿರಿ.

---

ನೀವು ಮಂತ್ರಸ್ತುತಿಗಳಿಂದ ವೃದ್ಧಿ ಹೊಂದುತ್ತೀರಿ. ಯಜಮಾನನಿಗೆ ಯಜ್ಞಭೂಮಿಯನ್ನು ವಿಸ್ತೀರ್ಣಗೊಳಿಸಿರಿ. ಫಲವನ್ನೂ ಅಧಿಕವಾಗಿ ಕೊಡಿರಿ. ನಾವು ಇಚ್ಛಿಸುವ ಬ್ರಹ್ಮವರ್ಚಸವನ್ನು ನೀಡಿರಿ.

**ಸುಶರ್ಮಾಣಾ ಸ್ವವಸಾ ಹಿ ಭೂತಮಥಾ ಧತ್ತಂ ಯಜಮಾನಾಯ ಶಂ ಯೋಃ ॥ *ಆ ಪ್ಯಾಯಸ್ವ**

---

ಸುಶರ್ಮಾಣೇತಿ ಸು–ಶರ್ಮಾಣಾ । ಸ್ವವಸೇತಿ ಸು–ಅವಸಾ । ಹಿ । ಭೂತಮ್ । ಅಥ । ಧತ್ತಮ್ । ಯಜಮಾನಾಯ । ಶಮ್ । ಯೋಃ ॥ **ಏತಿ** । ಪ್ಯಾಯಸ್ವ ।

---

| ಮಂತ್ರ | ವಿನಿಯೋಗ |
| --- | --- |
| **ಆ ಪ್ಯಾಯಸ್ವ..... ಸಂಗಥೇ ॥** | ಸೋಮದೇವತಾಕವಾಜಿನಯಾಗದ ಪುರೋನುವಾಕ್ಯೆಯ ಪ್ರತೀಕಗ್ರಹಣ. |

---

**ಸುಶರ್ಮಾಣಾ** = ನಮಗೆ ಒಳ್ಳೆಯ ಸುಖವನ್ನು ಕೊಡುವವರಾಗಿ; **ಸ್ವವಸಾ** = ಒಳ್ಳೆಯ ರಕ್ಷಣೆಯನ್ನು ಕೊಡುವವರಾಗಿ; **ಭೂತಮ್ ಹಿ** = ಆಗುವಿರಷ್ಟೆ. **ಅಥ** = ಅನಂತರ; **ಯಜಮಾನಾಯ** = ಯಜಮಾನನಿಗೆ; **ಶಮ್** = ಸುಖವನ್ನೂ; **ಯೋಃ** = ಪುತ್ರಾದಿಯೋಗವನ್ನೂ; **ಧತ್ತಮ್** = ಉಂಟುಮಾಡಿರಿ.

---

ಅಗ್ನೀಷೋಮರೇ! ನೀವು ಇಷ್ಟಾರ್ಥಗಳ ಮಳೆಯನ್ನೇ ಸುರಿಸತಕ್ಕವರು. ನಾವು ಸಮರ್ಪಿಸುವ ಹವಿಸ್ಸಿನ ಸಾರವನ್ನು ನೀವು ಸ್ವೀಕರಿಸಿ, ಚೆನ್ನಾಗಿ ಸೇವಿಸಿರಿ. ನಮಗೆ ಒಳ್ಳೆಯ ಸುಖವನ್ನೂ, ಒಳ್ಳೆಯ ರಕ್ಷಣೆಯನ್ನೂ ಕೊಡುವವರಾಗಿರಿ. ಯಜಮಾನನಿಗೆ ಸುಖವನ್ನೂ, ಪುತ್ರಾದಿಯೋಗವನ್ನೂ ಉಂಟುಮಾಡಿರಿ.

**ಪ್ರತೀಕಮಂತ್ರದ ತಾತ್ಪರ್ಯ :** ಎಲೈ! ಸೋಮನೇ! ನಿನ್ನ ಅನುಗ್ರಹದಿಂದ ಎಲ್ಲ ಕಡೆಗಳಿಂದಲೂ ವೀರ್ಯವು ಪ್ರಾಪ್ತವಾಗಲಿ. ನನ್ನನ್ನು ನೀನು ವೃದ್ಧಿಗೊಳಿಸು. ಅನ್ನಪ್ರಾಪ್ತಿಗೆ ಕಾರಣನಾಗಿ ನಪುಂಸಕತ್ವದೋಷವು ಸಂಭವಿಸದಂತೆ ಮಾಡು.

---

**ಪ್ರತೀಕಪಾಠ :**

**ಆ ಪ್ಯಾಯಸ್ವ ಸಮೇತು ತೇ ವಿಶ್ವತಸ್ಸೋಮ ವೃಷ್ಣಿಯಮ್ । ಭವಾ ವಾಜಸ್ಯ ಸಂಗಥೇ ॥**

---

* ತೈ. ಸಂ. 4.2.7

***ಸಂ ತೇ ॥ ಗಣಾನಾಂ ತ್ವಾ ಗಣಪತಿಗ್ಂ ಹವಾಮಹೇ**

**ಕವಿಂ ಕವೀನಾಮುಪಮಶ್ರವಸ್ತಮಮ್ ।**

---

**ಸಮಿತಿ** । ತೇ ॥ **ಗಣಾನಾಮ್** । ತ್ವಾ । ಗಣಪತಿಮಿತಿ ಗಣ–ಪತಿಮ್ । ಹವಾಮಹೇ ।

ಕವಿಮ್ । ಕವೀನಾಮ್ । ಉಪಮಶ್ರವಸ್ತಮಮಿತ್ಯುಪಮಶ್ರವಃ–ತಮಮ್ ॥

---

| ಮಂತ್ರ | ವಿನಿಯೋಗ |
| --- | --- |
| **ಸಂ ತೇ.... ನಿಧಿಷ್ವ ॥** | ವಾಜಿನಯಾಗದ ಯಾಜ್ಯೆಯ ಪ್ರತೀಕಗ್ರಹಣ |
| **ಗಣಾನಾಂ.... ಸಾದನಮ್ ॥** | ಗ್ರಾಮಕಾಮನಿಗೆ ವಿಹಿತವಾಗಿರುವ ಬ್ರಾಹ್ಮಣ ಸ್ಪತ್ಯೇಷ್ಟಿಯಲ್ಲಿನ ಪುರೋನುವಾಕ್ಯೆ |

---

❖ **ಬ್ರಹ್ಮಣಾಮ್ ಬ್ರಹ್ಮಣಸ್ಪತೇ** = ಸರ್ವಮಂತ್ರಗಳಿಗೂ ಒಡೆಯನೇ! **ಗಣಾನಾಮ್ ಗಣಪತಿಮ್** = ಎಲ್ಲ ದೇವಗಣಗಳಿಗೂ ಸ್ವಾಮಿಯಾದ; **ಕವೀನಾಮ್ ಕವಿಮ್** = ವಿದ್ವಾಂಸರ ಮಧ್ಯದಲ್ಲಿ ಶ್ರೇಷ್ಠವಿದ್ವಾಂಸನಾದ;

---

**ಪ್ರತೀಕಮಂತ್ರದ ತಾತ್ಪರ್ಯ :** ಕ್ಲೈಬ್ಯಪ್ರಾಪ್ತಿಗೆ ಕಾರಣವಾದ ಪಾಪವನ್ನು ಹೋಗಲಾಡಿಸುವ ಓ! ಸೋಮದೇವನೇ! ನಿನ್ನ ಅನುಗ್ರಹದಿಂದ ಹಾಲು ಮೊದಲಾದವುಗಳೂ, ಅನ್ನದ್ರವ್ಯಗಳೂ. ವೀರ್ಯವರ್ಧಕವಸ್ತುಗಳೂ ನನ್ನ ಬಳಿಗೆ ಅಧಿಕವಾಗಿ ಬರಲಿ. ನಮ್ಮ ಹವಿಸ್ಸುಗಳಿಂದ ವೃದ್ಧಿ ಹೊಂದುವ ಸೋಮನೇ ! ಅಮೃತಪ್ರಾಪ್ತಿಗಾಗಿ, ದೇವಲೋಕದಲ್ಲಿ ಉತ್ತಮವಾದ ಅನ್ನಗಳನ್ನು ಯಜಮಾನನಿಗಾಗಿ ಸ್ಥಾಪಿಸು.

---

* ತೈ. ಸಂ. 4.2.7

* ಸಂ ತೇ ಪಯಾಗ್ಂಸಿ ಸಮುಯಂತಿ ವಾಜಾಃ ಸಂ ವೃಷ್ಣಿಯಾನ್ಯಭಿಮಾತಿಷಾಹಃ ।

ಆಪ್ಯಾಯಮಾನೋ ಅಮೃತಾಯ ಸೋಮ ದಿವಿ ಶ್ರವಾಗ್ಂಸ್ಯುತ್ತಮಾ ನಿಧಿಷ್ವ ॥

**ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆ ನಃ**

**ಶೃಣ್ವನ್ನೂತಿಭಿಃ ಸೀದ ಸಾದನಮ್ ॥ ಸ ಇಜ್ಜನೇನ ಸ**

**ವಿಶಾ ಸ ಜನ್ಮನಾ ಸ ಪುತ್ರೈರ್ವಾಜಂ ಭರತೇ ಧನಾ ನೃಭಿಃ।**

**ದೇವಾನಾಂ ಯಃ ಪಿತರಮಾವಿವಾಸತಿ (೩)**

---

ಜ್ಯೇಷ್ಠರಾಜಮಿತಿ ಜ್ಯೇಷ್ಠ-ರಾಜಮ್ । ಬ್ರಹ್ಮಣಾಮ್ । ಬ್ರಹ್ಮಣಃ । ಪತೇ । ಏತಿ । ನಃ । ಶೃಣ್ವನ್ । ಊತಿಭಿರಿತ್ಯೂತಿ-ಭಿಃ । ಸೀದ । ಸಾದನಮ್ ॥ **ಸಃ** । ಇತ್ । ಜನೇನ । ಸಃ । ವಿಶಾ । ಸಃ । ಜನ್ಮನಾ । ಸಃ । ಪುತ್ರೈಃ । ವಾಜಮ್ । ಭರತೇ । ಧನಾ । ನೃಭಿರಿತಿ ನೃ-ಭಿಃ ॥ ದೇವಾನಾಮ್ । ಯಃ । ಪಿತರಮ್ । ಆವಿವಾಸತೀತ್ಯಾ-ವಿವಾಸತಿ ।

---

| ಮಂತ್ರ | ವಿನಿಯೋಗ |
|---|---|
| ಸ ಇಜ್ಜನೇನ... ಬ್ರಹ್ಮಣಸ್ಪತಿಮ್ ॥ | ಹಿಂದಿನ ಇಷ್ಟಿಯ ಯಾಜ್ಯಾನುವಾಕ್ಯೆ |

---

**ಉಪಮಶ್ರವಸ್ತಮಮ್** = ಎಲ್ಲ ಗುಣವಂತರಿಗೂ ಉಪಮಾನವಾಗುವಂತಹ ಶ್ರೇಷ್ಠ ಗುಣವಂತರಲ್ಲಿ ಅತಿಶ್ರೇಷ್ಠನಾದ; **ಜ್ಯೇಷ್ಠರಾಜಮ್** = ರಾಜರಲ್ಲಿ ಜ್ಯೇಷ್ಠನಾದ; **ತ್ವಾ ಹವಾಮಹೇ** = ನಿನ್ನನ್ನು (ನಮ್ಮ ಯಾಗಕ್ಕೆ) ಆಹ್ವಾನಿಸುತ್ತೇವೆ; **ನಃ ಶೃಣ್ವನ್** = ಇಂತಹ ನಮ್ಮ ಸ್ತೋತ್ರಗಳನ್ನು ಕೇಳಿದವನಾದ ನೀನು; **ಊತಿಭಿಃ** = ನಮ್ಮ ರಕ್ಷಣಾಕಾರಣಗಳಿಂದ ಯುಕ್ತನಾಗಿ; **ಸಾದನಮ್ ಆ ಸೀದ** = ಕುಳಿತಿರುವಿಕೆಯನ್ನು ಹೊಂದು; ❖ **ಯಃ** = ಯಾವ ಯಜಮಾನನು; **ದೇವಾನಾಮ್ ಪಿತರಮ್** = ದೇವತೆಗಳಿಗೆ ರಕ್ಷಕನಾದ; **ಬ್ರಹ್ಮಣಸ್ಪತಿಮ್** = ಬ್ರಹ್ಮಣಸ್ಪತಿಯನ್ನು; **ಶ್ರದ್ಧಾಮನಾಃ** = ಶ್ರದ್ಧೆಯಿಂದ ಕೂಡಿದ ಮನಸ್ಸುಳ್ಳವನಾಗಿ, **ಹವಿಷಾ** = ಪುರೋಡಾಶಾದಿಹವಿಸ್ಸುಗಳಿಂದ; **ಆವಿವಾಸತಿ** = ವಿಶೇಷವಾಗಿ ಪರಿಚರಿಸುತ್ತಾನೆಯೋ;

---

ಎಲೈ! ಸರ್ವಮಂತ್ರಸ್ವಾಮಿಯಾದ ಬ್ರಹ್ಮಣಸ್ಪತಿಯೇ! ನೀನು ಸರ್ವದೇವ ಗಣಸ್ವಾಮಿಯು. ವಿದ್ವಾಂಸರ ಮಧ್ಯದಲ್ಲಿ ಶ್ರೇಷ್ಠವಿದ್ವಾಂಸನು. ಸರ್ವಗುಣಸಂಪನ್ನನಾಗಿ

**ಶ್ರದ್ಧಾಮನಾ ಹವಿಷಾ ಬ್ರಹ್ಮಣಸ್ಪತಿಮ್ ॥ ಸ ಸುಷ್ಟುಭಾ ಸ ಋಕ್ವತಾ ಗಣೇನ ವಲಗ್ಂ ರುರೋಜ ಫಲಿಗಗ್ಂ ರವೇಣ ।**

---

ಶ್ರದ್ಧಾಮನಾ ಇತಿ ಶ್ರದ್ಧಾ-ಮನಾಃ । ಹವಿಷಾ । ಬ್ರಹ್ಮಣಃ । ಪತಿಮ್ ॥ **ಸಃ** । ಸುಷ್ಟುಭೇತಿ ಸು-ಸ್ತುಭಾ । ಸಃ । ಋಕ್ವತಾ । ಗಣೇನ । ವಲಮ್ । ರುರೋಜ । ಫಲಿಗಮ್ । ರವೇಣ ॥

---

| ಮಂತ್ರ | ವಿನಿಯೋಗ |
|---|---|
| **ಸ ಸುಷ್ಟುಭಾ.... ಉದಾಜತ್ ॥** | ವಿಕಲ್ಪಿತಯಾಜ್ಯೆ/ಉಪಹೋಮಮಂತ್ರ |

---

**ಸಃ ಇತ್** = ಆ ಯಜಮಾನನೇ; **ಜನೇನ** = ಭೃತ್ಯಾದಿಜನರಿಂದ ಯುಕ್ತವಾದ; **ವಾಜಮ್ ಭರತೇ** = ಅನ್ನವನ್ನು ಧರಿಸುತ್ತಾನೆ; **ಸಃ ವಿಶಾ** = ಆತನು ಕಂದಾಯವನ್ನು ಕೊಡುವ ಪ್ರಜೆಗಳಿಂದ ಯುಕ್ತವಾದ (ಅನ್ನವನ್ನು ಹೊಂದುತ್ತಾನೆ) **ಸಃ ಜನ್ಮನಾ** = ಅವನು ಬ್ರಾಹ್ಮಣಾದಿಜಾತಿಯುಕ್ತವಾದ (ಅನ್ನವನ್ನು ಹೊಂದುತ್ತಾನೆ); **ಸಃ ಪುತ್ರೈಃ** = ಅವನು ಮಕ್ಕಳಿಂದ ಕೂಡಿದ (ಅನ್ನವನ್ನು ಹೊಂದುತ್ತಾನೆ); **ಧನಾ ನೃಭಿಃ** ಭರತೇ = ಬಂಧುಜನಗಳಿಂದ ಕೂಡಿರುವ ದ್ರವ್ಯಗಳನ್ನೂ ಆ ಯಜಮಾನನು ಹೊಂದುತ್ತಾನೆ; ❖ **ಸಃ ಬೃಹಸ್ಪತಿಃ** = ಆ ಬೃಹಸ್ಪತಿದೇವನು, **ಸುಷ್ಟುಭಾ** = ಒಳ್ಳೆಯ *ಸ್ತೋಭಗಳಿಂದ ಯುಕ್ತವಾದ ಸಾಮಗಳಿಂದಲೂ, **ಸಃ ಋಕ್ವತಾ** = ಆತನು ಬಗೆಬಗೆಯಾದ ಋಕ್ಕುಗಳುಳ್ಳ ಸ್ತೋತ್ರಗಳಿಂದಲೂ **ಗಣೇನ ರವೇಣ** = ಧ್ವನಿಯುಕ್ತವಾದ ಮಂತ್ರಸಮೂಹದಿಂದಲೂ ಸ್ತುತನಾಗಿ, **ವಲಮ್ ಫಲಿಗಮ್ ರುರೋಜ** = ಯಜಮಾನನ ಫಲಪ್ರಾಪ್ತಿಗೆ ಪ್ರತಿಬಂಧಕವಾದ ಪ್ರಬಲವಾದ ಪಾಪಗಳನ್ನು ಹೋಗಲಾಡಿಸಿದನು;

---

ಬೇರೆಯವರಿಗೆ ಹೋಲಿಕೆಯಾಗಬಲ್ಲವರಲ್ಲಿ ಶ್ರೇಷ್ಠನು; ಇಂತಹ ನಿನ್ನನ್ನು ನಮ್ಮ ಯಾಗಕ್ಕಾಗಿ ಆಹ್ವಾನಿಸುತ್ತಿದ್ದೇವೆ. ನಮ್ಮ ಸ್ತೋತ್ರವನ್ನು ಆಲಿಸು. ನಮಗೆ ರಕ್ಷಣೆಯನ್ನು ನೀಡುವುದಕ್ಕಾಗಿ ಪೀಠದಲ್ಲಿ ಕುಳಿತುಕೋ. ನಮಗೆ ಗ್ರಾಮಾಧಿಪತ್ಯವನ್ನು ಕರುಣಿಸು.

---

* ಸಾಮಗಾನದಲ್ಲಿ ಉಪಯೋಗಿಸುವ ಅಕ್ಷರಗಳು ಅಥವಾ ಪದಗಳು. ಇವು ಸಾಮಾವಯವ ಗಳು.

# ಬೃಹಸ್ಪತಿರುಸ್ರಿಯಾ ಹವ್ಯಸೂದಃ ಕನಿಕ್ರದದ್ವಾವಶತೀರು ದಾಜತ್ । *ಮರುತೋ ಯದ್ಧ ವೋ ದಿವೋ

ಬೃಹಸ್ಪತಿಃ । ಉಸ್ರಿಯಾಃ । ಹವ್ಯಸೂದ ಇತಿ ಹವ್ಯ–ಸೂದಃ । ಕನಿಕ್ರದತ್ । ವಾವಶತೀಃ । ಉದಿತಿ । ಆಜತ್ ॥ **ಮರುತಃ** । ಯತ್ । ಹ । ವಃ । ದಿವಃ ॥

| ಮಂತ್ರ | ವಿನಿಯೋಗ |
|---|---|
| **ಮರುತಃ..... ಗಂತನ ॥** | ಫಲವಿಶೇಷಕ್ಕಾಗಿ ಈ ಯಾಗದಲ್ಲಿ ವಿಹಿತವಾದ ಮರುದ್ದೇವತಾಕಪುರೋನುವಾಕ್ಯೆಯ ಪ್ರತೀಕಗ್ರಹಣ. |

[ಆ ಬೃಹಸ್ಪತಿಯು] **ಹವ್ಯಸೂದಃ** = ಹವಿಸ್ಸನ್ನು ಸೇವಿಸುವವನಾಗಿ; **ಕನಿಕ್ರದತ್**= ಹವಿಸ್ಸು ಚೆನ್ನಾಗಿದೆಯೆಂದು ಪ್ರಶಂಸಾಯುಕ್ತವಾಗಿ ಧ್ವನಿ ಮಾಡಿದನು; [ಆತನು] **ವಾವಶತೀಃ** = ಕರುಗಳಿಗೆ ಹಾಲನ್ನು ಕೊಡಲು ಕೂಗಿಕೊಳ್ಳುತ್ತಿರುವ; **ಉಸ್ರಿಯಾಃ** = ಗೋವುಗಳನ್ನು; **ಉತ್ ಆಜತ್** = ಯಜಮಾನನ ಮನೆಗೆ ಬರುವಂತೆ ಪ್ರೇರಿಸುತ್ತಾನೆ.

ಬ್ರಹ್ಮಣಸ್ಪತಿಯು ದೇವತೆಗಳ ರಕ್ಷಕನು. ಆತನನ್ನು ಶ್ರದ್ಧೆಯಿಂದ ಹವಿಸ್ಸುಗಳನ್ನು ಸಮರ್ಪಿಸಿ, ಆರಾಧಿಸುವವನು ಭೃತ್ಯರಿಂದಲೂ, ಪ್ರಜೆಗಳಿಂದಲೂ, ಬ್ರಾಹ್ಮಣಾದಿ ಜಾತಿಗಳಿಂದಲೂ, ಮಕ್ಕಳಿಂದಲೂ, ಬಂಧುಜನರಿಂದಲೂ ಯುಕ್ತವಾದ ಅನ್ನವನ್ನೂ, ಧನವನ್ನೂ ಪಡೆಯುತ್ತಾನೆ. ಆತನ ಅನುಗ್ರಹದಿಂದ ಇವೆಲ್ಲವೂ ಆ ಗ್ರಾಮಸ್ವಾಮಿಯಾದ ಯಜಮಾನನಿಗೆ ಲಭಿಸಲಿ.

ಬೃಹಸ್ಪತಿದೇವನು ಸ್ತೋಭಗಳಿಂದ ಯುಕ್ತವಾದ ಸಾಮಗಳಿಂದಲೂ, ಋಗ್ವೇದದ ದೇವತಾಸ್ತಾವಕಮಂತ್ರಗಳಾದ ಶಸ್ತ್ರಗಳಿಂದಲೂ, ಯಜುರ್ಮಂತ್ರಗಳಿಂದಲೂ ಸ್ತುತನಾಗಿ ಯಜಮಾನನ ಫಲಪ್ರಾಪ್ತಿಗೆ ಅಡ್ಡಿಯಾದ ಪ್ರಬಲಪ್ರತಿಬಂಧಕಗಳನ್ನು ನಿವಾರಿಸುತ್ತಾನೆ. ಹವಿರ್ಭಾಗವನ್ನು ಸ್ವೀಕರಿಸಿ ತೃಪ್ತನಾಗಿ, ಪ್ರಶಂಸಿಸುತ್ತಾ ಕರುಗಳಿಗೆ ಹಾಲು ಕುಡಿಸಲು ಯಜಮಾನನ ಮನೆಗೆ ಬರುವಂತಹ ಪಶುಸಂಪತ್ತನ್ನು ಕರುಣಿಸುತ್ತಾನೆ. ಆತನನ್ನು ಗ್ರಾಮಸ್ವಾಮಿಯನ್ನಾಗಿಯೂ ಮಾಡುತ್ತಾನೆ.

* ತೈ. ಸಂ. 1.5.11

**ಯಾ ವಃ ಶರ್ಮ || ಅರ್ಯಮಾಽಽಯಾತಿ ವೃಷಭ**

**ಸ್ತುವಿಷ್ಮಾನ್ದಾತಾ ವಸೂನಾಂ ಪುರುಹೂತೋ ಅರ್ಹನ್ತ್ಸ್ |**

---

**ಯಾ** | ವಃ | ಶರ್ಮ || **ಅರ್ಯಮಾ** | ಏತಿ | ಯಾತಿ | ವೃಷಭಃ | ತುವಿಷ್ಮಾನ್ | ದಾತಾ | ವಸೂನಾಮ್ | ಪುರುಹೂತ ಇತಿ ಪುರು–ಹೂತಃ | ಅರ್ಹನ್ತ್ಸ್ ||

---

| ಮಂತ್ರ | ವಿನಿಯೋಗ |
| --- | --- |
| ***ಯಾ.... ಸುವೀರಮ್** \|\| | ಫಲವಿಶೇಷಕ್ಕಾಗಿ ವಿಹಿತವಾದ ಯಾಜ್ಯೆಯ ಪ್ರತೀಕಗ್ರಹಣ |
| **ಅರ್ಯಮಾ.... ದಧಾತು** \|\| | ಸುವರ್ಗಕಾಮನಿಗೆ ವಿಹಿತವಾದ ಅರ್ಯಮೇಷ್ಟಿಯ ಪುರೋನುವಾಕ್ಯೆ. |

---

✚ **ಅರ್ಯಮಾ** = ಆದಿತ್ಯದೇವನು; **ಆಯಾತಿ** = ಬರುತ್ತಾನೆ/ಬರಲಿ; ಸಃ = ಅವನು; **ವೃಷಭಃ** = ಇಷ್ಟಾರ್ಥಗಳ ಮಳೆಯನ್ನೇ ಸುರಿಸುವವನು; **ತುವಿಷ್ಮಾನ್** = ಮಹಾ ಬಲಶಾಲಿಯು; **ವಸೂನಾಮ್ ದಾತಾ** = ಐಶ್ವರ್ಯಗಳನ್ನು ಕೊಡತಕ್ಕವನು; **ಪುರುಹೂತಃ** = ಹಲವು ಯಾಗಗಳಲ್ಲಿ ಆಮಂತ್ರಿಸಲ್ಪಡತಕ್ಕವನು; **ಅರ್ಹನ್** = ಸ್ವರ್ಗವನ್ನು ಕರುಣಿಸಲು ಅರ್ಹನು;

---

**ಪ್ರತೀಕಮಂತ್ರಗಳ ತಾತ್ಪರ್ಯ** : ಮರುದ್ದೇವತೆಗಳೇ ! ಸುಖವನ್ನು ಇಚ್ಛಿಸುವವರಾಗಿ ನಿಮ್ಮನ್ನು ಆಹ್ವಾನಿಸುತ್ತಿದ್ದೇವೆ. ನೀವು ವೇಗನೇ ಸ್ವರ್ಗದಿಂದ ನಮ್ಮ ಯಾಗದೇಶಕ್ಕೆ ಬನ್ನಿರಿ. ಪ್ರಜೆಗಳು ಬ್ರಾಹ್ಮಣಾಧೀನರಾಗಿರುವಂತೆ ಮಾಡಿರಿ.

---

* **ತೈ. ಸಂ.** 1.5.11

* ಸುವರ್ಗಕಾಮನಿಗೆ ವಿಹಿತವಾದ ಈ ಇಷ್ಟಿಯ ಮಂತ್ರದಲ್ಲಿ ಸೂರ್ಯನನ್ನು **'ಗೋತ್ರಭಿತ್'** 'ವಜ್ರಬಾಹು' ಎಂಬುದಾಗಿ ಇಂದ್ರನಂತೆ ಸ್ತುತಿಸಲಾಗಿದೆ.

'ಮಾಹಾಭಾಗ್ಯಾದ್ದೇವತಾಯಾಃ' ಏಕ ಆತ್ಮಾ ಬಹುಧಾ ಸ್ತೂಯತೇ' ಎಂಬ ನಿರುಕ್ತದ ವಚನದಂತೆ [ನಿರುಕ್ತ, ದೈವತ ಕಾಂಡ 7.1.4] ಒಂದೇ ದೇವತೆಯನ್ನು ಅನೇಕ ಪ್ರಕಾರವಾಗಿ ಸ್ತುತಿಸುವುದು ಶ್ರುತಿಯ ಕ್ರಮವಿದೆ.

ಸಹಸ್ರಾಕ್ಷೋ ಗೋತ್ರಭಿದ್ವಜ್ರಬಾಹುರಸ್ಮಾಸು ದೇವೋ ದ್ರವಿಣಂ ದಧಾತು ॥ ಯೇ ತೇಽರ್ಯಮನ್ಬಹವೋ ದೇವಯಾನಾಃ ಪಂಥಾನೋ [...ನಃ (೪) ರಾಜ...] ರಾಜನ್ದಿವ

ಸಹಸ್ರಾಕ್ಷ ಇತಿ ಸಹಸ್ರ–ಅಕ್ಷಃ । ಗೋತ್ರಭಿದಿತಿ ಗೋತ್ರ–ಭಿತ್ । ವಜ್ರಬಾಹುರಿತಿ ವಜ್ರ–ಬಾಹುಃ । ಅಸ್ಮಾಸು । ದೇವಃ । ದ್ರವಿಣಮ್ । ದಧಾತು ॥ **ಯೇ** । ತೇ । ಅರ್ಯಮನ್ನ್ । ಬಹವಃ । ದೇವಯಾನಾ ಇತಿ ದೇವ–ಯಾನಾಃ । ಪಂಥಾನಃ । ರಾಜನ್ನ್ । ದಿವಃ ।

| ಮಂತ್ರ | ವಿನಿಯೋಗ |
|---|---|
| ಯೇ ತೇ...... ಚತುಷ್ಪದೇ ॥ | *ಆದಿತ್ಯಯಾಗದ ಯಾಜ್ಯಾನುವಾಕ್ಯೆ |

**ಸಹಸ್ರಾಕ್ಷಃ** = ಸಾವಿರ ಕಣ್ಣುಳ್ಳವನು; **ಗೋತ್ರಭಿತ್** = ಹಾರಾಡುತ್ತಿದ್ದ ಬೆಟ್ಟಗಳ ರೆಕ್ಕೆಯನ್ನು ಕತ್ತರಿಸಿದವನು; **ವಜ್ರಬಾಹುಃ** = ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವವನು; ಇಂತಹ **ದೇವಃ** = ಇಂದ್ರಸ್ವರೂಪನಾದ ಆದಿತ್ಯನು; **ಅಸ್ಮಾಸು** = ನಮ್ಮಲ್ಲಿ; **ದ್ರವಿಣಮ್ ದಧಾತು** = ಧನವನ್ನು ಕೊಡಲಿ/ಸ್ವರ್ಗರೂಪಧನವನ್ನು ಕೊಡಲಿ; ✤ **ರಾಜನ್ ಅರ್ಯಮನ್** = ರಾಜನಾದ ಆದಿತ್ಯನೇ ! **ತೇ** = ನಿನಗೆ; **ಯೇ ಬಹವಃ** = ಯಾವ ಅನೇಕವಾದ; **ದೇವಯಾನಾಃ ಪಂಥಾನಃ** = ದೇವತೆಗಳು ಸಂಚರಿಸುವ ಮಾರ್ಗಗಳು;

ಎಲೈ! ಮರುದ್ದೇವತೆಗಳೇ! ನಿಮ್ಮನ್ನು ಪ್ರಾರ್ಥಿಸುವ ಯಜಮಾನನಿಗೆ ಕೊಡಲು ಮೂರು ಲೋಕಗಳಲ್ಲಿಯೂ ಸ್ಥಾನಗಳು ಇವೆ. ಹವಿಸ್ಸನ್ನು ನಿಮಗೆ ಸಮರ್ಪಿಸುವ ಯಜಮಾನನಿಗೆ ಅವುಗಳನ್ನು ಕೊಡಿರಿ. ನೀವು ಕಾಮನೆಗಳ ಮಳೆಯನ್ನು ಸುರಿಸಬಲ್ಲವರು. ನಮಗೆ ಪುತ್ರಾದಿಸಂಪತ್ತನ್ನು ಕೊಡಿರಿ. ಯಜಮಾನನ ಕಾಮನೆಗಳನ್ನು ಪೂರ್ಣಗೊಳಿಸಿರಿ.

* ಸುವರ್ಗಕಾಮನಂತೆಯೇ ತನ್ನ ಪ್ರಜೆಗಳು ದಾನವನ್ನೀಯುವಂತಾಗಬೇಕೆಂದು ಬಯಸುವವನೂ ಜನರ ಬಳಿ ಕ್ಷೇಮವಾಗಿ ತೆರಳಬಯಸುವವನೂ ಈ ಇಷ್ಟಿಯನ್ನು ಅನುಷ್ಠಿಸಬೇಕು. ಆ ಇಷ್ಟಿಗೂ ಇವೇ ಯಾಜ್ಯಾ–ಪುರೋನುವಾಕ್ಯೆಗಳು. ಅದಕ್ಕೆ ತಕ್ಕಂತೆ ಮಂತ್ರಾರ್ಥವನ್ನು ವ್ಯತ್ಯಾಸ ಮಾಡಬೇಕು.

**ಆ ಚರಂತಿ ॥ ತೇಭಿರ್ನೋ ದೇವ ಮಹಿ ಶರ್ಮ**

**ಯಚ್ಛ ಶಂ ನ ಏಧಿ ದ್ವಿಪದೇ ಶಂ ಚತುಷ್ಪದೇ ।**

**ಬುಧ್ನಾದಗ್ರಮಂಗಿರೋಭಿರ್ಗೃಣಾನೋ ವಿ**

**ಪರ್ವತಸ್ಯ ದೃಗ್ಂಹಿತಾನ್ಯೈರತ್ ।**

---

ಆಚರಂತೀತ್ಯಾ – ಚರಂತಿ । ತೇಭಿಃ । ನಃ । ದೇವ । ಮಹಿ । ಶರ್ಮ । ಯಚ್ಛ । ಶಮ್ । ನಃ । ಏಧಿ । ದ್ವಿಪದ ಇತಿ ದ್ವಿ–ಪದೇ । ಶಮ್ । ಚತುಷ್ಪದ ಇತಿ ಚತುಃ–ಪದೇ ॥ **ಬುಧ್ನಾತ್** ॥ ಅಗ್ರಮ್ । ಅಂಗಿರೋಭಿರಿತ್ಯಂಗಿರಃ – ಭಿಃ । ಗೃಣಾನಃ । ವೀತಿ । ಪರ್ವತಸ್ಯ । ದೃಗ್ಂಹಿತಾನಿ । ಐರತ್ ॥

---

| ಮಂತ್ರ | ವಿನಿಯೋಗ |
|---|---|
| **ಬುಧ್ನಾತ್..... ಚಕಾರ ॥** | ಅನುಜಾವರನಿಗೆ ವಿಹಿತವಾದ ಐಂದ್ರೇಷ್ಟಿಯ ಪುರೋನುವಾಕ್ಯೆ |

---

**ಆ ದಿವಃ ಚರಂತಿ** = ಸ್ವರ್ಗದ ಪರ್ಯಂತವಾಗಿ ಹೋಗಿ ಬರಲು ತಕ್ಕವುಗಳೋ; [ನೀನು] **ತೇಭಿಃ** = ಆ ಮಾರ್ಗಗಳಿಂದ ಬಂದು; **ದೇವ** = ಆದಿತ್ಯದೇವನೇ! **ನಃ ಮಹಿ ಶರ್ಮ ಯಚ್ಛ** = ನಮಗೆ ಹೆಚ್ಚಾದ ಸುಖವನ್ನು ಕೊಡು; **ನಃ ದ್ವಿಪದೇ ಶಮ್ ಏಧಿ** = ನಮಗೆ ಸಂಬಂಧಿಸಿದ ಪುತ್ರಾದಿಗಳಿಗೆ ಸುಖವನ್ನು ಕೊಡುವವನಾಗು; **ಚತುಷ್ಪದೇ ಶಮ್** ಏಧಿ = ಗವಾದಿಪಶುಗಳಿಗೂ ಸುಖಕರನಾಗು. ** **ಬುಧ್ನಾತ್ ಅಗ್ರಮ್** = ಕರ್ಮಾರಂಭದಿಂದ ಸಮಾಪ್ತಿಪರ್ಯಂತವಾಗಿ; **ಅಂಗಿರೋಭಿಃ ಗೃಣಾನಃ** = ಅಂಗಿರೋಮಹರ್ಷಿಗಳಿಂದಲೂ, ಅಂಗಿರಸ್ಸದೃಶರಾದ ಋತ್ವಿಕ್ಕುಗಳಿಂದಲೂ ಸ್ತುತಿಸಲ್ಪಡುತ್ತಾ; **ಪರ್ವತಸ್ಯ ದೃಗ್ಂಹಿತಾನಿ** = ಪರ್ವತದಂತೆ ಸರ್ವಾಧಾರನಾದ ರಾಜನ ವಿಷಯದಲ್ಲಿ ಬೇರೆಯವರು ಮಾಡಿದ ದ್ರೋಹಗಳನ್ನು; **ಇಂದ್ರಃ ವಿ ಐರತ್** = ಇಂದ್ರನು ವಿಫಲ ಮಾಡಿದನು;

---

ಸ್ವರ್ಗಾಧಿಪತಿಯೆಂದು ಇಂದ್ರನು ಪ್ರಸಿದ್ಧನಾಗಿರುವುದರಿಂದ ಆದಿತ್ಯನನ್ನು ಸ್ವರ್ಗಪ್ರದನಾದ ಇಂದ್ರನೆಂದು ವರ್ಣಿಸಲಾಗಿದೆ. ಆದಿತ್ಯನು ನಮ್ಮ ಯಾಗಕ್ಕೆ ಬರಲಿ.

# ರುಜದ್ರೋಧಾಗ್ಂಸಿ ಕೃತ್ರಿಮಾಣ್ಯೇಷಾಗ್ಂ ಸೋಮಸ್ಯ ತಾ ಮದ ಇಂದ್ರಶ್ಚಕಾರ ॥ ಬುಧ್ನಾದಗ್ರೇಣ ವಿಮಿಮಾಯ ಮಾನೈರ್ವಜ್ರೇಣ

ರುಜತ್ । ರೋಧಾಗ್ಂಸಿ । ಕೃತ್ರಿಮಾಣಿ । ಏಷಾಮ್ । ಸೋಮಸ್ಯ । ತಾ । ಮದೇ । ಇಂದ್ರಃ । ಚಕಾರ ॥ ಬುಧ್ನಾತ್ । ಅಗ್ರೇಣ । ವೀತಿ । ಮಿಮಾಯ । ಮಾನೈಃ । ವಜ್ರೇಣ ।

| ಮಂತ್ರ | ವಿನಿಯೋಗ |
|---|---|
| ಬುಧ್ನಾತ್..... ಚಕಾರ ॥ | ಹಿಂದಿನ ಐಂದ್ರಯಾಗದ ಯಾಜ್ಯೆ |

**ಏಷಾಮ್** = ಈ ವಿರೋಧಿಗಳ; **ಕೃತ್ರಿಮಾಣಿ ರೋಧಾಗ್ಂಸಿ** = ಕೃತ್ರಿಮವಾಗಿ ಮಾಡಿರುವ ದಡದಂತಿರುವ ಪ್ರತಿಬಂಧಕಗಳನ್ನು; **ರುಜತ್** = ನಾಶಪಡಿಸುತ್ತಾ [ಇಂದ್ರನು ಹೀಗೆ ಅಗ್ರಸ್ಥಿತಿಯನ್ನು ಪಡೆದನು]. ಪರ್ವತಸ್ಯ ದೃಗ್ಂಹಿತಾನಿ ಐರತ್= ಮೇಘವು* ನೀರನ್ನು ಸುರಿಸುವುದಕ್ಕೆ ಅಡ್ಡಿಯಾಗಿರುವ ಪ್ರತಿಬಂಧಕಗಳನ್ನು ಹೋಗಲಾಡಿಸಿ, ನೀರು ಸುರಿಯುವಂತೆ ಮಾಡಿದನು). **ಇಂದ್ರಃ** = ಇಂದ್ರದೇವನು; **ಸೋಮಸ್ಯ ಮದೇ** = ಸೋಮಪಾನದಿಂದ ಮದವನ್ನು ಹೊಂದಿದಾಗ; **ತಾ** = ಆ ಕಾರ್ಯಗಳನ್ನು; **ಚಕಾರ** = ಆಯಾಸವಿಲ್ಲದೆ ಮಾಡಿದನು. ✤ **ಇಂದ್ರಃ** = ಇಂದ್ರನು; **ಬುಧ್ನಾತ್ ಅಗ್ರೇಣ** = ನದಿಯ ಮೂಲದಿಂದ ತುದಿಯವರೆಗೂ; **ಮಾನೈಃ ವಿ ಮಿಮಾಯ** = ಅಳತೆಯ ಕೋಲುಗಳಿಂದ ನದಿಗಳ ಮಾರ್ಗಗಳನ್ನು ಗೊತ್ತುಪಡಿಸಿದನು; **ವಜ್ರೇಣ** = ವಜ್ರಾಯುಧದಿಂದ;

ಇಂದ್ರನು ಇಷ್ಟಾರ್ಥಗಳನ್ನು ಕೊಡತಕ್ಕವನು. ಬಲಶಾಲಿಯು, ಧನದಾತನು, ಸ್ವರ್ಗವನ್ನೂ ಕರುಣಿಸತಕ್ಕವನು. ವಜ್ರಾಯುಧವನ್ನು ಧರಿಸಿದವನು. ಸಾವಿರ ಕಣ್ಣುಳ್ಳವನು. ಪರ್ವತಭೇದಕನು. ಇಂತಹ ದೇವನು ನಮಗೆ ಧನವನ್ನು ಕರುಣಿಸಲಿ. ಅರ್ಯಮದೇವನೇ! ನೀನು ರಾಜನು. ನೀನು ಸ್ವರ್ಗದವರೆಗೂ ಹೋಗಿಬರಲು ದೇವತೆಗಳು ಸಂಚರಿಸತಕ್ಕ ಹಲವು ಮಾರ್ಗಗಳಿವೆ. ಆ ಮಾರ್ಗಗಳ ಮೂಲಕ ನಮ್ಮ ಯಾಗಶಾಲೆಗೆ ಬಂದು ಹವಿಸ್ಸನ್ನು ಸ್ವೀಕರಿಸಿ, ಪ್ರಸನ್ನನಾಗು. ನಮಗೆ ಧನವನ್ನು ಕೊಡು. ಪುತ್ರಮಿತ್ರಾದಿಗಳೂ ಗವಾದಿಪಶುಗಳೂ

* ಪರ್ವತಶಬ್ದಕ್ಕೆ ಮೇಘವೆಂದೂ ಅರ್ಥವಿದೆ.

**ಖಾನ್ಯತೃಣನ್ನದೀನಾಮ್ । ವೃಥಾಽಸೃಜತ್ಪಥಿಭಿರ್ದೀರ್ಘ**

**ಯಾಥ್ಯೈಃ ಸೋಮಸ್ಯ ತಾ ಮದ ಇಂದ್ರಶ್ಚಕಾರ ॥ (೫)**

**ಪ್ರ ಯೋ ಜಜ್ಞೇ ವಿದ್ವಾಗ್‌ಂ ಅಸ್ಯ ಬಂಧುಂ**

---

ಖಾನಿ । ಅತೃಣತ್ । ನದೀನಾಮ್ ॥ ವೃಥಾ । ಅಸೃಜತ್ । ಪಥಿಭಿರಿತಿ ಪಥಿ–ಭಿಃ । ದೀರ್ಘಯಾಥ್ಯೈರಿತಿ ದೀರ್ಘ–ಯಾಥ್ಯೈಃ । ಸೋಮಸ್ಯ । ತಾ । ಮದೇ । ಇಂದ್ರಃ । ಚಕಾರ ॥ **ಪ್ರೇತಿ** । ಯಃ । ಜಜ್ಞೇ । ವಿದ್ವಾನ್ । ಅಸ್ಯ । ಬಂಧುಮ್ ।

---

| ಮಂತ್ರ | ವಿನಿಯೋಗ |
|---|---|
| ಪ್ರಯೋ..... ತಸ್ಥೌ ॥ | ಬ್ರಾಹ್ಮಣನು ಶ್ರೇಷ್ಠತೆಗಾಗಿ ಮಾಡುವ ಬಾರ್ಹಸ್ಪತ್ಯಯಾಗದ ಪುರೋನುವಾಕ್ಯೆ* |

**ನದೀನಾಮ್** = ನದಿಗಳ; **ಖಾನಿ ಅತೃಣತ್** = [ಪ್ರತಿಬಂಧಕವಾದ] ಪರ್ವತಾದಿಗಳನ್ನು ದೂರ ಮಾಡಿದನು. **ದೀರ್ಘಯಾಥ್ಯೈಃ ಪಥಿಭಿಃ** = ತುಂಬ ದೂರ ಹರಿಯುವ ನದಿಗಳ ಮಾರ್ಗಗಳನ್ನು; **ವೃಥಾ ಅಸೃಜತ್** = (ಉಗುರಿನಿಂದ ಗರಿಕೆಯನ್ನು ಚಿವುಟಿ ಹಾಕುವಷ್ಟು) ಸುಲಭವಾಗಿ ಕಲ್ಪಿಸಿದನು; **ಸೋಮಸ್ಯ ಮದೇ** = ಸೋಮಪಾನದಿಂದ ಮದವನ್ನು ಹೊಂದಿದಾಗ; **ತಾ ಚಕಾರ** = [ಇಂದ್ರನು] ಆ ಕಾರ್ಯಗಳನ್ನು ಆಯಾಸವಿಲ್ಲದೆ ಮಾಡಿದನು. ***ಯಃ**=ಯಾವ ಬೃಹಸ್ಪತಿಯು; **ವಿದ್ವಾನ್** = ಎಲ್ಲವನ್ನೂ ತಿಳಿದವನೋ ಅವನು; **ಅಸ್ಯ ಬಂಧುಮ್** = ಈ ಯಜಮಾನನಿಗೆ ಸಮಾನರಲ್ಲಿ ಅನುಕೂಲನಾದವನನ್ನು; **ಪ್ರ ಜಜ್ಞೇ** = ಚೆನ್ನಾಗಿ ತಿಳಿದಿರುತ್ತಾನೆ.

---

ಸುಖವಾಗಿ ಇರುವಂತೆ ಮಾಡು.

ಅಂಗಿರೋಮಹರ್ಷಿಯಂತಿರುವ ಋತ್ವಿಜರು ಯಾಗಾರಂಭದಿಂದ ಸಮಾಪ್ತಿಯ ವರೆಗೂ, ಇಂದ್ರನನ್ನು ಸ್ತುತಿಸುತ್ತಾರೆ. ಇಂದ್ರನು ಪರ್ವತದಂತೆ ಸರ್ವಾಧಾರನಾದ ರಾಜನ್ಯನಿಗೆ ಇತರರು ಒಡ್ಡುವ ಪ್ರತಿಬಂಧಕಗಳನ್ನು ದೂರ ಮಾಡುತ್ತಾನೆ. ಸೋಮರಸವನ್ನು ಪಾನ ಮಾಡಿ ತೃಪ್ತನಾದ ಇಂದ್ರನು ಶ್ರಮವಿಲ್ಲದೆ ಇಂತಹ ಕಾರ್ಯಗಳನ್ನು ಮಾಡುತ್ತಾನೆ.

---

* 'ಬುಧ್ನವತೀ ಅಗ್ರವತೀ ಯಾಜ್ಯಾನುವಾಕ್ಯೇ ಭವತಃ' ಎಂದು ಬ್ರಾಹ್ಮಣವಿದೆ. ಈ ಮಂತ್ರದಲ್ಲಿ 'ಬುಧ್ನ' 'ಅಗ್ರ' ಶಬ್ದಗಳು ಇಲ್ಲದಿರುವುದರಿಂದ ಇದು ಉಪಹೋಮಮಂತ್ರ ಎಂದು ಕೆಲವರ ಅಭಿಪ್ರಾಯ.

**ವಿಶ್ವಾನಿ ದೇವೋ ಜನಿಮಾ ವಿವಕ್ತಿ। ಬ್ರಹ್ಮ ಬ್ರಹ್ಮಣ**

**ಉಜ್ಜಭಾರ ಮಧ್ಯಾನ್ನೀಚಾದುಚ್ಚಾ ಸ್ವಧಯಾಽಭಿಪ್ರತಸ್ಥೌ॥**

---

ವಿಶ್ವಾನಿ। ದೇವಃ। ಜನಿಮಾ। ವಿವಕ್ತಿ॥ ಬ್ರಹ್ಮ। ಬ್ರಹ್ಮಣಃ। ಉದಿತಿ। ಜಭಾರ। ಮಧ್ಯಾತ್।

ನೀಚಾ। ಉಚ್ಚಾ। ಸ್ವಧಯೇತಿ ಸ್ವ-ಧಯಾ। ಅಭಿ। ಪ್ರೇತಿ। ತಸ್ಥೌ॥

---

ಹೇಗೆಂದರೆ **ದೇವಃ** = ಬೃಹಸ್ಪತಿದೇವನು; **ವಿಶ್ವಾನಿ ಜನಿಮಾ** = ಎಲ್ಲಪ್ರಾಣಿಗಳ ಜನ್ಮ ವಿಷಯಗಳನ್ನೂ; **ವಿವಕ್ತಿ**= ಪುನಃ ಪುನಃ ಹೇಳಬಲ್ಲನು. [ಆ ಬೃಹಸ್ಪತಿಯು]; **ಬ್ರಹ್ಮಣಃ** = ವೇದದ; **ಮಧ್ಯಾತ್, ನೀಚಾ, ಉಚ್ಚಾ** = ಮಧ್ಯಭಾಗದಿಂದಲೂ, ಕೆಳಭಾಗದಿಂದಲೂ/ ಪ್ರಾರಂಭಭಾಗದಿಂದಲೂ, ಮೇಲ್ಭಾಗದಿಂದಲೂ/ಕೊನೆಯ ಭಾಗದಿಂದಲೂ; **ಬ್ರಹ್ಮ**= ವಿಸ್ತಾರವಾದ ಕರ್ಮವನ್ನು; **ಉಜ್ಜಭಾರ** = ಮೇಲಕ್ಕೆ ತೆಗೆದನು. **ಸ್ವಧಯಾ** = ಶ್ರೇಷ್ಠತೆಯನ್ನು ಕೊಡಬಲ್ಲ ಅಮೃತದೊಡನೆ; **ಅಭಿ ಪ್ರತಸ್ಥೌ** = ಯಜಮಾನನ ಬಳಿಗೆ ಬಂದನು.

---

ಮೇಘವು ಮಳೆಯನ್ನು ಸುರಿಸಲು ಇರುವ ತಡೆಗಳನ್ನು ದೂರ ಮಾಡುತ್ತಾನೆ. ಇಂತಹ ಇಂದ್ರನು ಸಮಾನದೇವತೆಗಳಲ್ಲಿ ಶ್ರೇಷ್ಠತೆಯನ್ನು ಹೊಂದಿರುವುದರಲ್ಲಿ ಆಶ್ಚರ್ಯವೇನಿದೆ? ಅವನು ಸಮಾನರಲ್ಲಿ ಶ್ರೇಷ್ಠತೆಯನ್ನು ಉಂಟುಮಾಡಲಿ.

ಇಂದ್ರನು ನದೀಮೂಲದಿಂದ ನದಿಯ ಕೊನೆಯವರೆಗೂ ಮಾನದಂಡಗಳಿಂದ ಮಾರ್ಗಗಳನ್ನು ಗೊತ್ತು ಮಾಡಿದನು. ತನ್ನ ವಜ್ರಾಯುಧದಿಂದ ತಡೆಯಾಗಿರುವ ಪರ್ವತಾದಿಗಳನ್ನು ಭೇದಿಸಿ, ನದಿಗಳಿಗೆ ಹರಿಯಲು ಅವಕಾಶನ್ನು ಕಲ್ಪಿಸಿದನು. ದೀರ್ಘವಾದ ಮಾರ್ಗಗಳಲ್ಲಿ ಹರಿಯುವ ನದಿಗಳನ್ನು ಉಗುರಿನಿಂದ ಗರಿಕೆಯನ್ನು ಚಿವುಟಿ ಹಾಕುವಷ್ಟು ಸುಲಭವಾಗಿ ಸೃಷ್ಟಿಸಿದನು. ಇಂತಹ ಮಹಾಕಾರ್ಯಗಳನ್ನು ಮಾಡುವಾಗ ಅವನು ಸೋಮಪಾನದಿಂದ ತೃಪ್ತನಾಗಿದ್ದನು. ಅಂತಹ ಇಂದ್ರನು ಯಜಮಾನನಿಗೆ ಶ್ರೇಷ್ಠತೆಯನ್ನುಂಟುಮಾಡಲಿ.

ಬೃಹಸ್ಪತಿಯು ಸರ್ವಜ್ಞನು. ಆತನು ಸಮಾನರಲ್ಲಿ ಯಜಮಾನನಿಗೆ

**ಮಹಾನ್ಮಹೀ ಅಸ್ತಭ್ಾಯದ್ವಿ ಜಾತೋ ದ್ಯಾಗ್ಂ ಸದ್ಮ**

**ಪಾರ್ಥಿವಂ ಚ ರಜಃ। ಸ ಬುಧ್ನಾದಾಷ್ಟ ಜನುಷಾಽಭ್ಯಗ್ರಂ**

**ಬೃಹಸ್ಪತಿರ್ದೇವತಾ**

---

**ಮಹಾನ್।** ಮಹೀ ಇತಿ। ಅಸ್ತಭ್ಾಯತ್। ವೀತಿ। ಜಾತಃ। ದ್ಯಾಮ್। ಸದ್ಮ। ಪಾರ್ಥಿವಮ್। ಚ। ರಜಃ॥ ಸಃ। ಬುಧ್ನಾತ್। ಆಷ್ಟ। ಜನುಷಾ। ಅಭೀತಿ। ಅಗ್ರಮ್। ಬೃಹಸ್ಪತಿಃ। ದೇವತಾ।

---

| ಮಂತ್ರ | ವಿನಿಯೋಗ |
|---|---|
| **ಮಹಾನ್ಮಹೀ.... ಸಮ್ರಾಟ್ ।** | ಬೃಹಸ್ಪತಿಯಾಗದ ಯಾಜ್ಯೆ (ಪುರೋನುವಾಕ್ಯೆ ಎಂದು ಕೆಲವರ ಮತ) |

---

✚ **ಮಹಾನ್** = ಅಧಿಕಸಾಮರ್ಥ್ಯವುಳ್ಳ ಬೃಹಸ್ಪತಿಯು **ಮಹೀ** = ಭೂಮಿ, ಅಂತರಿಕ್ಷಗಳನ್ನು **ವಿ ಅಸ್ತಭಾಯತ್** = ತನ್ನ ಅಧೀನದಲ್ಲಿಟ್ಟುಕೊಂಡನು*. **ಜಾತಃ** = ಹುಟ್ಟಿದೊಡನೆಯೇ; **ದ್ಯಾಮ್** = ಸ್ವರ್ಗವನ್ನೂ; **ಸದ್ಮ**= ಗೃಹಾದಿಗಳನ್ನೂ; **ಪಾರ್ಥಿವಮ್ ರಜಃ ಚ** = ಭೂಮಿಯ ರಜಸ್ಸನ್ನೂ/ಉದಕವನ್ನೂ; **ವಿ ಅಸ್ತಭಾಯತ್** = ನಿಯಂತ್ರಿಸಿದನು.*[ಇಂತಹ], **ಸಮ್ರಾಟ್** = ಎಲ್ಲಕ್ಕೂ ಅಧಿಪತಿಯಾದ; **ಬೃಹಸ್ಪತಿಃ** = ಬೃಹಸ್ಪತಿಯು; **ಯಸ್ಯ** = ಯಾವ ಯಜಮಾನನಿಗೆ, **ದೇವತಾ** = ದೇವತೆಯಾಗಿದ್ದಾನೆಯೋ;

---

ಅನುಕೂಲರಾದವರನ್ನು ತಿಳಿದಿದ್ದನು. ಆತನು ಎಲ್ಲಾ ಪ್ರಾಣಿಗಳ ಜನ್ಮವಿಚಾರವನ್ನು ಬಲ್ಲವನು. ಆತನು ವೇದದ ಸರ್ವಭಾಗಗಳಿಂದಲೂ ಶ್ರೈಷ್ಠ್ಯವನ್ನು ಉಂಟುಮಾಡುವ ಕರ್ಮವನ್ನು ಮೇಲಕ್ಕೆ ತೆಗೆದಿದ್ದಾನೆ. ಆತನು ಶ್ರೇಷ್ಠತೆಯನ್ನು ಉಂಟುಮಾಡುವ ಅಮೃತದೊಡನೆ/ಅನ್ನದೊಡನೆ ಯಜಮಾನನ ಬಳಿಗೆ ಬರಲಿ. ಆತನನ್ನು ಶ್ರೇಷ್ಠನನ್ನಾಗಿ ಮಾಡಲಿ.

---

* ಇದು ಪರಮಾತ್ಮನ ಕಾರ್ಯ. ಬೃಹಸ್ಪತಿಗೂ ಅನ್ವಯಿಸಿ ಹೇಳಲಾಗಿದೆ.

**ಯಸ್ಯ ಸಮ್ರಾಟ್ ॥ ಬುಧ್ನಾದ್ಯೋ ಅಗ್ರಮಭ್ಯರ್ತ್ಯೋಜಸಾ**

**ಬೃಹಸ್ಪತಿಮಾವಿವಾಸಂತಿ ದೇವಾಃ ।**

---

ಯಸ್ಯ । ಸಮ್ರಾಡಿತಿ ಸಮ್-ರಾಟ್ ॥ **ಬುಧ್ನಾತ್** । ಯಃ । ಅಗ್ರಮ್ । ಅಭ್ಯರ್ತೀತ್ಯಭಿ-ಅರ್ತಿ । ಓಜಸಾ । ಬೃಹಸ್ಪತಿಮ್ । ಏತಿ । ವಿವಾಸಂತಿ । ದೇವಾಃ ॥

---

| **ಮಂತ್ರ** | **ವಿನಿಯೋಗ** |
| --- | --- |
| **ಬುಧ್ನಾದ್ಯೋ... ಜಿಗಾಯ ।** | ಈ ಯಾಗದ ವಿಕಲ್ಪಿತಯಾಜ್ಯೆ |

---

**ಸಃ** = ಆ ಯಜಮಾನನು; **ಜನುಷಾ** = ಜನ್ಮಮಾತ್ರದಿಂದಲೇ; **ಬುಧ್ನಾತ್ ಅಗ್ರಮ್ ಅಭಿ ಆಷ್ಟ** = ಕರ್ಮದ/ಆಯುಸ್ಸಿನ ಆರಂಭದಿಂದ ಕೊನೆಯವರೆಗೆ ಎಲ್ಲವನ್ನೂ ವ್ಯಾಪಿಸಿದನು. ✚ **ಯಃ** = ಯಾವ ಬೃಹಸ್ಪತಿಯು; **ಓಜಸಾ** = ತನ್ನ ಬಲದಿಂದ; **ಬುಧ್ನಾತ್ ಅಗ್ರಮ್** = ಜಗತ್ತಿನ/ದೇಹದ/ಕಷ್ಟದ ಆರಂಭದಿಂದ ಕೊನೆಯವರೆಗೂ; **ಅಭ್ಯರ್ತಿ** = ಹೊಂದುತ್ತಾನೆಯೋ/ನಿಯಂತ್ರಿಸುತ್ತಾನೆಯೋ; **ಬೃಹಸ್ಪತಿಮ್** = ಆ ಬೃಹಸ್ಪತಿಯನ್ನು ; **ದೇವಾಃ** = ಇತರ ದೇವತೆಗಳು/ಋತ್ವಿಜರು; **ಆ ವಿವಾಸಂತಿ** = ಪರಿಚರಿಸುತ್ತಾರೆ.

---

ಬೃಹಸ್ಪತಿಯು ಶ್ರೇಷ್ಠನು. *ಪರಮಾತ್ಮನ ಅನುಗ್ರಹದಿಂದ ಮೂರು ಲೋಕಗಳನ್ನೂ ನಿಯಂತ್ರಿಸಬಲ್ಲನು. ಇಂತಹ ಬೃಹಸ್ಪತಿಯೇ ದೇವತೆಯಾಗಿರುವ ಇಷ್ಟಿಯನ್ನು ಯಜಮಾನನು ಮಾಡಿ, ಆತನ ಅನುಗ್ರಹದಿಂದ ಕೊನೆಯವರೆಗೂ ದೀರ್ಘಾಯುಸ್ಸನ್ನೂ, ಸಮಾನರಲ್ಲಿ ಶ್ರೇಷ್ಠತೆಯನ್ನೂ ಪಡೆಯುವಂತಾಗಲಿ.

ಬೃಹಸ್ಪತಿಯು ತನ್ನ ಬಲದಿಂದ ಲೋಕಗಳೆಲ್ಲವನ್ನೂ ವ್ಯಾಪಿಸಿರುತ್ತಾನೆ. ಈತನನ್ನು ಇತರ ದೇವತೆಗಳೂ, ಋತ್ವಿಜರೂ ಪರಿಚರಿಸುತ್ತಾರೆ.

**ಭಿನದ್ವಲಂ ವಿ ಪುರೋ ದರ್ದರೀತಿ ಕನಿಕ್ರದತ್ಸುವರಪೋ ಜಿಗಾಯ ॥೫೬-14॥**

**[ಯುವಂ ಏತಮಾವಿವಾಸತಿ ಪಂಥಾನೋ ದೀರ್ಘಯಾಥೈಸ್ತೋಮಸ್ಯ ತಾ ಮದ ಇಂದ್ರಶ್ಚಕಾರ ದೇವಾ ನವ ಚ ॥]**

---

ಭಿನತ್ । ವಲಮ್ । ವೀತಿ । ಪುರಃ । ದರ್ದರೀತಿ । ಕನಿಕ್ರದತ್ । ಸುವಃ । ಅಪಃ । ಜಿಗಾಯ ॥ 14॥

---

[ಆ ಬೃಹಸ್ಪತಿಯು] **ವಲವ್** = ಸಮಾನರಲ್ಲಿ ಪ್ರಬಲನಾದವನನ್ನು; **ಭಿನತ್** = ಭೇದಿಸುತ್ತಾನೆ/ಪ್ರತಿಕೂಲವಾಗದಂತೆ ಮಾಡುತ್ತಾನೆ; **ಪುರಃ ವಿದರ್ದರೀತಿ** = ಶತ್ರುಗಳ ಪಟ್ಟಣಗಳನ್ನು ಮತ್ತೆ ಮತ್ತೆ ಭೇದಿಸುತ್ತಾನೆ; **ಕನಿಕ್ರದತ್** = ಉತ್ಸಾಹದಿಂದ ಶಬ್ದ ಮಾಡುತ್ತಾ; **ಸುವಃ** = ಸ್ವರ್ಗಸದೃಶವಾದ ಶ್ರೇಷ್ಠತೆಯನ್ನೂ; **ಅಪಃ** = ಅದಕ್ಕೆ ಸಾಧನವಾದ ಜಲಕ್ಷೇತ್ರಾದಿಗಳನ್ನೂ, **ಜಿಗಾಯ** = ಯಜಮಾನನಿಗಾಗಿ ಸಂಪಾದಿಸಿ ಕೊಟ್ಟನು/ಸಂಪಾದಿಸಿಕೊಡಲಿ.

---

ಈತನು ಯಜಮಾನನಿಗಿಂತ ಪ್ರಬಲರಾದವರನ್ನು ಪ್ರತಿಕೂಲರಾಗದಂತೆ ಮಾಡುತ್ತಾನೆ. ಸಮಾನರ ಪಟ್ಟಣಗಳು ವಶವಾಗುವಂತೆ ಮಾಡುತ್ತಾನೆ/ಗುಡುಗುಗಳಿಂದ ಕೂಡಿದ ಮಳೆಯನ್ನು ಸುರಿಸುತ್ತಾನೆ. ಈತನ ಅನುಗ್ರಹದಿಂದ ಯಜಮಾನನು ಸಮಾನರಲ್ಲಿ ಶ್ರೇಷ್ಠತೆಯನ್ನು ಪಡೆಯಲಿ.

ಈ ಮಂತ್ರದಲ್ಲಿ **'ವಲ'**ವೆಂದರೆ ಮೇಘವೆಂದೂ **'ಸುವಃ'** ಎಂದರೆ ಆದಿತ್ಯನೆಂದೂ, **'ಅಪಃ'** ಎಂದರೆ ಉದಕವೆಂದೂ ಅರ್ಥವನ್ನು ವಿವರಿಸಿ, 'ಬೃಹಸ್ಪತಿಯು ಪರ್ಜನ್ಯರೂಪದಿಂದ, ಸೂರ್ಯನ ಸಾಹಾಯ್ಯದಿಂದ ಗುಡುಗುವ ಮೋಡಗಳಿಂದ ಮಳೆಯನ್ನು ಸುರಿಸುತ್ತಾನೆ. ಆತನು ಯಜಮಾನನಿಗೆ ಶ್ರೇಷ್ಠತೆಯನ್ನು ಕೊಡಲಿ' ಎಂದು ಭಟ್ಟಭಾಸ್ಕರಮಿಶ್ರರು ವಿವರಿಸಿರುತ್ತಾರೆ.

ಆದಿತ್ಯೇಭ್ಯೋ ದೇವಾ ವೈ ಮೃತ್ಯೋರ್ದೇವಾ ವೈ ಸತ್ರಮರ್ಯಮ್ಣೇ ಪ್ರಜಾಪತೇಸ್ತ್ರಯಸ್ತ್ರಿಗ್ಂಶತ್ಪ್ರಜಾಪತಿರ್ದೇವೇಭ್ಯೋಽನ್ನಾದ್ಯಂ ದೇವಾಸುರಾ ಸ್ತ್ವಾನ್ರಜನೋ ಧ್ರುವೋಽಸಿ ಯನ್ನವಮೈದಗ್ನಿಂ ವೈ ಪ್ರಜಾಪತಿರ್ವರುಣಾಯ ಯಾ ವಾಮಿಂದ್ರಾವರುಣಾ ಸ ಪ್ರತ್ನವಚ್ಚತುರ್ದಶ ||14||

ಆದಿತ್ಯೇಭ್ಯಸ್ತ್ವಷ್ಟುರಸ್ತ್ವೆ ದಾನಕಾಮಾ ಏವಾವರುನ್ಧೇಽಗ್ನಿಂ ವೈ ಸ ಪ್ರತ್ನವತ್ಷಟ್ಪಂಚಾಶತ್ ||56||

|| ಆದಿತ್ಯೇಭ್ಯಃ ಸುವರಪೋ ಜಿಗಾಯ ||

ಹರಿಃ ಓಮ್

ಶ್ರೀಕೃಷ್ಣಾರ್ಪಣಮಸ್ತು

ಇತಿ ದ್ವಿತೀಯಕಾಂಡೇ ತೃತೀಯಃ ಪ್ರಶ್ನಃ

# ಅನುವಾಕದ ವಿಶೇಷವಿಷಯಗಳು

## 1. ವಿನಿಯೋಗಸಂಗ್ರಹ

ಯಜ್ಞವಿಭ್ರಷ್ಟಯಾಗೇ ತು ಯಾಜ್ಯಾ ಸ ಪ್ರ[1] ನಿಕೇತಿ[2] ಚ ।
ಇಂದ್ರಾಗ್ನಿ[3-4]ಂದ್ರರ್ ಚೈಂದ್ರಯಾಗೇ *ತ್ವಂ ನಃ[5-6] ಸೌಮ್ಯಚರೌ ತಥಾ ॥

ಅಗ್ನೀ[7-8] ಕಾಮಪ್ರಾಪಕೇಽಗ್ನೀ[9-11] ಬ್ರಹ್ಮವರ್ಚಸಿನಸ್ತ್ರಯಮ್ ।
ಆಪ್ಯಾ[12] ಸಂತೇ[13] ಚರೌ ಸೌಮ್ಯೇ ಗಣಾ[14-16] ಗ್ರಾಮಪ್ರದೇ ತ್ರಯಮ್ ॥

ಮರು[17-18] ಯಾಗೇ ನಾಶಕೇಽಷ್ಟಾ[19-20]ವರ್ಯಮಾಽರ್ಯಮಣೇ ಚರೌ ।
[21-22]ಬುಧ್ನಾದ್ಯೈಂದ್ರೇ [23-25]ಪ್ರ ಯಸ್ಮಿನ್ಸ್ತ್ರೋ ಬಾರ್ಹಸ್ಪತ್ಯಾನುಷೂಕಕೇ ॥
*ಪಂಚವಿಂಶತಿರತ್ರೋಕ್ತಾ ಅನುವಾಕೇ ಚತುರ್ದಶೇ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ – 25

## 2. ಛಂದಸ್ಸು

| | ಮಂತ್ರ | ಛಂದಸ್ಸಿನ ಹೆಸರು |
|---|---|---|
| 1) | ಸ.... ಭಾನುನಾ ॥ | ಗಾಯತ್ರೀ |
| 2) | ನಿ ಕಾವ್ಯಾ.... ವಿಶ್ವಾ ॥ | ತ್ರಿಷ್ಟುಪ್ |
| 3) | ಇಂದ್ರಂ... ಕೇವಲಃ ॥ | ಗಾಯತ್ರೀ |
| 4) | ಇಂದ್ರಂ ನರೋ.... ನಃ ॥ | ತ್ರಿಷ್ಟುಪ್ |
| 5) | ತ್ವಂ ನಃ.... ಸಖಾ ॥ | ಗಾಯತ್ರೀ |
| 6) | ಯಾ ತೇ.... ಗೃಭಾಯ ॥ | ತ್ರಿಷ್ಟುಪ್ |
| 7) | ಅಗ್ನೀಷೋಮಾ.... ಬಭೂವಥುಃ ॥ | ಗಾಯತ್ರೀ |
| 8) | ಯುವಮ್.... ಗೃಭೀತಾನ್ ॥ | ತ್ರಿಷ್ಟುಪ್ |

* ಯಾಜ್ಯಾನುವಾಕ್ಯೆಗಳನ್ನೂ, ವಿಕಲ್ಪಿತಯಾಜ್ಯೆಯನ್ನೂ ಸಂಗ್ರಹಕಾರರು ಶಬ್ದದಿಂದ ಗುರುತಿಸಿಲ್ಲ

9) ಅಗ್ನೀಷೋಮಾವಿಮಂ.... ಮಯಃ॥ ಅನುಷ್ಟುಪ್

10) ಆऽನ್ಯಂ.... ಲೋಕಮ್॥ ತ್ರಿಷ್ಟುಪ್

11) ಅಗ್ನೀಷೋಮಾ.... ಶಂ ಯೋಃ॥ ತ್ರಿಷ್ಟುಪ್

12) ಆ ಪ್ಯಾಯಸ್ವ.... ಸಂಗಥೇ॥ ಗಾಯತ್ರೀ

13) ಸಂ ತೇ... ನಿಧಿಷ್ವ॥ ತ್ರಿಷ್ಟುಪ್

14) ಗಣಾನಾಂ..... ಸಾದನಮ್॥ ಜಗತೀ

15) ಸ ಇಜ್ಜನೇನ.... ಬ್ರಹ್ಮಣಸ್ಪತಿಮ್॥ ಜಗತೀ

16) ಸ ಸುಷ್ಟುಭಾ.... ಉದಾಜತ್॥ ತ್ರಿಷ್ಟುಪ್

17) ಮರುತೋ.... ಗಂತನ॥ ಗಾಯತ್ರೀ

18) ಯಾ ವಃ.... ಸುವೀರಮ್॥ ತ್ರಿಷ್ಟುಪ್

19) ಅರ್ಯಮಾ.... ದಧಾತು॥ ತ್ರಿಷ್ಟುಪ್

20) ಯೇ ತೇ.... ಚತುಷ್ಪದೇ॥ ತ್ರಿಷ್ಟುಪ್

21) ಬುಧ್ನಾತ್.... ಚಕಾರ॥ ತ್ರಿಷ್ಟುಪ್

22) ಬುಧ್ನಾತ್ .... ಚಕಾರ॥ ತ್ರಿಷ್ಟುಪ್

23) ಪ್ರ ಯೋ.... ತಸ್ಥೌ॥ ತ್ರಿಷ್ಟುಪ್

24) ಮಹಾನ್ಮಹೀ... ಸಮ್ರಾಟ್॥ ತ್ರಿಷ್ಟುಪ್

25) ಬುಧ್ನಾದ್ಯೋ.... ಜಿಗಾಯ॥ ತ್ರಿಷ್ಟುಪ್

* * *

# ತೈತ್ತಿರೀಯ ಸಂಹಿತಾ

## ದ್ವಿತೀಯಕಾಂಡಃ ಚತುರ್ಥಃ ಪ್ರಶ್ನಃ

॥ ಶ್ರೀ ಶಾರದಾಗುರುಗಣಪತಿಭ್ಯೋ ನಮಃ ॥

**ಹರಿಃ ಓಮ್**

ದೇವಾ ಮನುಷ್ಯಾಃ ಪಿತರಸ್ತೇಽನ್ಯತ ಆಸನ್ನಸುರಾ

ರಕ್ಷಾಗ್‌ಂಸಿ

---

**॥ವೈ॥ ದೇವಾಃ।** ಮನುಷ್ಯಾಃ। ಪಿತರಃ। ತೇ। ಅನ್ಯತಃ। ಆಸನ್। ಅಸುರಾಃ। ರಕ್ಷಾಗ್‌ಂಸಿ।

---

ಈ ಕಾಂಡದಲ್ಲಿ ಹಿಂದಿನ ಎರಡನೆಯ ಮತ್ತು ಮೂರನೆಯ ಪ್ರಶ್ನೆಗಳಲ್ಲಿ ಕಾಮ್ಯೇಷ್ಟಿಗಳನ್ನು ಹೇಳಲಾಗಿದೆ. ಈ ನಾಲ್ಕನೆಯ ಪ್ರಶ್ನೆಯಲ್ಲಿ ಮತ್ತೆ ಕೆಲವು ಇಷ್ಟಿಗಳನ್ನು ಹೇಳಲಾಗುತ್ತದೆ.

ಮೊದಲನೆಯದಾಗಿ ಮೂರು ಹವಿಸ್ಸುಗಳುಳ್ಳ ಇಷ್ಟಿಯನ್ನು ಹೇಳಲಾಗಿದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| ದೇವಾಃ ಮನುಷ್ಯಾಃ ಪಿತರಃ ತೇ | [ದೇವಾಸುರಸಂಗ್ರಾಮದಲ್ಲಿ] ಆ ದೇವತೆಗಳೂ, ಮನುಷ್ಯರೂ ಮತ್ತು ಪಿತೃಗಳೂ ಒಂದು ಪಕ್ಷದಲ್ಲಿ ಇದ್ದರು. |
| ಅಸುರಾಃ ರಕ್ಷಾಂಸಿ | *ಅಸುರರೂ, ರಾಕ್ಷಸರೂ |

---

**ತಾತ್ಪರ್ಯ** : ಮೂರು ಹವಿಸ್ಸುಗಳುಳ್ಳ ಇಷ್ಟಿಯ ವಿಧಾನ ವಿಷಯದಲ್ಲಿ ಒಂದು ಉಪಾಖ್ಯಾನವಿದೆ.

ದೇವಾಸುರರಿಗೆ ಯುದ್ಧವು ಮೊದಲಾಯಿತು. ದೇವತೆಗಳೂ, ಮನುಷ್ಯರೂ ಮತ್ತು ಪಿತೃದೇವತೆಗಳೂ ಒಂದೆಡೆ; ಅಸುರರೂ, ರಕ್ಷೋಗಣಗಳೂ, ಪಿಶಾಚಾದಿಗಳೂ ಒಂದೆಡೆ

---

* ಅಸುರರು, ರಾಕ್ಷಸರು ಎಂದು ಅವಾಂತರಜಾತಿಭೇದ.

ಪಿಶಾಚಾಸ್ತೇಽನ್ಯತಸ್ತೇಷಾಂ ದೇವಾನಾಮುತ

ಯದಲ್ಪಂ ಲೋಹಿತಮಕುರ್ವನ್ತದ್ರಕ್ಷಾಗ್ಂಸಿ

ರಾತ್ರೀಭಿರಸುಭ್ನನ್ತಾನ್ಸುಬ್ಧಾನ್ಮೃತಾನಭಿವ್ಯೌಚ್ಛತ್ತೇ ದೇವಾ

---

ಪಿಶಾಚಾಃ । ತೇ । ಅನ್ಯತಃ । ತೇಷಾಮ್ । ದೇವಾನಾಮ್ । ಉತ । ಯತ್ । ಅಲ್ಪಮ್ । ಲೋಹಿತಮ್ । ಅಕುರ್ವನ್ । ತತ್ । ರಕ್ಷಾಗ್ಂಸಿ । ರಾತ್ರೀಭಿರಿತಿ ರಾತ್ರಿ-ಭಿಃ । ಅಸುಭ್ನನ್ । ತಾನ್ । ಸುಬ್ಧಾನ್ । ಮೃತಾನ್ । ಅಭಿ । ವೀತಿ । ಔಚ್ಛತ್ । ತೇ । ದೇವಾಃ ।

---

| | |
|---|---|
| ಪಿಶಾಚಾಃ ತೇ<br>ಅನ್ಯತಃ | ಪಿಶಾಚರು - ಈ ಎಲ್ಲರೂ ಇನ್ನೊಂದು ಪಕ್ಷದಲ್ಲಿ ಇದ್ದರು. |
| ತೇಷಾಮ್ ದೇವಾನಾಮ್<br>ಯತ್ ಅಲ್ಪಮ್ ಉತ<br>ಲೋಹಿತಮ್ ಅಕುರ್ವನ್ | ಆ ದೇವತೆಗಳಿಗೆ [ಅಸುರಾದಿಗಳು] ಸ್ವಲ್ಪವೇ ರಕ್ತವು ಬರುವಂತೆ ಮಾಡಿದರೂ |
| ತತ್ ರಕ್ಷಾಗ್ಂಸಿ<br>ರಾತ್ರೀಭಿಃ ಅಸುಭ್ನನ್ | ರಾಕ್ಷಸರು ಆ ಗಾಯವನ್ನು ರಾತ್ರಿಯಲ್ಲಿ ವೃದ್ಧಿಗೊಳ್ಳುವಂತೆ ಮಾಡುತ್ತಿದ್ದರು. |
| ತಾನ್ ಸುಬ್ಧಾನ್ ಮೃತಾನ್<br>ಅಭಿ ವ್ಯೌಚ್ಛತ್<br>ತೇ ದೇವಾಃ | ಹೀಗೆ ಗಾಯಗೊಂಡು ದೇವತೆಗಳು ಸಾಯುತ್ತಿರುವಂತೆಯೇ ಬೆಳಗಾಗುತ್ತಿತ್ತು.<br>ಆ ದೇವತೆಗಳು |

---

ಸೇರಿದ್ದರು. ದೇವತೆಗಳಲ್ಲಿ ಯಾರಿಗಾದರೂ ಗಾಯವಾದರೆ ರಾಕ್ಷಸರು ರಾತ್ರಿಯ ಕಾಲದಲ್ಲಿ ಆ ಗಾಯವು ಮಾಯದಂತೆ ಮಾಡಿ ಗಾಯವು ಜೋರಾಗುವಂತೆ ಮಾಡುತ್ತಿದ್ದರು. ಇದರ ಫಲವಾಗಿ ಬೆಳಗಿನ ಹೊತ್ತಿಗೆ ಗಾಯಗೊಂಡವರು ಸಾಯುತ್ತಿದ್ದರು.

ಅವಿದುರ್ಯೋಽ ವೈ ನೋಽಯಂ ಮ್ರಿಯತೇ ರಕ್ಷಾಗ್ಂಸಿ

ವಾ ಇಮಂ ಘ್ನಂತೀತಿ ತೇ ರಕ್ಷಾಗ್ಂಸ್ಯುಪಾಮಂತ್ರಯಂತ

ತಾನ್ಯಬ್ರುವನ್ವರಂ ವೃಣಾಮಹೈ

---

ಅವಿದುಃ । ಯಃ । ವೈ । ನಃ । ಅಯಮ್ । ಮ್ರಿಯತೇ । ರಕ್ಷಾಗ್ಂಸಿ । ವೈ । ಇಮಮ್ । ಘ್ನಂತಿ । ಇತಿ । ತೇ । ರಕ್ಷಾಗ್ಂಸಿ । ಉಪೇತಿ । ಆಮಂತ್ರಯಂತ । ತಾನಿ । ಅಬ್ರುವನ್ । ವರಮ್ । ವೃಣಾಮಹೈ ।

---

| | |
|---|---|
| ಯಃ ವೈ ನಃ ಅಯಮ್ ಮ್ರಿಯತೇ | ನಮ್ಮಲ್ಲಿ ಗಾಯಗಳಿಂದ ಯಾವನು ಸಾಯುತ್ತಾನೆಯೋ |
| ಇಮಮ್ ರಕ್ಷಾಗ್ಂಸಿ ವೈ ಘ್ನಂತಿ ಇತಿ ಅವಿದುಃ | ರಾಕ್ಷಸರೇ ಇವನನ್ನು ಕೊಲ್ಲುತ್ತಾರೆ ಎಂದು ತಿಳಿದರು. |
| ತೇ ರಕ್ಷಾಗ್ಂಸಿ ಉಪಾ ಮಂತ್ರಯಂತ | ಆ ದೇವತೆಗಳು [ತಮ್ಮ ಪಕ್ಷಕ್ಕೆ ಬರುವಂತೆ] ರಾಕ್ಷಸರನ್ನು ಆಹ್ವಾನಿಸಿದರು. |
| ತಾನಿ ವರಮ್ ವೃಣಾಮಹೈ [ಇತಿ] ಅಬ್ರುವನ್ | ಆ ರಾಕ್ಷಸರು ವರವನ್ನು ಕೊಟ್ಟರೆ ಆಗಬಹುದೆಂದರು. |

---

ಆಗ ದೇವತೆಗಳು ಇದು ರಾಕ್ಷಸರ ಕೃತ್ಯವೆಂದು ತಿಳಿದರು. ಅವರನ್ನು ತಮ್ಮ ಪಕ್ಷಕ್ಕೆ ಬರುವಂತೆ ಆಹ್ವಾನಿಸಿದರು. ಆಗ ರಕ್ಷೋಗಣಗಳು ಗೆಲುವಿನ ಫಲವು ತಮಗೂ ದೊರೆಯುವಂತೆ ವರವನ್ನು ಕೊಡಬೇಕೆಂದು ಕೇಳಿದವು. ಅದಕ್ಕೆ ದೇವತೆಗಳು ಒಪ್ಪಿದರು. ಅನಂತರ ದೇವತೆಗಳು ಅಸುರರನ್ನು ಯುದ್ಧದಲ್ಲಿ ಜಯಿಸಿದರು.

ಯದಸುರಾಞ್ಜಯಾಮ [ಯತ್ (೧) ಅಸುರಾಞ್ಜಯಾಮ]
ತನ್ನಃ ಸಹಾಸದಿತಿ ತತೋ ವೈ ದೇವಾ ಅಸುರಾನಜಯ
ನ್ತೇऽಸುರಾಞ್ಜಿತ್ವಾ ರಕ್ಷಾಗ್ಂಸ್ಯಪಾನುದಂತ ತಾನಿ
ರಕ್ಷಾಗ್ಂಸ್ಯನೃತಮಕರ್ತೇತಿ

---

ಯತ್ । ಅಸುರಾನ್ । ಜಯಾಮ । ತತ್ । ನಃ । ಸಹ । ಅಸತ್ । ಇತಿ । ತತಃ । ವೈ । ದೇವಾಃ । ಅಸುರಾನ್ । ಅಜಯನ್ನ್ । ತೇ । ಅಸುರಾನ್ । ಜಿತ್ವಾ । ರಕ್ಷಾಗ್ಂಸಿ । ಅಪೇತಿ । ಅನುದಂತ । ತಾನಿ । ರಕ್ಷಾಗ್ಂಸಿ । ಅನೃತಮ್ । ಅಕರ್ತ । ಇತಿ ।

---

| | |
|---|---|
| ಯತ್ ಅಸುರಾನ್ ಜಯಾಮ ತತ್ ನಃ ಸಹ ಅಸತ್ ಇತಿ | ಅಸುರರನ್ನು ಜಯಿಸಿದ ಮೇಲೆ ಆ ಜಯದ ಫಲದಲ್ಲಿಯೂ ನಮ್ಮನ್ನು ಜೊತೆಯಾಗಿಟ್ಟುಕೊಳ್ಳಬೇಕೆಂದು [ವರವನ್ನು ಕೇಳಿದರು] |
| ತತಃ ವೈ ದೇವಾಃ.ಅಸುರಾನ್ ಅಜಯನ್ | [ಹೀಗೆ ವರವನ್ನಿತ್ತು ರಾಕ್ಷಸರನ್ನು ತಮ್ಮ ಪಕ್ಷಕ್ಕೆ ಸೇರಿಸಿಕೊಂಡು] ದೇವತೆಗಳು ಅಸುರರನ್ನು ಜಯಿಸಿದರು. |

**ಮುಂದುವರೆದ ಉಪಾಖ್ಯಾನ**

| | |
|---|---|
| ತೇ ಅಸುರಾನ್ ಜಿತ್ವಾ | ಆ ದೇವತೆಗಳು ಅಸುರರನ್ನು ಗೆದ್ದು |
| ರಕ್ಷಾಗ್ಂಸಿ ಅಪಾನುದಂತ | ರಾಕ್ಷಸರನ್ನು ತಮ್ಮ ಪಕ್ಷದಿಂದ ದೂರ ಮಾಡಿದರು. |
| ತಾನಿ ರಕ್ಷಾಗ್ಂಸಿ ಅನೃತಮ್ ಅಕರ್ತ ಇತಿ | ಆ ರಕ್ಷೋಗಣಗಳು [ದೇವತೆಗಳು] ಸುಳ್ಳನ್ನು ಹೇಳಿದರೆಂದು |

---

ದೇವತೆಗಳು ಅಸುರರನ್ನು ಜಯಿಸಿದ ಮೇಲೆ ರಾಕ್ಷಸರನ್ನು ದೂರ ಮಾಡಿದರು.

ಸಮಂತಂ ದೇವಾನ್ಪರ್ಯವಿಶನ್ತೇ ದೇವಾ ಅಗ್ನಾವನಾಥಂತ

ತೇಽಗ್ನಯೇ ಪ್ರವತೇ ಪುರೋಡಾಶಮಷ್ಟಾಕಪಾಲಂ

ನಿರವಪನ್ನಗ್ನಯೇ ವಿಬಾಧವತೇಽಗ್ನಯೇ

---

ಸಮಂತಮಿತಿ ಸಮ್-ಅಂತಮ್ । ದೇವಾನ್ । ಪರೀತಿ । ಅವಿಶನ್ನ್ । ತೇ । ದೇವಾಃ । ಅಗ್ನೌ । ಅನಾಥಂತ । ತೇ । ಅಗ್ನಯೇ । ಪ್ರವತ ಇತಿ ಪ್ರ-ವತೇ । ಪುರೋಡಾಶಮ್ । ಅಷ್ಟಾಕಪಾಲ ಮಿತ್ಯಷ್ಟಾ- ಕಪಾಲಮ್ । ನಿರಿತಿ । ಅವಪನ್ನ್ । ಅಗ್ನಯೇ । ವಿಬಾಧವತ ಇತಿ ವಿಬಾಧ-ವತೇ । ಅಗ್ನಯೇ ।

---

| | |
|---|---|
| ಸಮಂತಮ್ ದೇವಾನ್ ಪರ್ಯವಿಶನ್ | ದೇವತೆಗಳನ್ನು ಸುತ್ತುವರೆದರು. |

**ದೇವತೆಗಳು ಮಾಡಿದ ಅಗ್ನ್ಯಾರಾಧನೆ; ರಕ್ಷೋಬಾಧಾಪರಿಹಾರ**

| | |
|---|---|
| ತೇ ದೇವಾಃ ಅಗ್ನೌ ಅನಾಥಂತ | ಆಗ ಆ ದೇವತೆಗಳು ರಕ್ಷಣೆಗಾಗಿ ಅಗ್ನಿದೇವನನ್ನು ಪ್ರಾರ್ಥಿಸಿದರು. |
| ತೇ ಪ್ರವತೇ ಅಗ್ನಯೇ ಅಷ್ಟಾಕಪಾಲಮ್ ಪುರೋಡಾಶಮ್ ನಿರವಪನ್ | ಆ ದೇವತೆಗಳು *ಪ್ರವದಗ್ನಿಗೆ ಅಷ್ಟಾಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಿದರು. |
| ಅಗ್ನಯೇ ವಿಬಾಧವತೇ ಅಷ್ಟಾಕಪಾಲಮ್ ಪುರೋಡಾಶಮ್ ನಿರವಪನ್ | *ವಿಬಾಧವದಗ್ನಿಗೆ ಅಷ್ಟಾಕಪಾಲಪುರೋಡಾಶ ಯಾಗವನ್ನು ಅನುಷ್ಠಿಸಿದರು. |

---

* ಈ ಅಗ್ನಿಗಳ ಯಾಜ್ಯಾ-ಪುರೋನುವಾಕ್ಯೆಗಳಲ್ಲಿ - 'ಪ್ರ ಪ್ರಾಯಮ್' 'ಪ್ರ ತ ಇಯರ್ಮಿ' ಎಂದು 'ಪ್ರ' ಶಬ್ದದಿಂದ ಕೂಡಿದ ಮಂತ್ರದಿಂದ - ಪ್ರತಿಪಾದ್ಯವಾದ ಅಗ್ನಿ ಪ್ರವದಗ್ನಿ.

* 'ವಿಪಾಜಸಾ' ಎಂಬ ಮಂತ್ರದಲ್ಲಿ 'ವಿಬಾಧ' ಪದವು ಇದೆ. ಈ ವಿಬಾಧ ಪದದಿಂದ ಕೂಡಿದ ಮಂತ್ರಪ್ರತಿಪಾದ್ಯನಾದ ಅಗ್ನಿಯು ವಿಬಾಧವದಗ್ನಿ.

ಪ್ರತೀಕವತೇ ಯದಗ್ನಯೇ ಪ್ರವತೇ ನಿರವಪನ್

ಯಾನ್ಯೇವ ಪುರಸ್ತಾದ್ರಕ್ಷಾಗ್ಂಸ್ಯಾಸನ್ನಾನಿ [ರಕ್ಷಾಗ್ಂಸಿ

(೨) ಆಸನ್ನಾನಿ] ತೇನ ಪ್ರಾಣುದಂತ

---

ಪ್ರತೀಕವತ ಇತಿ ಪ್ರತೀಕ-ವತೇ । ಯತ್ । ಅಗ್ನಯೇ । ಪ್ರವತ ಇತಿ ಪ್ರ-ವತೇ । ನಿರವಪನ್ನಿತಿ ನಿಃ-ಅವಪನ್ । ಯಾನಿ । ಏವ । ಪುರಸ್ತಾತ್ । ರಕ್ಷಾಗ್ಂಸಿ । ಆಸನ್ । ತಾನಿ । ತೇನ । ಪ್ರೇತಿ । ಅನುದಂತ ।

---

| | |
|---|---|
| ಅಗ್ನಯೇ ಪ್ರತೀಕವತೇ ಪುರೋಡಾಶಮ್ ಅಷ್ಟಾಕಪಾಲಮ್ ನಿರವಪನ್ | *ಪ್ರತೀಕವದಗ್ನಿಗೆ ಅಷ್ಟಾಕಪಾಲಪುರೋಡಾಶ ಯಾಗವನ್ನು ಅನುಷ್ಠಿಸಿದರು. |
| ಯತ್ ಪ್ರವತೇ ಅಗ್ನಯೇ ನಿರವಪನ್ ತೇನ | ಪ್ರವದಗ್ನಿಗೆ ಯಾಗ ಮಾಡಿದರೆಂಬುದು ಯಾವುದುಂಟೋ ಅದರಿಂದ |
| ಯಾನಿ ಏವ ಪುರಸ್ತಾತ್ ರಕ್ಷಾಗ್ಂಸಿ ಆಸನ್ ತಾನಿ ಪ್ರಾಣುದಂತ | ಪೂರ್ವದಿಕ್ಕಿನಲ್ಲಿ ಯಾವ ರಕ್ಷೋಗಣಗಳು ಇದ್ದವೋ ಆ ರಾಕ್ಷಸಗಣಗಳನ್ನು ನಾಶ ಮಾಡಿದರು. |

---

ಹೀಗೆ ಸುಳ್ಳನ್ನು ಹೇಳಿ ಮೋಸ ಮಾಡಿದರೆಂದು ಕೋಪಿಸಿಕೊಂಡ ರಾಕ್ಷಸರು ಪ್ರತೀಕಾರಾರ್ಥವಾಗಿ ದೇವತೆಗಳನ್ನು ಸುತ್ತಲೂ ಆಕ್ರಮಿಸಿದರು. ಆಗ ದೇವತೆಗಳು ರಕ್ಷಣಾರ್ಥವಾಗಿ ಅಗ್ನಿದೇವನನ್ನು ಪ್ರಾರ್ಥಿಸಿಕೊಂಡರು.

ಬಳಿಕ ಆ ದೇವತೆಗಳು ಪ್ರವದಗ್ನಿಗೆ ಅಷ್ಟಾಕಪಾಲಪುರೋಡಾಶಯಾಗವನ್ನೂ,

---

* **'ಸ ತ್ವಮಗ್ನೇ ಪ್ರತೀಕೇನ' 'ತಗ್ಂ ಸುಪ್ರತೀಕಮ್'** ಎಂದು ಪ್ರತೀಕಶಬ್ದದಿಂದ ಕೂಡಿದ ಮಂತ್ರದಿಂದ ಸ್ತುತನಾದ ಅಗ್ನಿ ಪ್ರತೀಕವದಗ್ನಿ

ಯದಗ್ನಯೇ ವಿಬಾಧವತೇ ಯಾನ್ಯೇವಾಭಿತೋ ರಕ್ಷಾಗ್ಂ
ಸ್ಯಾಸನ್ತಾನಿ ತೇನ ವ್ಯಬಾಧಂತ ಯದಗ್ನಯೇ ಪ್ರತೀಕವತೇ
ಯಾನ್ಯೇವ ಪಶ್ಚಾದ್ರಕ್ಷಾಗ್ಂಸ್ಯಾಸನ್ತಾನಿ ತೇನಾಪಾನುದಂತ

---

**ಯತ್** । ಅಗ್ನಯೇ । ವಿಬಾಧವತ ಇತಿ ವಿಬಾಧ-ವತೇ । ಯಾನಿ । ಏವ । ಅಭಿತಃ । ರಕ್ಷಾಗ್ಂಸಿ । ಆಸನ್ನ್ । ತಾನಿ । ತೇನ । ವೀತಿ । ಅಬಾಧಂತ । **ಯತ್** । ಅಗ್ನಯೇ । ಪ್ರತೀಕವತ ಇತಿ ಪ್ರತೀಕ-ವತೇ । ಯಾನಿ । ಏವ । ಪಶ್ಚಾತ್ । ರಕ್ಷಾಗ್ಂಸಿ । ಆಸನ್ನ್ । ತಾನಿ । ತೇನ । ಅಪೇತಿ । ಅನುದಂತ ।

---

| | |
|---|---|
| ಯತ್ ಅಗ್ನಯೇ ವಿಬಾಧವತೇ ನಿರವಪನ್ | ವಿಬಾಧವದಗ್ನಿಗಾಗಿ ಯಾಗ ಮಾಡಿದರೆಂಬುದು ಯಾವುದುಂಟೋ |
| ತೇನ ಯಾನಿ ಏವ ಅಭಿತಃ ರಕ್ಷಾಗ್ಂಸಿ ಆಸನ್ ತಾನಿ | ಆದರಿಂದ ದಕ್ಷಿಣೋತ್ತರಭಾಗಗಳಲ್ಲಿ ಯಾವ ರಾಕ್ಷಸರಿದ್ದರೋ ಆ ರಾಕ್ಷಸರನ್ನು |
| ವ್ಯಬಾಧಂತ | ವಿಶೇಷವಾಗಿ ಬಾಧಿಸಿದರು. |
| ಯತ್ ಪ್ರತೀಕವತೇ ಅಗ್ನಯೇ ನಿರವಪನ್ | ಪ್ರತೀಕವಂತನಾದ ಅಗ್ನಿಗಾಗಿ ಅಷ್ಟಾಕಪಾಲ ಪುರೋಡಾಶ ಹವಿರ್ಯಾಗವನ್ನು ಮಾಡಿದ ರೆಂಬುದು ಯಾವುದುಂಟೋ |
| ತೇನ ಯಾನಿ ಏವ ಪಶ್ಚಾತ್ ರಕ್ಷಾಗ್ಂಸಿ ಆಸನ್ನ್ ತಾನಿ ಅಪಾನುದಂತ | ಆದರಿಂದ ಪಶ್ಚಿಮಭಾಗದಲ್ಲಿರುವ ರಾಕ್ಷಸ ರಿದ್ದರೋ, ಅವರನ್ನು ದೂರಕ್ಕೆ ಓಡಿಸಿದರು. |

---

ವಿಬಾಧವದಗ್ನಿಗೆ ಅಷ್ಟಾಕಪಾಲಪುರೋಡಾಶಯಾಗವನ್ನೂ, ಪ್ರತೀಕವದಗ್ನಿಗೆ ಅಷ್ಟಾಕಪಾಲ ಪುರೋಡಾಶಯಾಗವನ್ನೂ ಅನುಷ್ಠಿಸಿದರು.

ಇದರಿಂದ ಪೂರ್ವದಲ್ಲಿ, ಸುತ್ತಲೂ, ಪಶ್ಚಿಮದಲ್ಲಿ ಇರುವ ಸರ್ವರಾಕ್ಷಸರನ್ನೂ ನಾಶ ಮಾಡಿದರು. ಹೀಗೆ ದೇವತೆಗಳು ವಿಜಯಿಗಳಾದರು. ಅಸುರ-ರಾಕ್ಷಸರು ಸೋತುಹೋದರು.

ತತೋ ದೇವಾ ಅಭವನ್ಪರಾಸುರಾ ಯೋ

ಭ್ರಾತೃವ್ಯವಾನ್ಥ್ಸ್ಯಾತ್ಸ ಸ್ಪರ್ಧಮಾನ ಏತಯೇಷ್ಟ್ಯಾ

ಯಜೇತಾಗ್ನಯೇ ಪ್ರವತೇ ಪುರೋಡಾಶಮಷ್ಟಾಕಪಾಲಂ

---

ತತಃ । ದೇವಾಃ । ಅಭವನ್ನ್ । ಪರೇತಿ । ಅಸುರಾಃ । ಯಃ । ಭ್ರಾತೃವ್ಯವಾನಿತಿ ಭ್ರಾತೃವ್ಯ-ವಾನ್ । ಸ್ಯಾತ್ । ಸಃ । ಸ್ಪರ್ಧಮಾನಃ । ಏತಯಾ । ಇಷ್ಟ್ಯಾ । ಯಜೇತ । ಅಗ್ನಯೇ । ಪ್ರವತ ಇತಿ ಪ್ರ-ವತೇ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ ।

---

| | |
|---|---|
| ತತಃ ದೇವಾಃ ಅಭವನ್ನ್ ಪರಾ ಅಸುರಾಃ | ಅನಂತರ ದೇವತೆಗಳು ಜಯಶಾಲಿಗಳಾದರು. ರಾಕ್ಷಸರೂ, ಅಸುರರೂ ಪರಾಜಿತರಾದರು. |

**ಶತ್ರುಗಳೊಡನೆ ಸ್ಪರ್ಧಿಸುವವನಿಗೆ ಇಷ್ಟಿಯ ವಿಧಾನ**

| | |
|---|---|
| ಯಃ ಭ್ರಾತೃವ್ಯವಾನ್ ಸ್ಯಾತ್ ಸಃ ಸ್ಪರ್ಧಮಾನಃ | ಯಾವನು ಶತ್ರುಗಳುಳ್ಳವನಾಗಿ, ಆ ಶತ್ರುಗಳೊಡನೆ ಸ್ಪರ್ಧಿಸುವ ಯಜಮಾನನು |
| ಏತಯಾ ಇಷ್ಟ್ಯಾ ಯಜೇತ | ಈ ಇಷ್ಟಿಯನ್ನು ಅನುಷ್ಠಿಸಬೇಕು. |
| ಅಗ್ನಯೇ ಪ್ರವತೇ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್ | ಪ್ರವದಗ್ನಿದೇವನಿಗಾಗಿ ಅಷ್ಟಾಕಪಾಲ ಪುರೋಡಾಶದ್ರವ್ಯವನ್ನು ಯಾಗ ಮಾಡಬೇಕು. |

---

ಶತ್ರುಗಳೊಡನೆ ಸ್ಪರ್ಧಿಸಿ, ಅವರಿಗಿಂತಲೂ ಮೇಲಾಗಬೇಕೆಂದು ಬಯಸುವ ಯಜಮಾನನು ಈ ಮೂರು ಹವಿಸ್ಸುಗಳುಳ್ಳ ಇಷ್ಟಿಯನ್ನು ಅನುಷ್ಠಿಸಬೇಕು. ಪ್ರವದಗ್ನಿಗಾಗಿ ಒಂದು ಅಷ್ಟಾಕಪಾಲಪುರೋಡಾಶ, ವಿಬಾಧವದಗ್ನಿಗಾಗಿ ಒಂದು ಅಷ್ಟಾಕಪಾಲಪುರೋಡಾಶ, ಪ್ರತೀಕವದಗ್ನಿಗಾಗಿ ಇನ್ನೊಂದು ಅಷ್ಟಾಕಪಾಲಪುರೋಡಾಶ - ಹೀಗೆ ಮೂರು ಯಾಗಗಳನ್ನು ಅನುಷ್ಠಿಸಬೇಕು.

ನಿರ್ವಪೇದಗ್ನಯೇ ವಿಬಾಧವತೇಽಗ್ನಯೇ [ವಿಬಾಧವತೇ

(೩) ಅಗ್ನಯೇ] ಪ್ರತೀಕವತೇ ಯದಗ್ನಯೇ ಪ್ರವತೇ

ನಿರ್ವಪತಿ ಯ ಏವಾಸ್ಮಾಚ್ಛ್ರೇಯಾನ್ಭ್ರಾತೃವ್ಯಸ್ತಂ ತೇನ

ಪ್ರಣುದತೇ

---

ನಿರಿತಿ । ವಪೇತ್ । ಅಗ್ನಯೇ । ವಿಬಾಧವತ ಇತಿ ವಿಬಾಧ-ವತೇ । ಅಗ್ನಯೇ । ಪ್ರತೀಕವತ ಇತಿ ಪ್ರತೀಕ-ವತೇ । **ಯತ್** । ಅಗ್ನಯೇ । ಪ್ರವತ ಇತಿ ಪ್ರ-ವತೇ । ನಿರ್ವಪತೀತಿ ನಿಃ-ವಪತಿ । **ಯಃ** । ಏವ । ಅಸ್ಮಾತ್ । ಶ್ರೇಯಾನ್ । ಭ್ರಾತೃವ್ಯಃ । ತಮ್ । ತೇನ । ಪ್ರೇತಿ । ನುದತೇ ।

---

| | |
|---|---|
| ಅಗ್ನಯೇ ವಿಬಾಧವತೇ | ವಿಬಾಧವದಗ್ನಿದೇವನಿಗಾಗಿ [ಅಷ್ಟಾಕಪಾಲ ಪುರೋಡಾಶಯಾಗವನ್ನು ಮಾಡಬೇಕು] |
| ಅಗ್ನಯೇ ಪ್ರತೀಕವತೇ | ಪ್ರತೀಕವದಗ್ನಿದೇವನಿಗಾಗಿ [ಅಷ್ಟಾಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು] |

**ಶತ್ರುಗಳನ್ನು ಸೋಲಿಸುವ ರೀತಿಯ ವಿವರಣೆ**

| | |
|---|---|
| ಯತ್ ಅಗ್ನಯೇ ಪ್ರವತೇ ನಿರ್ವಪತಿ | ಪ್ರವದಗ್ನಿದೇವನಿಗಾಗಿ ಯಾವ ಯಾಗ ಮಾಡುವುದುಂಟೋ |
| ತೇನ ಯಃ ಏವ ಅಸ್ಮಾತ್ ಶ್ರೇಯಾನ್ ಭ್ರಾತೃವ್ಯಃ | ಆದರಿಂದ ಯಾವ ಶತ್ರುವು ಯಜಮಾನನಿಗಿಂತಲೂ ಪ್ರಬಲನಾಗಿರುತ್ತಾನೆಯೋ |
| ತಮ್ ಪ್ರಣುದತೇ | ಆ ಶತ್ರುವಿನ ಪ್ರಾಬಲ್ಯವನ್ನು ಹೋಗಲಾಡಿಸುತ್ತಾನೆ. |

---

∴ ಶತ್ರುಗಳು ಮೂರು ಬಗೆ. ಯಜಮಾನನಿಗಿಂತಲೂ ಪ್ರಬಲರು. ಯಜಮಾನನಿಗೆ ಸಮಾನರು ಕೆಲವರು. ದುರ್ಬಲರು ಮತ್ತೆ ಕೆಲವರು.

ಪ್ರವದಗ್ನಿದೇವನ ಯಾಗದಿಂದ ಯಜಮಾನನು ಪ್ರಬಲರಾದ ಶತ್ರುಗಳನ್ನು ಮೀರಿಸುತ್ತಾನೆ.

ಯದಗ್ನಯೇ ವಿಬಾಧವತೇ ಯ ಏವೈನೇನ ಸದೃಙ್ತಂ

ತೇನ ವಿಬಾಧತೇ ಯದಗ್ನಯೇ ಪ್ರತೀಕವತೇ ಯ

ಏವಾಸ್ಮಾತ್ಪಾಪೀಯಾನ್ತಂ ತೇನಾಪನುದತೇ

---

ಯತ್ । ಅಗ್ನಯೇ । ವಿಬಾಧವತ ಇತಿ ವಿಬಾಧ-ವತೇ । ಯಃ । ಏವ । ಏನೇನ । ಸದೃಙ್ಙಿತಿ ಸ-ದೃಙ್ । ತಮ್ । ತೇನ । ವೀತಿ । ಬಾಧತೇ । ಯತ್ । ಅಗ್ನಯೇ । ಪ್ರತೀಕವತ ಇತಿ ಪ್ರತೀಕ-ವತೇ । ಯಃ । ಏವ । ಅಸ್ಮಾತ್ । ಪಾಪೀಯಾನ್ । ತಮ್ । ತೇನ । ಅಪೇತಿ । ನುದತೇ ।

---

| | |
|---|---|
| ಯತ್ ಅಗ್ನಯೇ ವಿಬಾಧವತೇ [ನಿರ್ವಪತಿ] | ವಿಬಾಧವದಗ್ನಿದೇವನಿಗಾಗಿ ಯಾಗ ಮಾಡುತ್ತಾನೆಂಬುದು ಯಾವುದುಂಟೋ |
| ಯಃ ಏವ ಏನೇನ ಸದೃಙ್ ತೇನ ತಮ್ ವಿಬಾಧತೇ | ಯಾವ ಶತ್ರುವು ಯಜಮಾನನಿಗೆ ಸಮಾನನೋ, ಆ ಶತ್ರುವನ್ನು ತನಗಿಂತಲೂ ಪ್ರಬಲನಾಗದಂತೆ ಮಾಡುತ್ತಾನೆ. |
| ಯತ್ ಅಗ್ನಯೇ ಪ್ರತೀಕವತೇ [ನಿರ್ವಪತಿ] | ಪ್ರತೀಕವದಗ್ನಿ ದೇವನಿಗಾಗಿ ಯಾಗ ಮಾಡುವುದೆಂಬುದು ಯಾವುದುಂಟೋ |
| ತೇನ ಯಃ ಏವ ಅಸ್ಮಾತ್ ಪಾಪೀಯಾನ್ ತಮ್ ತೇನ ಅಪನುದತೇ | ಯಾವ ಶತ್ರುವು ಈ ಯಜಮಾನನಿಗಿಂತಲೂ ದುರ್ಬಲನೋ, ಅವನನ್ನು ನಾಶಪಡಿಸುತ್ತಾನೆ. |

---

ವಿಬಾಧವದಗ್ನಿದೇವನ ಯಾಗದಿಂದ ತನಗೆ ಸಮಾನರಾದ ಶತ್ರುಗಳನ್ನು ತನಗಿಂತಲೂ ದುರ್ಬಲರನ್ನಾಗಿ ಮಾಡುತ್ತಾನೆ. ಪ್ರತೀಕವದಗ್ನಿದೇವನಿಗಾಗಿ ಯಾಗ ಮಾಡುವುದರಿಂದ ತನಗಿಂತಲೂ ದುರ್ಬಲರಾದ ಶತ್ರುಗಳನ್ನು ಅಡಗಿಸುತ್ತಾನೆ.

ಹೀಗೆ ಮೂರು ಬಗೆಯ ಶತ್ರುಗಳನ್ನು ಜಯಿಸಿ, ಯಜಮಾನನು ಶತ್ರುರಹಿತನಾಗುತ್ತಾನೆ.

ಪ್ರಶ್ರೇಯಾಗ್‌ಂಸಂ ಭ್ರಾತೃವ್ಯಂ ನುದತೇಽತಿ ಸದೃಶಂ

ಕ್ರಾಮತಿ ನೈನಂ ಪಾಪೀಯಾನಾಪ್ನೋತಿ ಯ ಏವಂ

ವಿದ್ವಾನೇತಯೇಷ್ಟ್ವಾ ಯಜತೇ ॥೪-1॥

**[ವೃಣಾಮಹೈ ಯತ್ಪುರಸ್ತಾದ್ರಕ್ಷಾಗ್‌ಂಸಿ ವಪೇದಗ್ನಯೇ ವಿಬಾಧವತ ಏವಂ ಚತ್ವಾರಿ ಚ ॥]**

---

**ಪ್ರೇತಿ** । ಶ್ರೇಯಾಗ್‌ಂಸಮ್ । ಭ್ರಾತೃವ್ಯಮ್ । ನುದತೇ । ಅತೀತಿ । ಸದೃಶಮ್ । ಕ್ರಾಮತಿ । ನ । ಏನಮ್ । ಪಾಪೀಯಾನ್ । ಆಪ್ನೋತಿ । ಯಃ । ಏವಮ್ । ವಿದ್ವಾನ್ । ಏತಯಾ । ಇಷ್ಟ್ವಾ । ಯಜತೇ ॥೧॥

---

**ಈ ಯಾಗವನ್ನು ಚೆನ್ನಾಗಿ ತಿಳಿದು ಮಾಡುವವನ ಫಲದ ಪ್ರಶಂಸೆ**

| | |
|---|---|
| ಯಃ ಏವಮ್ ವಿದ್ವಾನ್ ಏತಯಾ ಇಷ್ಟ್ವಾ ಯಜತೇ | ಯಾವ ಯಜಮಾನನು ಈ ಯಾಗವನ್ನು ಚೆನ್ನಾಗಿ ತಿಳಿದುಕೊಂಡು ಯಾಗವನ್ನು ಅನುಷ್ಠಿಸುತ್ತಾನೆಯೋ [ಅವನು] |
| ಶ್ರೇಯಾಗ್‌ಂಸಮ್ ಭ್ರಾತೃವ್ಯಮ್ ಪ್ರ ನುದತೇ | ತನಗಿಂತಲೂ ಪ್ರಬಲನಾದ ಶತ್ರುವನ್ನು ಸೋಲಿಸುತ್ತಾನೆ. |
| ಸದೃಶಮ್ ಅತಿ ಕ್ರಾಮತಿ | ತನ್ನ ಸಮಾನನನ್ನೂ ಮೀರಿಸುತ್ತಾನೆ. |
| ಏನಮ್ ಪಾಪೀಯಾನ್ ನ ಆಪ್ನೋತಿ | ದುರ್ಬಲನಾದ ಶತ್ರುವೂ ಇವನಿಗೆ ಸಮಾನವಾಗಲಾರನು. |

---

ಹೀಗೆ ಯಾಗದ ವಿಷಯವನ್ನು ಚೆನ್ನಾಗಿ ತಿಳಿದು ಯಾಗ ಮಾಡುವವನು ತನಗಿಂತಲೂ ಪ್ರಬಲರಾದ ಶತ್ರುಗಳನ್ನು ಸೋಲಿಸುತ್ತಾನೆ. ಸಮಾನರನ್ನು ಮೀರಿಸುತ್ತಾನೆ. ದುರ್ಬಲರಾದ ಶತ್ರುಗಳು ಇವನಿಗೆ ಎಂದೂ ಸಮಾನರಾಗಲಾರರು. **[ಇದು ಜ್ಞಾನದ ಪ್ರಶಂಸೆ].**

## ॥ ದ್ವಿತೀಯೋಽನುವಾಕಃ ॥

ದೇವಾಸುರಾಃ ಸಂಯತ್ತಾ ಆಸನ್ತೇ ದೇವಾ ಅಬ್ರುವನ್,

ಯೋ ನೋ ವೀರ್ಯಾವತ್ತಮಸ್ತಮನು ಸಮಾರಭಾಮಹಾ ಇತಿ

ತ ಇಂದ್ರಮಬ್ರುವನ್ತ್ವಂ ವೈ ನೋ ವೀರ್ಯಾವತ್ತಮೋಽಸಿ

---

**ದೇವಾಸುರಾ ಇತಿ ದೇವ-ಅಸುರಾಃ।** ಸಂಯತ್ತಾ ಇತಿ ಸಮ್-ಯತ್ತಾಃ। ಆಸನ್ನ್। ತೇ। ದೇವಾಃ। ಅಬ್ರುವನ್ನ್। ಯಃ। ನಃ। ವೀರ್ಯಾವತ್ತಮ ಇತಿ ವೀರ್ಯಾವತ್-ತಮಃ। ತಮ್। ಅನ್ವಿತಿ। ಸಮಾರಭಾಮಹಾ ಇತಿ ಸಮ್ - ಆರಭಾಮಹೈ। ಇತಿ। ತೇ। ಇಂದ್ರಮ್। ಅಬ್ರುವನ್ನ್। ತ್ವಮ್। ವೈ। ನಃ। ವೀರ್ಯಾವತ್ತಮ ಇತಿ ವೀರ್ಯಾವತ್ - ತಮಃ। ಅಸಿ।

---

### ಶತ್ರುವಿಜಯಕ್ಕಾಗಿ ವಿಹಿತವಾದ ಇನ್ನೊಂದು ಇಷ್ಟಿ; ಉಪಾಖ್ಯಾನ

| | |
|---|---|
| ದೇವಾಸುರಾಃ ಸಂಯತ್ತಾಃ ಆಸನ್ | ದೇವತೆಗಳೂ ರಾಕ್ಷಸರೂ ಯುದ್ಧಸನ್ನದ್ಧರಾದರು. |
| ತೇ ದೇವಾಃ 'ಯಃ ನಃ ವೀರ್ಯಾವತ್ತಮಃ ತಮ್ ಅನು ಸಮಾರಭಾಮಹೈ' ಇತಿ ಅಬ್ರುವನ್ | ಆಗ ಆ ದೇವತೆಗಳು 'ನಮ್ಮ ನಡುವೆ ಯಾವನು ಅತ್ಯಂತ ಬಲಿಷ್ಠನೋ ಅವನನ್ನು ಅನುಸರಿಸಿ ಸಿದ್ಧರಾಗೋಣ' ಎಂದು ಮಾತನಾಡಿಕೊಂಡರು. |
| ತೇ ಇಂದ್ರಮ್ 'ತ್ವಮ್ ವೈ ನಃ ವೀರ್ಯಾವತ್ತಮಃ ಅಸಿ | ಅನಂತರ ಸಮಾಲೋಚಿಸಿ ದೇವತೆಗಳು ಇಂದ್ರನಿಗೆ 'ನೀನು ನಮ್ಮಲ್ಲಿ ಅತ್ಯಂತ ಬಲಶಾಲಿಯಾಗಿದ್ದೀಯೆ. |

---

ದೇವತೆಗಳೂ ಅಸುರರೂ ಯುದ್ಧಕ್ಕೆ ಸಿದ್ಧರಾದರು. ಆಗ ದೇವತೆಗಳು ತಮ್ಮಲ್ಲಿಯೇ 'ನಮ್ಮಲ್ಲಿ ಯಾರು ಅತಿಬಲಿಷ್ಠನೋ ಅವನನ್ನೇ ನಾಯಕನನ್ನಾಗಿ ಮಾಡಿಕೊಂಡು ಯುದ್ಧ ಮಾಡೋಣ' ಎಂದು ನಿಶ್ಚಯಿಸಿದರು. ಅನಂತರ ಅವರು ಇಂದ್ರನನ್ನು ಕುರಿತು 'ನೀನೇ ನಮ್ಮಲ್ಲಿ

ತ್ವಾಮನು ಸಮಾರಭಾಮಹಾ ಇತಿ ಸೋಽಬ್ರವೀತ್ತಿಸ್ರೋ

ಮ ಇಮಾಸ್ತನುವೋ ವೀರ್ಯಾವತೀಸ್ತಾಃ ಪ್ರೀಣೀತಾಥಾ

ಸುರಾನಭಿ ಭವಿಷ್ಯಥೇತಿ

---

ತ್ವಾಮ್ । ಅನ್ವಿತಿ । ಸಮಾರಭಾಮಹಾ ಇತಿ ಸಮ್-ಆರಭಾಮಹೈ । ಇತಿ । ಸಃ । ಅಬ್ರವೀತ್ । ತಿಸ್ರಃ । ಮೇ । ಇಮಾಃ । ತನುವಃ । ವೀರ್ಯಾವತೀರಿತಿ ವೀರ್ಯ-ವತೀಃ । ತಾಃ । ಪ್ರೀಣೀತ । ಅಥ । ಅಸುರಾನ್ । ಅಭೀತಿ । ಭವಿಷ್ಯಥ । ಇತಿ ।

---

| | |
|---|---|
| ತ್ವಾಮ್ ಅನು ಸಮಾರಭಾಮಹೈ ಇತಿ ಅಬ್ರುವನ್ | 'ನಿನ್ನನ್ನು ನಾಯಕನನ್ನಾಗಿ ಮಾಡಿಕೊಂಡು ಯುದ್ಧ ಮಾಡೋಣ' ಎಂದು ಹೇಳಿದರು. |

**ದೇವತೆಗಳ ಪ್ರಾರ್ಥನೆಗೆ ಇಂದ್ರನ ಉತ್ತರ**

| | |
|---|---|
| ಸಃ | ಆ ಇಂದ್ರನು [ದೇವತೆಗಳಿಗೆ] |
| ಮೇ ಇಮಾಃ ತಿಸ್ರಃ ವೀರ್ಯಾವತೀಃ ತನುವಃ | 'ನನಗೆ ಅತಿಬಲಯುಕ್ತವಾದ ಈ ಮೂರು ಶರೀರಗಳು ಇವೆ. |
| ತಾಃ ಪ್ರೀಣೀತ | ಅವುಗಳನ್ನು ಸಂತೋಷಪಡಿಸಿರಿ. |
| ಅಥ ಅಸುರಾನ್ ಅಭಿ ಭವಿಷ್ಯಥ ಇತಿ ಅಬ್ರವೀತ್ | ಅನಂತರ ಅಸುರರನ್ನು ಸೋಲಿಸಿರಿ' ಎಂದು ಹೇಳಿದನು. |

---

ಅತಿಬಲಿಷ್ಠನು. ನಿನ್ನನ್ನೇ ಮುಂದಿಟ್ಟುಕೊಂಡು ಯುದ್ಧ ಮಾಡುತ್ತೇವೆ' ಎಂದು ಹೇಳಿದರು. ಆಗ ಇಂದ್ರನು 'ನನಗೆ ಅತಿಶಯಬಲವುಳ್ಳ ಮೂರು ಶರೀರಗಳಿವೆ. ನೀವು ಅವುಗಳನ್ನು ತೃಪ್ತಿಪಡಿಸಿರಿ. ಬಳಿಕ ಅಸುರರನ್ನು ಜಯಿಸಿರಿ' ಎಂದನು.

ತಾ ವೈ ಬ್ರೂಹೀತ್ಯಬ್ರುವನ್ನಿಯಮಗ್ ಂಹೋಮುಗಿಯಂ

ವಿಮೃಧೇಯಮಿಂದ್ರಿಯಾವತೀತ್ಯಬ್ರವೀತ್ತ[...ಮಿಂದ್ರಿಯಾವತೀ

(೧) ಇತ್ಯಬ್ರವೀತ್ತ] ಇಂದ್ರಾಯಾಗ್ ಂಹೋಮುಚೇ

ಪುರೋಡಾಶಮೇಕಾದಶಕಪಾಲಂ

---

ತಾಃ। ವೈ। ಬ್ರೂಹಿ। ಇತಿ। ಅಬ್ರುವನ್ನ್। ಇಯಮ್। ಅಗ್ ಂಹೋಮುಗಿತ್ಯಗ್ ಂಹಃ-ಮುಕ್। ಇಯಮ್। ವಿಮೃಧೇತಿ ವಿ-ಮೃಧಾ। ಇಯಮ್। ಇಂದ್ರಿಯಾವತೀತೀಂದ್ರಿಯ-ವತೀ। ಇತಿ। ಅಬ್ರವೀತ್। ತೇ। ಇಂದ್ರಾಯ। ಅಗ್ ಂಹೋಮುಚ ಇತ್ಯಗ್ ಂಹಃ-ಮುಚೇ। ಪುರೋಡಾಶಮ್। ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್।

---

| | |
|---|---|
| ತಾಃ ವೈ ಬ್ರೂಹಿ ಇತಿ ಅಬ್ರುವನ್ | ದೇವತೆಗಳು 'ಆ ಶರೀರಗಳು ಯಾವುವೆಂಬುದನ್ನು ಹೇಳು' ಎಂದು ಇಂದ್ರನನ್ನು ಕೇಳಿಕೊಂಡರು. |
| [ಸಃ] ಇಯಮ್ ಅಗ್ ಂಹೋಮುಕ್, ಇಯಮ್ ವಿಮೃಧಾ, ಇಯಮ್ ಇಂದ್ರಿಯಾವತೀ ಇತಿ ಅಬ್ರವೀತ್ | ಆ ಇಂದ್ರನು, ''ಈ ಶರೀರವು ಅಗ್ ಂಹೋಮುಕ್, ಈ ಶರೀರವು ವಿಮೃಧಾ, ಈ ಶರೀರವು ಇಂದ್ರಿಯಾವತೀ'' ಎಂದು ಹೇಳಿದನು. |

**ದೇವತೆಗಳು ಇಂದ್ರನನ್ನು ಸಂತೋಷಪಡಿಸಿದುದು; ಅದರ ಫಲ**

| | |
|---|---|
| ತೇ ಅಂಹೋಮುಚೇ ಇಂದ್ರಾಯ ಪುರೋಡಾಶಮ್ ಏಕಾದಶಕಪಾಲಮ್ | ಆ ದೇವತೆಗಳು ಅಗ್ ಂಹೋಮುಗಿಂದ್ರನಿಗಾಗಿ ಏಕಾದಶಕಪಾಲಪುರೋಡಾಶ ಹವಿಸ್ಸನ್ನು |

---

ದೇವತೆಗಳು 'ಅವುಗಳನ್ನು ಹೇಳು' ಎಂದು ಕೇಳಿಕೊಂಡರು. ಆಗ ಇಂದ್ರನು 'ಈ ಶರೀರವು ಅಗ್ ಂಹೋಮುಕ್, ಇದು ವಿಮೃಧೆ, ಇದು ಇಂದ್ರಿಯಾವತೀ [ಅಂದರೆ ಪಾಪ ಪರಿಹಾರಕ, ಶತ್ರುನಾಶಕ ಹಾಗೂ ಇಂದ್ರಿಯಶಕ್ತಿದಾಯಕ] ಎಂದು ತಿಳಿಸಿದನು.

ನಿರವಪನ್ನಿಂದ್ರಾಯ ವೈಮೃಧಾಯೇಂದ್ರಾಯೇಂದ್ರಿಯಾವತೇ
ಯದಿಂದ್ರಾಯಾಗ್ಂಹೋಮುಚೇ ನಿರವಪನ್ನಗ್ಂಹಸ
ಏವ ತೇನಾಮುಚ್ಯಂತ ಯದಿಂದ್ರಾಯ ವೈಮೃಧಾಯ
ಮೃಧ ಏವ ತೇನಾಪಾಘ್ನತ

---

ನಿರಿತಿ। ಅವಪನ್ನ್। ಇಂದ್ರಾಯ। ವೈಮೃಧಾಯ। ಇಂದ್ರಾಯ। ಇಂದ್ರಿಯಾವತ ಇತೀಂದ್ರಿಯ-ವತೇ। ಯತ್। ಇಂದ್ರಾಯ। ಅಗ್ಂಹೋಮುಚ ಇತ್ಯಗ್ಂಹಃ - ಮುಚೇ। ನಿರವಪನ್ನಿತಿ ನಿಃ-ಅವಪನ್ನ್। ಅಗ್ಂಹಸಃ। ಏವ। ತೇನ। ಅಮುಚ್ಯಂತ। ಯತ್। ಇಂದ್ರಾಯ। ವೈಮೃಧಾಯ। ಮೃಧಃ। ಏವ। ತೇನ। ಅಪೇತಿ। ಅಘ್ನತ।

---

| | |
|---|---|
| ನಿರವಪನ್ನ್ | ಯಾಗ ಮಾಡಿದರು. |
| ಇಂದ್ರಾಯ ವೈಮೃಧಾಯ | ವೈಮೃಧೇಂದ್ರನಿಗೆ [ಏಕಾದಶಕಪಾಲಪುರೋಡಾಶವನ್ನು ಯಾಗ ಮಾಡಿದರು] |
| ಇಂದ್ರಾಯ ಇಂದ್ರಿಯಾವತೇ | ಇಂದ್ರಿಯಾವದಿಂದ್ರನಿಗಾಗಿ [ಏಕಾದಶಕಪಾಲ ಪುರೋಡಾಶವನ್ನು ಯಾಗ ಮಾಡಿದರು]. |
| ಯತ್ ಇಂದ್ರಾಯ ಅಗ್ಂಹೋಮುಚೇ ನಿರವಪನ್ನ್ ತೇನ ಅಗ್ಂಹಸಃ ಅಮುಚ್ಯಂತ | ಅಗ್ಂಹೋಮುಗಿಂದ್ರನಿಗಾಗಿ ಯಾಗ ಮಾಡಿದರೆಂಬುದು ಯಾವುದುಂಟೋ ಅದರಿಂದ ಜಯ ಪ್ರತಿಬಂಧಕಪಾಪದಿಂದ ಮುಕ್ತರಾದರು. |
| ಯತ್ ಇಂದ್ರಾಯ ವೈಮೃಧಾಯ [ನಿರವಪನ್ನ್] ತೇನ ಮೃಧಃ ಅಪ ಅಘ್ನತ | ವೈಮೃಧೇಂದ್ರನಿಗಾಗಿ ಏಕಾದಶಕಪಾಲಪುರೋಡಾಶ ಯಾಗ ಮಾಡಿದರೆಂಬುದು ಯಾವುದುಂಟೋ ಅದರಿಂದ ಶತ್ರುಗಳನ್ನು ಸೋಲಿಸಿದರು. |

---

ಬಳಿಕ ದೇವತೆಗಳು ಅಗ್ಂಹೋಮುಗಿಂದ್ರನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನೂ, ವೈಮೃಧೇಂದ್ರನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನೂ, ಇಂದ್ರಿಯಾವ

ಯದಿಂದ್ರಾಯೇಂದ್ರಿಯಾವತ ಇಂದ್ರಿಯಮೇವ

ತೇನಾತ್ಮನ್ನದಧತ ತ್ರಯಸ್ತ್ರಿಗ್ಂಶತ್ಕಪಾಲಂ ಪುರೋಡಾಶಂ

ನಿರವಪನ್ತ್ರಯಸ್ತ್ರಿಗ್ಂಶದ್ವೈ ದೇವತಾಸ್ತಾ

---

ಯತ್ । ಇಂದ್ರಾಯ । ಇಂದ್ರಿಯಾವತ ಇತೀಂದ್ರಿಯ-ವತೇ । ಇಂದ್ರಿಯಮ್ । ಏವ । ತೇನ । ಆತ್ಮನ್ನ್ । ಅದಧತ । **ತ್ರಯಸ್ತ್ರಿಗ್ಂಶತ್ಕಪಾಲಮಿತಿ ತ್ರಯಸ್ತ್ರಿಗ್ಂಶತ್-ಕಪಾಲವ್ ।** ಪುರೋಡಾಶಮ್ । ನಿರಿತಿ । ಅವಪನ್ನ್ । ತ್ರಯಸ್ತ್ರಿಗ್ಂಶದಿತಿ ತ್ರಯಃ-ತ್ರಿಗ್ಂಶತ್ । ವೈ । ದೇವತಾಃ । ತಾಃ ।

---

| | |
|---|---|
| ಯತ್ ಇಂದ್ರಾಯ ಇಂದ್ರಿಯಾವತೇ [ನಿರವಪನ್] | ಇಂದ್ರಿಯಾವದಿಂದ್ರನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಿದರೆಂಬುದು |
| ತೇನ ಇಂದ್ರಿಯಮ್ ಏವ ಆತ್ಮನ್ ಅದಧತ | ಯಾವುದುಂಟೋ ಅದರಿಂದ ಇಂದ್ರಿಯಶಕ್ತಿಯನ್ನು ತಮ್ಮಲ್ಲಿ ನೆಲೆಗೊಳಿಸಿದರು. |

**ದೇವತೆಗಳು ಜಯವನ್ನು ಗಳಿಸಿದ ರೀತಿಯ ವರ್ಣನೆ.**

| | |
|---|---|
| ತ್ರಯಸ್ತ್ರಿಗ್ಂಶತ್ಕಪಾಲಂ ಪುರೋಡಾಶಮ್ ನಿರವಪನ್ನ್ | ಮೂರು ಯಾಗಗಳಿಂದ ಒಟ್ಟು ಮೂವತ್ತ ಮೂರು ಕಪಾಲಗಳ ಪುರೋಡಾಶಯಾಗವನ್ನು ದೇವತೆಗಳು ಮಾಡಿದರು. ಪ್ರಧಾನ ದೇವತೆ |
| ದೇವತಾಃ ತ್ರಯಸ್ತ್ರಿಂಶತ್ ವೈ | ಗಳು ಮೂವತ್ತುಮೂರಷ್ಟೆ |

---

ದಿಂದ್ರನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನೂ ಅನುಷ್ಠಿಸಿದರು. ಈ ಯಾಗಗಳಿಂದ ಕ್ರಮವಾಗಿ ಪಾಪಪರಿಹಾರವನ್ನೂ, ಶತ್ರುಜಯವನ್ನೂ, ಇಂದ್ರಿಯಶಕ್ತಿಯನ್ನೂ ಹೊಂದಿದರು.

ಹೀಗೆ ದೇವತೆಗಳು ಒಟ್ಟಾಗಿ ಮೂವತ್ತಮೂರು ಕಪಾಲಗಳಲ್ಲಿ ಪಕ್ವವಾದ ಪುರೋಡಾಶ ಹವಿಸ್ಸನ್ನು ಇಂದ್ರನ ಮೂರು ಶರೀರಗಳಿಗಾಗಿ ಅರ್ಪಿಸಿದರು.

ದೇವತೆಗಳ ಸಂಖ್ಯೆಯೂ ಮೂವತ್ತಮೂರೇ. ಈ ಯಾಗದಿಂದ ತೃಪ್ತನಾದ ಆ ಇಂದ್ರನು

ಇಂದ್ರ ಆತ್ಮನ್ನನು ಸಮಾರಂಭಯತ ಭೂತ್ಯೈ [ಭೂತ್ಯೈ (೨) ತಾಂ] ತಾಂ ವಾವ ದೇವಾ ವಿಜಿತಿಮುತ್ತಮಾಮಸುರೈ ರ್ವ್ಯಜಯಂತ ಯೋ ಭ್ರಾತೃವ್ಯವಾನ್ಥ್ಸ್ಯಾತ್ಸ ಸ್ಪರ್ಧಮಾನ

---

ಇಂದ್ರಃ । ಆತ್ಮನ್ । ಅನ್ವಿತಿ । ಸಮಾರಂಭಯತೇತಿ ಸಮ್-ಆರಂಭಯತ । ಭೂತ್ಯೈ । ತಾಮ್ । ವಾವ । ದೇವಾಃ । ವಿಜಿತಿಮಿತಿ ವಿ-ಜಿತಿಮ್ । ಉತ್ತಮಾಮಿತ್ಯುತ್-ತಮಾಮ್ । ಅಸುರೈಃ । ವೀತಿ । ಅಜಯಂತ । ಯಃ । ಭ್ರಾತೃವ್ಯವಾನಿತಿ ಭ್ರಾತೃವ್ಯ-ವಾನ್ । ಸ್ಯಾತ್ । ಸಃ । ಸ್ಪರ್ಧಮಾನಃ ।

---

| | |
|---|---|
| ಇಂದ್ರಃ ತಾಃ ಭೂತ್ಯೈ<br>ಆತ್ಮನ್ ಅನು ಸಮಾರಂಭಯತ | ಇಂದ್ರನು ದೇವತೆಗಳ ಐಶ್ವರ್ಯಕ್ಕಾಗಿ ಆ ಮೂವತ್ತಮೂರು ದೇವತೆಗಳನ್ನೂ ತನ್ನ ಅಧೀನದಲ್ಲಿ ಇಟ್ಟುಕೊಂಡು ರಕ್ಷಿಸಿದನು. |
| ದೇವಾಃ ತಾಮ್ ವಾವ<br>ಉತ್ತಮಾಮ್ ವಿಜಿತಿಮ್<br>ಅಸುರೈಃ ವ್ಯಜಯಂತ | [ಹೀಗೆ ಇಂದ್ರನ ಅನುಗ್ರಹದಿಂದ] ದೇವತೆಗಳು ಅಸುರರ ಮೇಲೆ ಉತ್ತಮವಾದ ಗೆಲುವನ್ನು ಗಳಿಸಿದರು. |

**ಈ ವಿಜಿತಿಯಾಗದ ವಿಧಿ**

| | |
|---|---|
| ಯಃ ಭ್ರಾತೃವ್ಯವಾನ್ ಸ್ಯಾತ್<br>ಸಃ ಸ್ಪರ್ಧಮಾನಃ | ಯಾವ ಯಜಮಾನನು ಹಗೆಗಳುಳ್ಳವನೋ ಆತನು ಶತ್ರುಗಳೊಡನೆ ಸ್ಪರ್ಧಿಸುವವನಾಗಿ |

---

ಎಲ್ಲಾ ದೇವತೆಗಳನ್ನೂ ತನ್ನ ವಶದಲ್ಲಿ ಇಟ್ಟುಕೊಂಡು ರಕ್ಷಿಸಿ ಅವರಿಗೆ ಐಶ್ವರ್ಯವನ್ನು ತಂದು ಕೊಟ್ಟನು. ಹೀಗೆ ದೇವತೆಗಳು ರಾಕ್ಷಸರ ಮೇಲೆ ಉತ್ತಮವಾದ ವಿಜಯವನ್ನು ಸಾಧಿಸಿದರು.

ಶತ್ರುಗಳನ್ನು ಜಯಿಸಿ ತಾನು ಮೇಲಾಗಬೇಕೆಂದು ಬಯಸುವವನು

ಏತಯೇಷ್ಟ್ವಾ ಯಜೇತೇಂದ್ರಾಯಾಗ್ಂಹೋಮುಚೇ

ಪುರೋಡಾಶಮೇಕಾದಶಕಪಾಲಂ ನಿರ್ವಪೇದಿಂದ್ರಾಯ

ವೈಮೃಧಾಯೇಂದ್ರಾಯೇಂದ್ರಿಯಾವತೇಽಗ್ಂಹಸಾ ವಾ

---

ಏತಯಾ । ಇಷ್ಟ್ವಾ । ಯಜೇತ । ಇಂದ್ರಾಯ । ಅಗ್ಂಹೋಮುಚ ಇತ್ಯಗ್ಂಹಃ-ಮುಚೇ ।
ಪುರೋಡಾಶಮ್ । ಏಕಾದಶಕಪಾಲಮಿತ್ಯೇಕಾದಶ-ಕಪಾಲಮ್ । ನಿರಿತಿ । ವಪೇತ್ । ಇಂದ್ರಾಯ ।
ವೈಮೃಧಾಯ । ಇಂದ್ರಾಯ । ಇಂದ್ರಿಯಾವತ ಇತೀಂದ್ರಿಯ-ವತೇ । **ಅಗ್ಂಹಸಾ** । ವೈ ।

---

| | |
|---|---|
| ಏತಯಾ ಇಷ್ಟ್ವಾ ಯಜೇತ | ಈ ವಿಜಿತೀಷ್ಟಿಯನ್ನು ಮಾಡಬೇಕು. |
| ಇಂದ್ರಾಯ ಅಗ್ಂಹೋಮುಚೇ ಏಕಾದಶಕಪಾಲಮ್ ಪುರೋಡಾಶಮ್ | [ಆತನು] ಅಗ್ಂಹೋಮುಗಿಂದ್ರನಿಗಾಗಿ ಏಕಾದಶಕಪಾಲಪುರೋಡಾಶಯಾಗವನ್ನು |
| ನಿರ್ವಪೇತ್ | ಮಾಡಬೇಕು. |
| ಇಂದ್ರಾಯ ವೈಮೃಧಾಯ [ಏಕಾದಶಕಪಾಲಂ ಪುರೋಡಾಶಮ್ ನಿರ್ವಪೇತ್] | ವೈಮೃಧೇಂದ್ರನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. |
| ಇಂದ್ರಿಯಾವತೇ ಇಂದ್ರಾಯ [ಏಕಾದಶಕಪಾಲಂ ಪುರೋಡಾಶಮ್ ನಿರ್ವಪೇತ್] | ಇಂದ್ರಿಯಾವಂತನಾದ ಇಂದ್ರನಿಗಾಗಿ ಏಕಾದಶ ಕಪಾಲ ಪುರೋಡಾಶಯಾಗವನ್ನು ಮಾಡಬೇಕು. |

---

ಈ ವಿಜಿತಿಯಾಗವನ್ನು ಅನುಷ್ಠಿಸಬೇಕು. ಅಗ್ಂಹೋಮುಗಿಂದ್ರನಿಗಾಗಿ ಏಕಾದಶಕಪಾಲ ಪುರೋಡಾಶಯಾಗವನ್ನು ಮಾಡಬೇಕು. ಹಾಗೆಯೇ ವೈಮೃಧೇಂದ್ರನಿಗಾಗಿಯೂ ಒಂದು ಏಕಾದಶಕಪಾಲಪುರೋಡಾಶಯಾಗ, ಇಂದ್ರಿಯಾವಂತನಾದ ಇಂದ್ರನಿಗಾಗಿ ಒಂದು ಏಕಾದಶಕಪಾಲಪುರೋಡಾಶಯಾಗ — ಹೀಗೆ ಮೂರು ಯಾಗಗಳನ್ನು ಅನುಷ್ಠಿಸಬೇಕು.

ಏಷ ಗೃಹೀತೋ ಯಸ್ಮಾಚ್ಛ್ರೇಯಾನ್ಭ್ರಾತೃವ್ಯೋ
ಯದಿಂದ್ರಾಯಾಗ್ಂಹೋಮುಚೇ ನಿರ್ವಪತ್ಯಗ್ಂಹಸ
ಏವ ತೇನ ಮುಚ್ಯತೇ

---

ಏಷಃ । ಗೃಹೀತಃ । ಯಸ್ಮಾತ್ । ಶ್ರೇಯಾನ್ । ಭ್ರಾತೃವ್ಯಃ । ಯತ್ । ಇಂದ್ರಾಯ । ಅಗ್ಂಹೋಮುಚ ಇತ್ಯಗ್ಂಹಃ-ಮುಚೇ । ನಿರ್ವಪತೀತಿ ನಿಃ-ವಪತಿ । ಅಗ್ಂಹಸಃ । ಏವ । ತೇನ । ಮುಚ್ಯತೇ ।

---

**ಈ ಮೂರು ಯಾಗಗಳ ಫಲವಿವರಣೆ**

| | |
|---|---|
| ಯಸ್ಮಾತ್ ಶ್ರೇಯಾನ್ ಭ್ರಾತೃವ್ಯಃ ಏಷಃ ಅಗ್ಂಹಸಾ ಗೃಹೀತಃ ವೈ | ಯಾವನಿಗಿಂತಲೂ ಪ್ರಬಲನಾದ ಶತ್ರುವು ಇರುತ್ತಾನೆಯೋ ಈತನು ಪಾಪಗ್ರಸ್ತನಷ್ಟೆ |
| ಯತ್ ಅಗ್ಂಹೋಮುಚೇ ಇಂದ್ರಾಯ ನಿರ್ವಪತಿ | ಅಗ್ಂಹೋಮುಗಿಂದ್ರನಿಗಾಗಿ ಏಕಾದಶಕಪಾಲ ಪುರೋಡಾಶಯಾಗ ಮಾಡುವುದು ಯಾವುದುಂಟೋ |
| ತೇನ ಅಗ್ಂಹಸಃ ಮುಚ್ಯತ ಏವ | ಆದರಿಂದ [ಶ್ರೇಷ್ಠತೆಗೆ ಪ್ರತಿಬಂಧಕವಾದ] ಪಾಪದಿಂದ ಮುಕ್ತನೇ ಆಗುತ್ತಾನೆ. |

---

ಶತ್ರುಗಳಿಗಿಂತ ಮೇಲಾಗಿರಬೇಕೆಂದು ಬಯಸುವವನು ಅಗ್ಂಹೋಮುಗಿಂದ್ರನಿಗೂ ವೈಮೃಧೇಂದ್ರನಿಗೂ, ಇಂದ್ರಿಯಾವದಿಂದ್ರನಿಗೂ ಒಂದೊಂದು ಏಕಾದಶಕಪಾಲಪುರೋಡಾಶ ಯಾಗವನ್ನು ಅನುಷ್ಠಿಸಬೇಕು. ಅಗ್ಂಹೋಮುಗಿಂದ್ರನಿಗಾಗಿ ಯಾಗ ಮಾಡುವುದರಿಂದ ಯಜಮಾನನು ತನಗಿಂತಲೂ ಪ್ರಬಲರಾದ ಶತ್ರುಗಳನ್ನೂ ಮೀರಿಸುವ ಶಕ್ತಿಯನ್ನು ಪಡೆಯುತ್ತಾನೆ.

ಮೃಧಾ ವಾ ಏಷೋಽಭಿಷಣ್ಣೋ ಯಸ್ಮಾತ್ಸಮಾನೇಷ್ವನ್ಯಃ

ಶ್ರೇಯಾನುತಾ [ಶ್ರೇಯಾನುತ (೩) ಅಭ್ರಾತೃವ್ಯೋ]

ಭ್ರಾತೃವ್ಯೋ ಯದಿಂದ್ರಾಯ ವೈಮೃಧಾಯ ಮೃಧ ಏವ

ತೇನಾಪಹತೇ

---

ಮೃಧಾ । ವೈ । ಏಷಃ । ಅಭಿಷಣ್ಣ ಇತ್ಯಭಿ-ಸನ್ನಃ । ಯಸ್ಮಾತ್ । ಸಮಾನೇಷು । ಅನ್ಯಃ । ಶ್ರೇಯಾನ್ । ಉತ । ಅಭ್ರಾತೃವ್ಯಃ । ಯತ್ । ಇಂದ್ರಾಯ । ವೈಮೃಧಾಯ । ಮೃಧಃ । ಏವ । ತೇನ । ಅಪೇತಿ । ಹತೇ ।

---

| | |
|---|---|
| ಸಮಾನೇಷು ಯಸ್ಮಾತ್ ಅನ್ಯಃ ಶ್ರೇಯಾನ್ | ಯಜಮಾನನಿಗೆ ತನ್ನ ಸಮಾನರ ಮಧ್ಯದಲ್ಲಿ ಶ್ರೇಷ್ಠನು ಇನ್ನೊಬ್ಬನಿರುತ್ತಾನೆಯೋ |
| ಉತ ಅಭ್ರಾತೃವ್ಯಃ | ಆತನು ಶತ್ರುವಲ್ಲದಿದ್ದರೂ ಯಜಮಾನನ ಶ್ರೇಷ್ಠತೆಗೆ ಪ್ರತಿಬಂಧಕನಾಗಿರುತ್ತಾನೆಯೋ |
| ಏಷಃ ಮೃಧಾ ಅಭಿಷಣ್ಣಃ ವೈ | ಈ ಯಜಮಾನನು ಶತ್ರುವಿನಿಂದ ಆಕ್ರಮಿಸಲ್ಪಟ್ಟಂತೆಯೇ ಆಗುತ್ತಾನೆ. |
| ಯತ್ ಇಂದ್ರಾಯ ವೈಮೃಧಾಯ ತೇನ ಮೃಧಃ ಏವ ಅಪಹತೇ | ವೈಮೃಧೇಂದ್ರನಿಗಾಗಿ ಯಾಗ ಮಾಡುವುದು ಯಾವುದುಂಟೋ ಅದರಿಂದ ಸಮಾನರಾದ ಶತ್ರುಗಳನ್ನೂ ಮೀರಿಸುತ್ತಾನೆ. |

---

ವೈಮೃಧೇಂದ್ರನಿಗೆ ಯಾಗ ಮಾಡುವುದರಿಂದ ಸಮಾನರಲ್ಲಿ ಶ್ರೇಷ್ಠರಾದವರನ್ನೂ, ಉದಾಸೀನರಾದವರನ್ನೂ ಮೀರಿಸಬಲ್ಲವನಾಗುತ್ತಾನೆ. ಇಂದ್ರಿಯಾವಂತನಾದ ಇಂದ್ರನಿಗಾಗಿ ಯಾಗ ಮಾಡುವುದರಿಂದ ಇಂದ್ರಿಯಸಾಮರ್ಥ್ಯವನ್ನು ಗಳಿಸುತ್ತಾನೆ.

ಈ ಮೂರು ಯಾಗಗಳ ಮೂರು ಏಕಾದಶಕಪಾಲ ಪುರೋಡಾಶಗಳು ಒಟ್ಟುಗೂಡಿ

ಯದಿಂದ್ರಾಯೇಂದ್ರಿಯಾವತ ಇಂದ್ರಿಯಮೇವ
ತೇನಾತ್ಮನ್ಧತ್ತೇ ತ್ರಯಸ್ತ್ರಿಗ್ಂಶತ್ಕಪಾಲಂ ಪುರೋಡಾಶಂ
ನಿರ್ವಪತಿ ತ್ರಯಸ್ತ್ರಿಗ್ಂಶದ್ವೈ ದೇವತಾಸ್ತಾ ಏವ

---

ಯತ್ । ಇಂದ್ರಾಯ । ಇಂದ್ರಿಯಾವತ ಇತೀಂದ್ರಿಯ-ವತೇ । ಇಂದ್ರಿಯಮ್ । ಏವ । ತೇನ । ಆತ್ಮನ್ । ಧತ್ತೇ । **ತ್ರಯಸ್ತ್ರಿಗ್ಂಶತ್ಕಪಾಲಮಿತಿ ತ್ರಯಸ್ತ್ರಿಗ್ಂಶತ್-ಕಪಾಲಮ್** । ಪುರೋಡಾಶಮ್ । ನಿರಿತಿ । ವಪತಿ । ತ್ರಯಸ್ತ್ರಿಗ್ಂಶದಿತಿ ತ್ರಯಃ-ತ್ರಿಗ್ಂಶತ್ । ವೈ । ದೇವತಾಃ । ತಾಃ । ಏವ ।

---

| | |
|---|---|
| ಯತ್ ಇಂದ್ರಾಯ ಇಂದ್ರಿಯಾವತೇ | ಇಂದ್ರಿಯಾವಂತನಾದ ಇಂದ್ರನಿಗಾಗಿ ಯಾಗ ಮಾಡುವುದೆಂಬುದು ಯಾವುದುಂಟೋ |
| ತೇನ ಇಂದ್ರಿಯಮ್ ಏವ ಆತ್ಮನ್ ಧತ್ತೇ | ಆದರಿಂದ ಯಜಮಾನನು ಇಂದ್ರಿಯ ಸಾಮರ್ಥ್ಯವನ್ನು ತನ್ನಲ್ಲಿ ನೆಲೆಗೊಳಿಸುತ್ತಾನೆ. |

**ಕಪಾಲಸಂಖ್ಯೆಯ ಪ್ರಶಂಸೆ**

| | |
|---|---|
| ತ್ರಯಸ್ತ್ರಿಗ್ಂಶತ್ಕಪಾಲಮ್ ಪುರೋಡಾಶಮ್ ನಿರ್ವಪತಿ | [ಮೂರು ಏಕಾದಶಕಪಾಲಗಳು ಸೇರಿ] ಮೂವತ್ತಮೂರು ಕಪಾಲಗಳಲ್ಲಿ ಸಿದ್ಧಪಡಿಸಿದ ಪುರೋಡಾಶವಾಗುತ್ತದೆ. |
| ದೇವತಾಃ ತ್ರಯಸ್ತ್ರಿಗ್ಂಶತ್ ವೈ ತಾಃ ಏವ | ದೇವತೆಗಳ ಸಂಖ್ಯೆಯು ಮೂವತ್ತಮೂರೇ ಆಗಿದೆ. ಆ ದೇವತೆಗಳನ್ನೇ |

---

ಮೂವತ್ತಮೂರು ಕಪಾಲಗಳಲ್ಲಿ ಪಕ್ವವಾದ ಪುರೋಡಾಶವಾಗುತ್ತದೆ. ದೇವತೆಗಳ ಸಂಖ್ಯೆಯೂ ಮೂವತ್ತಮೂರು. ಈ ಯಾಗಗಳನ್ನು ಅನುಷ್ಠಿಸುವುದರಿಂದ ದೇವತೆಗಳು ತನ್ನ ವಿಷಯದಲ್ಲಿ ಪ್ರಸನ್ನರಾಗಿ ತನಗೆ ಐಶ್ವರ್ಯವನ್ನೂ ಶತ್ರುಗಳಿಗಿಂತಲೂ ಶ್ರೇಷ್ಠತೆಯನ್ನೂ ಅನುಗ್ರಹಿಸುವಂತೆ ಯಜಮಾನನು ಮಾಡುತ್ತಾನೆ.

ಯಜಮಾನ ಆತ್ಮನ್ನನು ಸಮಾರಂಭಯತೇ ಭೂತ್ಯೈ ಸಾ ವಾ

ಏಷಾ ವಿಜಿತಿರ್ನಾಮೇಷ್ಟಿರ್ಯ ಏವಂ ವಿದ್ವಾನೇತಯೇಷ್ಟ್ವಾ ಯಜತ

ಉತ್ತಮಾಮೇವ ವಿಜಿತಿಂ ಭ್ರಾತೃವ್ಯೇಣ ವಿಜಯತೇ ||೮-2||

**[ಇಂದ್ರಿಯಾವತೀ ಭೂತ್ಯಾ ಉತ್ತೈಕಾನ್ನ ಪಂಚಾಶಚ್ಚ ||]**

---

ಯಜಮಾನಃ | ಆತ್ಮನ್ | ಅನ್ವಿತಿ | ಸಮಾರಂಭಯತ ಇತಿ ಸಮ್-ಆರಂಭಯತೇ | ಭೂತ್ಯೈ |

**ಸಾ** | ವೈ | ಏಷಾ | ವಿಜಿತಿರಿತಿ ವಿ-ಜಿತಿಃ | ನಾಮ | ಇಷ್ಟಿಃ | ಯಃ | ಏವಮ್ | ವಿದ್ವಾನ್ | ಏತಯಾ |

ಇಷ್ಟ್ವಾ | ಯಜತೇ | ಉತ್ತಮಾಮಿತ್ಯುತ್-ತಮಾಮ್ | ಏವ | ವಿಜಿತಿಮಿತಿ ವಿ-ಜಿತಿಮ್ |

ಭ್ರಾತೃವ್ಯೇಣ | ವೀತಿ | ಜಯತೇ ||2||

---

| | |
|---|---|
| ಯಜಮಾನಃ ಆತ್ಮನ್ ಅನು ಸಮಾರಂಭಯತೇ ಭೂತ್ಯೈ | ಯಜಮಾನನು ಈ ಹವಿರ್ಭಾಗ ಪ್ರದಾನದಿಂದ ಒಲಿಸಿಕೊಳ್ಳುತ್ತಾನೆ. ಇದು ಐಶ್ವರ್ಯಕ್ಕೆ ಕಾರಣ ವಾಗುತ್ತದೆ. |

**ಯಾಗದ ನಾಮಧೇಯ - ಯಾಗವೇದನದ ಪ್ರಶಂಸೆ**

| | |
|---|---|
| ಸಾ ವೈ ಏಷಾ ವಿಜಿತಿಃ ನಾಮ ಇಷ್ಟಿಃ | ಈ ಯಾಗವು ವಿಜಿತಿ [ಶತ್ರುಗಳನ್ನು ಜಯಿಸುವ] ಯೆಂದು ಪ್ರಸಿದ್ಧವಾಗಿದೆ. |
| ಯಃ ಏವಮ್ ವಿದ್ವಾನ್ ಏತಯಾ ಇಷ್ಟ್ವಾ ಯಜತೇ | ಹೀಗೆ ತಿಳಿದು ಯಾವ ಯಜಮಾನನು ಈ ಯಾಗವನ್ನು ಅನುಷ್ಠಿಸುತ್ತಾನೆಯೋ |
| ಉತ್ತಮಾಮ್ ಏವ ವಿಜಿತಿಮ್ ಭ್ರಾತೃವ್ಯೇಣ ವಿಜಯತೇ | ಆತನು ಶತ್ರುವಿನ ಮೇಲಿನ ಯುದ್ಧದಲ್ಲಿ [ದೇವತಾನುಗ್ರಹದಿಂದ] ಪಾಪಪರಿಹಾರ - ಶತ್ರುನಾಶ - ಇಂದ್ರಿಯಸಾಮರ್ಥ್ಯಗಳನ್ನು ಹೊಂದಿ ಶ್ರೇಷ್ಠ ವಿಜಯವನ್ನು ಪಡೆಯುವನು. |

---

ಈ ಯಾಗವು ಶತ್ರುಗಳ ಮೇಲೆ ಜಯವನ್ನು ಪಡೆಯಲು ಸಾಧನವಾಗುವುದರಿಂದ ಈ ಇಷ್ಟಿಗೆ '**ವಿಜಿತಿ**' ಎಂಬ ಹೆಸರಿದೆ. ಆ ಹೆಸರಿನಿಂದ ಪ್ರಸಿದ್ಧವಾಗಿದೆ. ಹೀಗೆ ತಿಳಿದು ಯಾಗವನ್ನು ಮಾಡುವವನು ಶತ್ರುಗಳನ್ನು ಗೆಲ್ಲುತ್ತಾನೆ.

## ॥ ತೃತೀಯೋಽನುವಾಕಃ ॥

ದೇವಾಸುರಾಸ್ಸಂಯತ್ತಾ ಆಸನ್ತೇಷಾಂ ಗಾಯತ್ರ್ಯೋಜೋ
ಬಲಮಿಂದ್ರಿಯಂ ವೀರ್ಯಂ ಪ್ರಜಾಂ ಪಶೂನ್ಥ್ಸಂ
ಗೃಹ್ಯಾಽಽದಾಯಾಪಕ್ರಮ್ಯಾತಿಷ್ಠ -

---

**ದೇವಾಸುರಾ ಇತಿ ದೇವ-ಅಸುರಾಃ** । ಸಂಯತ್ತಾ ಇತಿ ಸಮ್-ಯತ್ತಾಃ । ಆಸನ್ । ತೇಷಾಮ್ । ಗಾಯತ್ರೀ । ಓಜಃ । ಬಲಮ್ । ಇಂದ್ರಿಯಮ್ । ವೀರ್ಯಮ್ । ಪ್ರಜಾಮಿತಿ ಪ್ರ-ಜಾಮ್ । ಪಶೂನ್ । ಸಂಗೃಹ್ಯೇತಿ ಸಮ್-ಗೃಹ್ಯ । ಆದಾಯೇತ್ಯಾ-ದಾಯ । ಅಪಕ್ರಮ್ಯೇತ್ಯಪ - ಕ್ರಮ್ಯ । ಅತಿಷ್ಠತ್ ।

---

ಎರಡನೆಯ ಅನುವಾಕದಲ್ಲಿ ವಿಜೇತೀಷ್ಟಿಯನ್ನು ಹೇಳಲಾಗಿದೆ. ಈ ಮೂರನೆಯ ಅನುವಾಕದಲ್ಲಿ **'ಗಾಯತ್ರೀಷ್ಟಿ'** ಅಥವಾ **'ಸಂವರ್ಗೇಷ್ಟಿ'**ಯನ್ನು ಹೇಳಲಾಗಿದೆ.

---

### ಸಂವರ್ಗೇಷ್ಟಿಗೆ ಸಂಬಂಧಿಸಿದ ಉಪಾಖ್ಯಾನ

| | |
|---|---|
| ದೇವಾಸುರಾಃ ಸಂಯತ್ತಾಃ ಆಸನ್ | ದೇವತೆಗಳೂ, ಅಸುರರೂ ಯುದ್ಧಸನ್ನದ್ಧರಾದರು. |
| ಗಾಯತ್ರೀ ತೇಷಾಮ್ ಓಜಃ, ಬಲಮ್, ಇಂದ್ರಿಯಮ್, ವೀರ್ಯಮ್, ಪ್ರಜಾಮ್ ಪಶೂನ್ ಸಂಗೃಹ್ಯ ಆದಾಯ ಅಪಕ್ರಮ್ಯ ಅತಿಷ್ಠತ್ | ಗಾಯತ್ರೀದೇವಿಯು ಆ ದೇವಾಸುರರ ದೇಹದಲ್ಲಿರುವ ಎಂಟನೆಯ ಧಾತುವಾದ ಓಜಸ್ಸನ್ನೂ, ದೇಹಬಲವನ್ನೂ, ಇಂದ್ರಿಯಸಾಮರ್ಥ್ಯವನ್ನೂ ಉತ್ಸಾಹವನ್ನೂ ಪುತ್ರಾದಿಪ್ರಜೆಯನ್ನೂ, ಗವಾದಿ ಪಶುಗಳನ್ನೂ ಸಂಗ್ರಹಿಸಿ, ತೆಗೆದುಕೊಂಡು ದೂರಕ್ಕೆ ಹೋಗಿ, ಅಲ್ಲಿಯೇ ಇದ್ದಳು. |

---

ದೇವತೆಗಳೂ, ಅಸುರರೂ ಯುದ್ಧಕ್ಕೆ ಸಿದ್ಧರಾದರು. ಆಗ ಗಾಯತ್ರಿಯು ಆ ದೇವಾಸುರರ

ತ್ತೇऽಮನ್ಯಂತ ಯತರಾನ್ ವಾ ಇಯಮುಪಾವತ್ಸ್ರ್ಯತಿ ತ ಇದಂ

ಭವಿಷ್ಯಂತೀತಿ ತಾಂ ವ್ಯಹ್ವಯಂತ ವಿಶ್ವಕರ್ಮನ್ನಿತಿ ದೇವಾ

ದಾಭೀತ್ಯಸುರಾಸ್ಸಾ ನಾನ್ಯತರಾಗ್‌ಂಶ್ಚ ನೋಪಾವರ್ತತ

---

ತೇ। ಅಮನ್ಯಂತ। ಯತರಾನ್। ವೈ। ಇಯಮ್। ಉಪಾವತ್ಸ್ರ್ಯತೀತ್ಯುಪ- ಆವತ್ಸ್ರ್ಯತಿ। ತೇ। ಇದಮ್ । ಭವಿಷ್ಯಂತಿ । ಇತಿ । ತಾಮ್ । ವೀತಿ । ಅಹ್ವಯಂತ । ವಿಶ್ವಕರ್ಮನ್ನಿತಿ ವಿಶ್ವ-ಕರ್ಮನ್। ಇತಿ। ದೇವಾಃ। ದಾಭಿ। ಇತಿ। ಅಸುರಾಃ। ಸಾ। ನ। ಅನ್ಯತರಾನ್। ಚ। ನ। ಉಪಾವರ್ತತೇತ್ಯುಪ-ಅವರ್ತತ।

---

| | |
|---|---|
| ಯತರಾನ್ ಇಯಮ್ ವೈ ಉಪಾವತ್ಸ್ರ್ಯತಿ ತೇ ಇದಮ್ ಭವಿಷ್ಯಂತಿ ಇತಿ ತೇ ಅಮನ್ಯಂತ | ಯಾವ ಗುಂಪಿನವರನ್ನು ಈ ಗಾಯತ್ರಿಯು ಹೊಂದುತ್ತಾಳೆಯೋ/ಅನುಗ್ರಹಿಸುತ್ತಾಳೆಯೋ ಅವರು ಈ ಎಲ್ಲಾ ಐಶ್ವರ್ಯವನ್ನು ಹೊಂದುತ್ತಾರೆಂದು ಆ ದೇವಾಸುರರು ತಿಳಿಸಿದರು. |
| ತಾಮ್ ದೇವಾಃ ವಿಶ್ವಕರ್ಮನ್ ಇತಿ | ಆ ಗಾಯತ್ರಿಯನ್ನು ದೇವತೆಗಳು **'ವಿಶ್ವಕರ್ಮನ್'** ಎಂದೂ |
| ಅಸುರಾಃ ದಾಭಿ ಇತಿ ವ್ಯಹ್ವಯಂತ | ಅಸುರರು **'ದಾಭಿ'** ಎಂದೂ ವಿಲಕ್ಷಣಶಬ್ದಗಳಿಂದ ಆಹ್ವಾನಿಸಿದರು. |
| ಸಾ ಅನ್ಯತರಾನ್ ಚ ನ ಉಪಾವರ್ತತ | ಆ ಗಾಯತ್ರಿಯು ಯಾವುದೊಂದು ಗುಂಪಿನವರನ್ನೂ ಹೊಂದಲಿಲ್ಲ. |

---

ಓಜೋಧಾತು, ದೇಹಬಲ, ಇಂದ್ರಿಯಪಾಟವ, ಬೇರೆಯವರನ್ನು ಜಯಿಸುವ ಸಾಮರ್ಥ್ಯ/ಕಾರ್ಯೋತ್ಸಾಹ, ಪುತ್ರಾದಿ ಪ್ರಜೆ; ಗವಾದಿ ಪಶುಗಳು ಎಲ್ಲವನ್ನೂ ಸಂಗ್ರಹಿಸಿ ತೆಗೆದುಕೊಂಡು ದೂರದಲ್ಲಿ ಇದ್ದಳು. ಆಗ ದೇವಾಸುರರು ಈ ಗಾಯತ್ರಿಯು ಯಾರನ್ನು ಹೊಂದುವಳೋ/ಯಾವ ಪಕ್ಷವನ್ನು ಅನುಗ್ರಹಿಸುತ್ತಾಳೆಯೋ ಅವರೇ ಈ ಓಜಸ್ಸು ಮುಂತಾದವುಗಳಿಗೆ ಒಡೆಯರಾಗುವರು ಎಂದು ತಿಳಿದರು. ಅನಂತರ ದೇವತೆಗಳು ಗಾಯತ್ರಿಯನ್ನು **'ವಿಶ್ವಕರ್ಮನ್'** [ಎಲ್ಲವನ್ನೂ ಮಾಡಬಲ್ಲ ಸಮರ್ಥಳೇ !] ಎಂದು ಆಹ್ವಾನಿಸಿದರು. ಅಸುರರು **'ದಾಭಿ'** [ಶತ್ರುಗಳನ್ನು

ತೇ ದೇವಾ ಏತದ್ಯಜುರಪಶ್ಯನ್ನೋಜೋಽಸಿ ಸಹೋಽಸಿ ಬಲಮಸಿ [ಬಲಮಸಿ (೧)] ಭ್ರಾಜೋಽಸಿ ದೇವಾನಾಂ ಧಾಮ ನಾಮಾಸಿ

---

**ತೇ** । ದೇವಾಃ । ಏತತ್ । ಯಜುಃ । ಅಪಶ್ಯನ್ನ್ । **ಓಜಃ** । ಅಸಿ । ಸಹಃ । ಅಸಿ । ಬಲಮ್ । ಅಸಿ । ಭ್ರಾಜಃ । ಅಸಿ । ದೇವಾನಾಮ್ । ಧಾಮ । ನಾಮ । ಅಸಿ ।

---

**ದೇವತೆಗಳು ಕಂಡುಕೊಂಡ ಯಜುರ್ಮಂತ್ರ - ಪ್ರಭಾವ**

| | |
|---|---|
| ತೇ ದೇವಾಃ ಏತತ್ ಯಜುಃ ಅಪಶ್ಯನ್ | ಆ ದೇವತೆಗಳು ಗಾಯತ್ರೀಪ್ರೀತಿಕರವಾದ ಈ ಯಜುರ್ಮಂತ್ರವನ್ನು ತಿಳಿಸಿದರು. |

---

✣ **ಓಜಃ ಅಸಿ** = ಓ ಗಾಯತ್ರಿಯೇ ! ನೀನು ಶರೀರದಲ್ಲಿರುವ ಎಂಟನೆಯ ಧಾತುವೂ/ ತೇಜಸ್ಸೂ ಆಗಿರುವೆ. **ಸಹಃ ಅಸಿ** = ಕಷ್ಟಗಳನ್ನು ಸಹಿಸುವ ಧೈರ್ಯವೂ ಆಗಿರುವೆ. **ಬಲಮ್ ಅಸಿ** = ದೇಹೇಂದ್ರಿಯಗಳ ಬಲಸ್ವರೂಪಳೂ ನೀನೇ ಆಗಿರುವೆ; **ಭ್ರಾಜಃ ಅಸಿ** = ಪ್ರಕಾಶ ಸ್ವರೂಪಳೂ ಆಗಿರುವೆ; **ದೇವಾನಾಮ್ ಧಾಮ ಅಸಿ** = ದೇವತೆಗಳ ವಾಸಸ್ಥಾನವಾದ ಸ್ವರ್ಗವೂ ನೀನೇ ಆಗಿರುವೆ, ದೇವಾನಾಮ್ **ನಾಮ** ಅಸಿ = ಇಂದ್ರಾದಿದೇವತೆಗಳ ನಾಮಧೇಯವೂ ನೀನೇ ಆಗಿರುವೆ;

---

ಹಿಂಸಿಸಬಲ್ಲವಳೇ !] ಎಂದು ಆಮಂತ್ರಿಸಿದರು. ಆದರೆ ಗಾಯತ್ರಿಯು ಯಾವ ಪಕ್ಷಕ್ಕೂ ಬರಲಿಲ್ಲ. ಆಗ ದೇವತೆಗಳು ಗಾಯತ್ರೀಪ್ರೀತಿಕರವಾದ ಈ ಯಜುರ್ಮಂತ್ರವನ್ನು ಕಂಡುಕೊಂಡರು. 'ಗಾಯತ್ರಿಯೇ ! ನೀನೇ ದೇಹದ ಅಷ್ಟಮ ಧಾತುವು. ತೇಜಸ್ಸು, ದೇಹಶಕ್ತಿಯು, ಇಂದ್ರಿಯ ಶಕ್ತಿಯೂ, ತೇಜಸ್ಸೂ, ಪ್ರಕಾಶವೂ ಆಗಿರುವೆ. ನೀನು ದೇವತೆಗಳ ನಿವಾಸಸ್ಥಾನವಾದ ಸ್ವರ್ಗವೂ ಆಗಿರುವೆ. ಇಂದ್ರಾದಿದೇವತೆಗಳ ನಾಮಧೇಯವೂ ಆಗಿರುವೆ. ನೀನು ಸರ್ವಾನ್ನಯುಕ್ತವಾದ ಅಚೇತನ ಜಗತ್ತು, ಪೂರ್ಣಾಯುಸ್ಸುಳ್ಳ ಚೇತನ ಜಗತ್ತೂ, ಶತ್ರುಗಳನ್ನು ಸೋಲಿಸುವ ಸಾಮರ್ಥ್ಯವುಳ್ಳವಳೂ ಆಗಿರುವೆ.

**ವಿಶ್ವಮಸಿ ವಿಶ್ವಾಯುಸ್ಸರ್ವಮಸಿ ಸರ್ವಾಯುರಭಿಭೂರಿತಿ**

ವಾವ ದೇವಾ ಅಸುರಾಣಾಮೋಜೋ ಬಲಮಿಂದ್ರಿಯಂ

ವೀರ್ಯಂ ಪ್ರಜಾಂ ಪಶೂನವೃಂಜತ ಯದ್ಗಾಯತ್ರ್ಯಪ

-ಕ್ರಮ್ಯಾತಿಷ್ಠತ್

---

ವಿಶ್ವಮ್ । ಅಸಿ । ವಿಶ್ವಾಯುರಿತಿ ವಿಶ್ವ-ಆಯುಃ । ಸರ್ವಮ್ । ಅಸಿ । ಸರ್ವಾಯುರಿತಿ ಸರ್ವ-ಆಯುಃ । ಅಭಿಭೂರಿತ್ಯಭಿ-ಭೂಃ । **ಇತಿ** । ವಾವ । ದೇವಾಃ । ಅಸುರಾಣಾಮ್ । ಓಜಃ । ಬಲಮ್ । ಇಂದ್ರಿಯಮ್ । ವೀರ್ಯಮ್ । ಪ್ರಜಾಮಿತಿ ಪ್ರ-ಜಾಮ್ । ಪಶೂನ್ । ಅವೃಂಜತ । **ಯತ್** । ಗಾಯತ್ರೀ । ಅಪಕ್ರಮ್ಯೇತ್ಯಪ-ಕ್ರಮ್ಯ । ಅತಿಷ್ಠತ್ ।

---

**ವಿಶ್ವಾಯುಃ** = ಆಯುಸ್ಸಾಧನವಾದ ಎಲ್ಲಾ ಅನ್ನಗಳಿಂದ ಕೂಡಿದ; **ವಿಶ್ವಮ್ ಅಸಿ** = ಎಲ್ಲ ಅಚೇತನ ವಿಶ್ವವೂ ಆಗಿರುವೆ; **ಸರ್ವಾಯುಃ** = ಸಂಪೂರ್ಣವಾದ ಆಯುಸ್ಸುಳ್ಳ; **ಸರ್ವಮ್ ಅಸಿ** = ಚೇತನ ಜಗತ್ತೂ ಆಗಿರುವೆ; **ಅಭಿಭೂಃ** ಅಸಿ = ಶತ್ರುಗಳನ್ನು ಸೋಲಿಸತಕ್ಕವಳೂ ನೀನೇ.

---

### ಈ ಮಂತ್ರದ ಫಲ

| | |
|---|---|
| ಇತಿ ವಾವ ದೇವಾಃ ಅಸುರಾಣಾಮ್ ಓಜಃ, ಬಲಮ್, ಇಂದ್ರಿಯಮ್, ವೀರ್ಯಮ್, ಪ್ರಜಾಮ್, ಪಶೂನ್ ಅವೃಂಜತ | ಹೀಗೆಂಬ ಮಂತ್ರದಿಂದಲೇ ದೇವತೆಗಳು ಅಸುರರ ಓಜಸ್ಸು, ಬಲ, ಇಂದ್ರಿಯ, ವೀರ್ಯ, ಪ್ರಜೆ ಮತ್ತು ಪಶುಗಳನ್ನೂ ತಮ್ಮದನ್ನಾಗಿ ಮಾಡಿಕೊಂಡರು. |

### 'ಗಾಯತ್ರೀಷ್ಟಿ' ಎಂಬ ನಾಮಧೇಯದ ವಿವರಣೆ

| | |
|---|---|
| ಯತ್ ಗಾಯತ್ರೀ ಅಪಕ್ರಮ್ಯ ಅತಿಷ್ಠತ್ | ಯಾವ ಕಾರಣದಿಂದ ಗಾಯತ್ರಿಯು ದೇವಾಸುರರ ಓಜಸ್ಸು ಮೊದಲಾದವುಗಳನ್ನು ತೆಗೆದುಕೊಂಡು ದೂರದಲ್ಲಿದ್ದಳೋ |

ಸ್ಮಾದೇತಾಂ ಗಾಯತ್ರೀತೀಷ್ಟಿಮಾಹುಃ ಸಂವತ್ಸರೋ ವೈ
ಗಾಯತ್ರೀ ಸಂವತ್ಸರೋ ವೈ ತದಪಕ್ರಮ್ಯಾತಿಷ್ಠದ್ಯದೇತಯಾ
ದೇವಾ ಅಸುರಾಣಾಮೋಜೋ ಬಲಮಿಂದ್ರಿಯಂ
[ವೀರ್ಯಂ (೨)] ವೀರ್ಯಂ ಪ್ರಜಾಂ ಪಶೂನವೃಂಜತ

---

ತಸ್ಮಾತ್ । ಏತಾಮ್ । ಗಾಯತ್ರೀ । ಇತಿ । ಇಷ್ಟಿಮ್ । ಆಹುಃ । ಸಂವತ್ಸರ ಇತಿ ಸಮ್-ವತ್ಸರಃ । ವೈ । ಗಾಯತ್ರೀ । ಸಂವತ್ಸರ ಇತಿ ಸಮ್-ವತ್ಸರಃ । ವೈ । ತತ್ । ಅಪಕ್ರಮ್ಯೇತ್ಯಪ-ಕ್ರಮ್ಯ । ಅತಿಷ್ಠತ್ । **ಯತ್** । ಏತಯಾ । ದೇವಾಃ । ಅಸುರಾಣಾಮ್ । ಓಜಃ । ಬಲಮ್ । ಇಂದ್ರಿಯಮ್ । ವೀರ್ಯಮ್ । ಪ್ರಜಾಮಿತಿ ಪ್ರ-ಜಾಮ್ । ಪಶೂನ್ । ಅವೃಂಜತ ।

---

| | |
|---|---|
| ತಸ್ಮಾತ್ ಏತಾಮ್ ಗಾಯತ್ರೀ ಇತಿ ಇಷ್ಟಿಮ್ ಆಹುಃ | ಆ ಕಾರಣದಿಂದ ಈ ಇಷ್ಟಿಯನ್ನು **'ಗಾಯತ್ರೀಷ್ಟಿ'** ಎಂದು ಹೇಳುತ್ತಾರೆ. |
| ಗಾಯತ್ರೀ ಸಂವತ್ಸರಃ ವೈ | ಇಪ್ಪತ್ತನಾಲ್ಕು ಅಕ್ಷರಗಳುಳ್ಳ ಗಾಯತ್ರಿಯು ಇಪ್ಪತ್ತ ನಾಲ್ಕು ಪಕ್ಷಗಳುಳ್ಳ ಸಂವತ್ಸರದ ಸ್ವರೂಪವಾಗಿದೆ. |
| ಸಂವತ್ಸರಃ ವೈ ತತ್ ಅಪಕ್ರಮ್ಯ ಅತಿಷ್ಠತ್ | ಸಂವತ್ಸರವೇ ಗಾಯತ್ರೀರೂಪದಿಂದ ಆಗ ದೇವಾ ಸುರರಿಂದ ದೂರ ಸರಿದಿದ್ದಿತು |

**ಸಂವರ್ಗೇಷ್ಟಿಯೆಂಬ ಹೆಸರಿನ ಪ್ರಶಂಸೆ**

| | |
|---|---|
| ಯತ್ ಏತಯಾ ದೇವಾಃ ಅಸುರಾಣಾಮ್ | ಯಾವ ಕಾರಣದಿಂದ ಈ ಇಷ್ಟಿಯಿಂದ ದೇವತೆ ಗಳು ದೇವವಿರೋಧಿಗಳಾದ ಅಸುರರ |
| ಓಜಃ, ಬಲಮ್, ಇಂದ್ರಿಯಮ್, ವೀರ್ಯಮ್, ಪ್ರಜಾಮ್, ಪಶೂನ್ ಅವೃಂಜತ | ಓಜಸ್ಸು, ದೇಹೇಂದ್ರಿಯಶಕ್ತಿ, ಪರಾಕ್ರಮ, ಮಕ್ಕಳು ಮತ್ತು ಪಶುಗಳು ಇವೆಲ್ಲವನ್ನೂ ವಶ ಪಡಿಸಿಕೊಂಡರೋ |

ತಸ್ಮಾದೇತಾಗ್ಂ ಸಂವರ್ಗ ಇತೀಷ್ಟಿಮಾಹುರ್ಯೋ

ಭ್ರಾತೃವ್ಯವಾನ್ತ್ಸ್ಯಾತ್ಸ ಸ್ಪರ್ಧಮಾನ ಏತಯೇಷ್ಟ್ಯಾ ಯಜೇತಾಗ್ನಯೇ

ಸಂವರ್ಗಾಯ ಪುರೋಡಾಶಮಷ್ಟಾಕಪಾಲಂ ನಿರ್ವಪೇತ್ತಗ್ಂ

---

ತಸ್ಮಾತ್ । ಏತಾಮ್ । ಸಂವರ್ಗ ಇತಿ ಸಮ್-ವರ್ಗಃ । ಇತಿ । ಇಷ್ಟಿಮ್ । ಆಹುಃ । ಯಃ । ಭ್ರಾತೃವ್ಯವಾನಿತಿ ಭ್ರಾತೃವ್ಯ-ವಾನ್ । ಸ್ಯಾತ್ । ಸಃ । ಸ್ಪರ್ಧಮಾನಃ । ಏತಯಾ । ಇಷ್ಟ್ಯಾ । ಯಜೇತ । ಅಗ್ನಯೇ । ಸಂವರ್ಗಾಯೇತಿ ಸಮ್-ವರ್ಗಾಯ । ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ವಪೇತ್ ।

---

| | |
|---|---|
| ತಸ್ಮಾತ್ ಏತಾಮ್ ಇಷ್ಟಿಮ್ ಸಂವರ್ಗ ಇತಿ ಆಹುಃ | ಆ ಕಾರಣದಿಂದ ಈ ಇಷ್ಟಿಯನ್ನು 'ಸಂವರ್ಗ'ವೆಂದು ಹೇಳುತ್ತಾರೆ. |

**ಈ ಇಷ್ಟಿಯ ವಿಧಿ**

| | |
|---|---|
| ಯಃ | ಯಾವ ಯಜಮಾನನು |
| ಭ್ರಾತೃವ್ಯವಾನ್ ಸ್ಯಾತ್ ಸಃ ಸ್ಪರ್ಧಮಾನಃ ಏತಯಾ ಇಷ್ಟ್ಯಾ ಯಜೇತ | ಶತ್ರುಗಳುಳ್ಳವನೋ, ಶತ್ರುಗಳಿಗಿಂತ ಮೇಲಾಗಬೇಕೆಂದು ಸ್ಪರ್ಧಿಸುವ ಅವನು ಈ ಗಾಯತ್ರೀಷ್ಟಿ/ಸಂವರ್ಗೇಷ್ಟಿಯನ್ನು ಅನುಷ್ಠಿಸಬೇಕು. |
| ಅಗ್ನಯೇ ಸಂವರ್ಗಾಯ ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್ | *ಸಂವರ್ಗಾಗ್ನಿಗಾಗಿ ಅಷ್ಟಾಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. |

---

**'ಓಜೋಽಸಿ'** ಮೊದಲಾದ ಮಂತ್ರದಿಂದ ಗಾಯತ್ರಿಯನ್ನು ಒಲಿಸಿಕೊಂಡು ದೇವತೆಗಳು ಗಾಯತ್ರಿಯು ತೆಗೆದುಕೊಂಡು ಹೋಗಿದ್ದ ತಮ್ಮ ಓಜಸ್ಸು ಮೊದಲಾದವುಗಳೊಡನೆ ಅಸುರರ ಓಜಸ್ಸೇ ಮೊದಲಾದವುಗಳನ್ನೂ ತಮ್ಮ ಸ್ವಾಧೀನಪಡಿಸಿಕೊಂಡರು.

---

* 'ಸಂವರ್ಗಗ್ಂ ಸಗ್ಂ ರಯಿಜಯ' ಎಂದು ಸಂವರ್ಗಪದಯುಕ್ತವಾದ ಮಂತ್ರದಿಂದ ಸ್ತುತನಾದ ಅಗ್ನಿ

ಶೃತಮಾಸನ್ನಮೇತೇನ ಯಜುಷಾಽಭಿಮೃಶೇದೋಜ ಏವ ಬಲಮಿಂದ್ರಿಯಂ ವೀರ್ಯಂ ಪ್ರಜಾಂ ಪಶೂನ್ಭ್ರಾತೃವ್ಯಸ್ಯ ವೃಂಕ್ತೇ

---

ತಮ್ । ಶೃತಮ್ । ಆಸನ್ನಮಿತ್ಯಾ-ಸನ್ನಮ್ । ಏತೇನ । ಯಜುಷಾ । ಅಭೀತಿ । ಮೃಶೇತ್ । ಓಜಃ । ಏವ । ಬಲಮ್ । ಇಂದ್ರಿಯಮ್ । ವೀರ್ಯಮ್ । ಪ್ರಜಾಮಿತಿ ಪ್ರ-ಜಾಮ್ । ಪಶೂನ್ । ಭ್ರಾತೃವ್ಯಸ್ಯ । ವೃಂಕ್ತೇ ।

---

**ಯಾಗದಲ್ಲಿ ವಿಶೇಷ ವಿಧಿ; ಅದರ ಫಲ**

| | |
|---|---|
| ತಮ್ | ಪಕ್ವವಾಗಿ ವೇದಿಯಲ್ಲಿ ಆ ಸಾಧನೆ ಮಾಡಿರುವ ಆ ಅಷ್ಟಾಕಪಾಲ ಪುರೋಡಾಶ ಹವಿಸ್ಸನ್ನು |
| ಶೃತಮ್ ಆಸನ್ನಮ್ ಏತೇನ ಯಜುಷಾ ಅಭಿಮೃಶೇತ್ | ಈ 'ಓಜೋಽಸಿ' ಮೊದಲಾದ ಯಜುರ್ಮಂತ್ರದಿಂದ ಅಭಿಮರ್ಶನ (ಸ್ಪರ್ಶ) ಮಾಡಬೇಕು. |
| ಭ್ರಾತೃವ್ಯಸ್ಯ ಓಜಃ, ಬಲಮ್ ಇಂದ್ರಿಯಮ್, ವೀರ್ಯಮ್, ಪ್ರಜಾಮ್, ಪಶೂನ್ ವೃಂಕ್ತೇ ಏವ | ಈ ಹವಿರಭಿಮರ್ಶನ ಮಂತ್ರದಿಂದ ಯಜಮಾನನು ಶತ್ರುವಿನ ಓಜಸ್ಸು, ದೇಹಬಲ, ಇಂದ್ರಿಯಶಕ್ತಿ, ಶತ್ರುಗಳನ್ನು ಗೆಲ್ಲುವ ಸಾಮರ್ಥ್ಯ, ಪ್ರಜೆ, ಪಶುಗಳು ಇವೆಲ್ಲವನ್ನೂ ವಶಪಡಿಸಿಕೊಂಡೇ ಬಿಡುತ್ತಾನೆ. |

---

ಗಾಯತ್ರಿಯು ದೇವತೆಗಳ ಮತ್ತು ಅಸುರರ ಓಜಸ್ಸೇ ಮೊದಲಾದವುಗಳನ್ನು ತೆಗೆದುಕೊಂಡು ದೂರ ಹೋಗಿದ್ದರಿಂದ ಈ ಇಷ್ಟಿಗೆ 'ಗಾಯತ್ರೀಷ್ಟಿ'ಯೆಂದು ಹೇಳುತ್ತಾರೆ. ಗಾಯತ್ರಿಗೆ ಇಪ್ಪತ್ತುನಾಲ್ಕು ಅಕ್ಷರಗಳು. ಸಂವತ್ಸರಕ್ಕೆ ಇಪ್ಪತ್ತನಾಲ್ಕು ಪಕ್ಷಗಳು. ಹೀಗೆ ಗಾಯತ್ರಿಯು ಸಂವತ್ಸರ ರೂಪಿಯಾಗಿದೆ. ಸಂವತ್ಸರವು ಎಲ್ಲಕ್ಕೂ ಆಧಾರ. ಆದುದರಿಂದಲೇ ಈ ಇಷ್ಟಿಯು ಪ್ರಶಸ್ತವಾಗಿದೆ.

ಈ ಯಾಗದಲ್ಲಿ ದೇವತೆಗಳು 'ಓಜೋಽಸಿ' ಇತ್ಯಾದಿ ಮಂತ್ರದಿಂದ ಹವಿರಭಿಮರ್ಶನ ಮಾಡಿ, ಗಾಯತ್ರಿಯ ಅನುಗ್ರಹವನ್ನು ಪಡೆದು ಅಸುರರ ವೀರ್ಯಾದಿಗಳನ್ನು ಅವರಲ್ಲಿ ಇಲ್ಲದಂತೆ ಮಾಡಿ, ತಮ್ಮ ವಶಪಡಿಸಿಕೊಂಡರು. ಆದುದರಿಂದ ಈ ಯಾಗಕ್ಕೆ 'ಸಂವರ್ಗ'ವೆಂದೂ ಹೇಳುತ್ತಾರೆ.

ಭವತ್ಯಾತ್ಮನಾ ಪರಾಽಸ್ಯ ಭ್ರಾತೃವ್ಯೋ

ಭವತಿ ॥೧೧-3॥

[ಬಲಮಸ್ಮೈತಯಾ ದೇವಾ ಅಸುರಾಣಾಮೋಜೋ ಬಲಮಿಂದ್ರಿಯಂ ವೀರ್ಯಂ

ಪಂಚಚತ್ವಾರಿಗ್ಂಶಚ್ಚ ।]

---

ಭವತಿ । ಆತ್ಮನಾ । ಪರೇತಿ । ಅಸ್ಯ । ಭ್ರಾತೃವ್ಯಃ । ಭವತಿ ॥೩॥

---

| | |
|---|---|
| ಭವತಿ ಆತ್ಮನಾ | ಯಜಮಾನನು ತಾನು ವಿಜಯಿಯಾಗುತ್ತಾನೆ. |
| ಅಸ್ಯ ಭ್ರಾತೃವ್ಯಃ ಪರಾ ಭವತಿ | ಈ ಯಜಮಾನನ ಹಗೆಯು ಸೋತು ಹೋಗುತ್ತದೆ. |

---

ಯಾವನು ತನ್ನ ಶತ್ರುಗಳನ್ನು ಜಯಿಸಿ ತಾನು ಮೇಲಾಗಿರಬೇಕೆಂದು ಬಯಸುತ್ತಾನೆಯೋ ಅವನು ಸಂವರ್ಗಾಗ್ನಿಗಾಗಿ ಅಷ್ಟಾಕಪಾಲ ಪುರೋಡಾಶ ಹವಿಸ್ಸನ್ನು ಯಾಗ ಮಾಡಬೇಕು. ಶತ್ರುವನ್ನು ಸೋಲಿಸಬೇಕೆಂದಿರುವ ಯಜಮಾನನು ವೇದಿಯಲ್ಲಿ ಆ ಸಾಧನೆ ಮಾಡಿರುವ ಅಷ್ಟಾಕಪಾಲ ಪುರೋಡಾಶ ಹವಿಸ್ಸನ್ನು 'ಓಜೋಽಸಿ' ಇತ್ಯಾದಿಯಾದ ಯಜುರ್ಮಂತ್ರದಿಂದ ಮುಟ್ಟಬೇಕು. ಇದರಿಂದ ಯಜಮಾನನು ಹಗೆಯ ಓಜಸ್ಸೇ ಮೊದಲಾದವುಗಳನ್ನು ಶತ್ರುವಿಗಿಲ್ಲದಂತೆ ಮಾಡಿ ತನ್ನದಾಗುವಂತೆ ಮಾಡಿಕೊಳ್ಳುತ್ತಾನೆ. ಹೀಗೆ ಯಜಮಾನನು ಜಯಶಾಲಿಯಾಗುತ್ತಾನೆ. ಶತ್ರುವು ಸೋತುಹೋಗುತ್ತಾನೆ.

★ ★ ★

## ॥ ಚತುರ್ಥೋಽನುವಾಕಃ ॥

ಪ್ರಜಾಪತಿಃ ಪ್ರಜಾ ಅಸೃಜತ ತಾ ಅಸ್ಮಾತ್ಸೃಷ್ಟಾಃ ಪರಾಚೀರಾ ಯನ್ತಾ ಯತ್ರಾವಸನ್ತತೋ ಗರ್ಮುದುದತಿಷ್ಠತ್ತಾ ಬೃಹಸ್ಪತಿ ಶ್ಚಾನ್ವವೈತಾಗ್ಂ

---

**ಪ್ರಜಾಪತಿರಿತಿ ಪ್ರಜಾ-ಪತಿಃ** । ಪ್ರಜಾ ಇತಿ ಪ್ರ-ಜಾಃ । ಅಸೃಜತ । ತಾಃ । ಅಸ್ಮಾತ್ । ಸೃಷ್ಟಾಃ । ಪರಾಚೀಃ । ಆಯನ್ನ್ । ತಾಃ । ಯತ್ರ । ಅವಸನ್ನ್ । ತತಃ । ಗರ್ಮುತ್ । ಉದಿತಿ । ಅತಿಷ್ಠತ್ । ತಾಃ । ಬೃಹಸ್ಪತಿಃ । ಚ । ಅನ್ವವೈತಾಮಿತ್ಯನು-ಅವೈತಾಮ್ ।

---

**ಮೂರನೆಯ ಅನುವಾಕದಲ್ಲಿ ಸಂವರ್ಗೇಷ್ಟಿಯನ್ನು ಹೇಳಲಾಯಿತು. ಈ ನಾಲ್ಕನೆಯ ಅನುವಾಕದಲ್ಲಿ ಗಾರ್ಮುತಚರುಯಾಗಗಳು ಹೇಳಲ್ಪಟ್ಟವೆ. ಅದಕ್ಕಾಗಿನ ಉಪಾಖ್ಯಾನವಿದೆ**

| | |
|---|---|
| ಪ್ರಜಾಪತಿಃ ಪ್ರಜಾಃ ಅಸೃಜತ | ಪ್ರಜಾಪತಿಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸಿದನು. |
| ಅಸ್ಮಾತ್ ಸೃಷ್ಟಾಃ ತಾಃ ಪರಾಚೀಃ ಆಯನ್ನ್ | ಈತನು ಸೃಷ್ಟಿಸಿದ ಪ್ರಜೆಗಳು ಈತನಿಂದ ದೂರವಾಗಿ ಹೊರಟುಹೋದರು. |
| ತಾಃ ಯತ್ರ ಅವಸನ್ನ್ ತತಃ | ಆ ಪ್ರಜೆಗಳು ಎಲ್ಲಿ ವಾಸವಾಗಿದ್ದರೋ ಅಲ್ಲಿ |
| ಗರ್ಮುತ್ ಉದತಿಷ್ಠತ್ | ತಾನಾಗಿಯೇ ಬೆಳೆಯುವ ಕಾಡುಹೆಸರುಕಾಳು ಉದ್ಭವಿಸಿತು. |
| ತಾಃ ಬೃಹಸ್ಪತಿಃ ಚ ಅನ್ವವೈತಾಮ್ | ಆ ಪ್ರಜೆಗಳನ್ನು ಬೃಹಸ್ಪತಿಯೂ, ಪ್ರಜಾಪತಿ ಬ್ರಹ್ಮನೂ ಅನುಸರಿಸಿ ಹೋದರು. |

---

ಪ್ರಜಾಪತಿಬ್ರಹ್ಮನು ಪ್ರಜೆಗಳನ್ನು ಉತ್ಪತ್ತಿ ಮಾಡಿದನು. ಆ ಪ್ರಜೆಗಳು ಅವನಿಂದ ದೂರವಾಗಿ ಹೊರಟುಹೋದರು. ಹೊರಟು ಹೋದ ಪ್ರಜೆಗಳು ವಾಸಿಸುವ ಕಡೆಯಲ್ಲಿ *ಗರ್ಮುತ್ ಧಾನ್ಯವು ಹುಟ್ಟಿತು. ಅನಂತರ ಬೃಹಸ್ಪತಿಯೂ, ಪ್ರಜಾಪತಿಯೂ ಪ್ರಜೆಗಳನ್ನು ಹಿಂಬಾಲಿಸಿ

---

* **ಕಾಡುಹೆಸರುಕಾಳು ಧಾನ್ಯ. ಬತ್ತದ ಗದ್ದೆಯಲ್ಲಿ ಮಧ್ಯದಲ್ಲಿ ಬೆಳೆಯುವ ಹುಲಿ ಬೀಜ ಎಂದು ಕೆಲವರ ಮತ. ತೃಣಧಾನ್ಯವಿಶೇಷವೆಂದೂ ವಿವರಿಸಲಾಗಿದೆ.**

ಸೋऽಬ್ರವೀದ್ಬೃಹಸ್ಪತಿರನಯಾ ತ್ವಾ ಪ್ರತಿಷ್ಠಾನ್ಯಥ ತ್ವಾ ಪ್ರಜಾ ಉಪಾವರ್ತ್ಸ್ಯಂತೀತಿ ತಂ ಪ್ರಾತಿಷ್ಠತ್ತತೋ ವೈ ಪ್ರಜಾಪತಿಂ ಪ್ರಜಾ ಉಪಾವರ್ತಂತ

---

ಸಃ । ಅಬ್ರವೀತ್ । ಬೃಹಸ್ಪತಿಃ । ಅನಯಾ । ತ್ವಾ । ಪ್ರೇತಿ । ತಿಷ್ಠಾನಿ । ಅಥ । ತ್ವಾ । ಪ್ರಜಾ ಇತಿ ಪ್ರ-ಜಾಃ । ಉಪಾವರ್ತ್ಸ್ಯಂತೀತ್ಯುಪ-ಆವರ್ತ್ಸ್ಯಂತಿ । ಇತಿ । ತಮ್ । ಪ್ರೇತಿ । ಅತಿಷ್ಠತ್ । ತತಃ । ವೈ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ಪ್ರಜಾ ಇತಿ ಪ್ರ-ಜಾಃ । ಉಪಾವರ್ತಂತೇತ್ಯುಪ-ಆವರ್ತಂತ ।

---

| | |
|---|---|
| ಸಃ ಬೃಹಸ್ಪತಿಃ | ಆ ಬೃಹಸ್ಪತಿಯು [ಪ್ರಜಾಪತಿಗೆ] |
| ಅನಯಾ ತ್ವಾ ಪ್ರತಿಷ್ಠಾನಿ | ಈ ಗರ್ಮುದ್ಧಾನ್ಯದಿಂದ ನಿನ್ನನ್ನು ಧಾನ್ಯವುಳ್ಳವನನ್ನಾಗಿ ನೆಲೆಗೊಳಿಸುವೆನು, |
| ಅಥ ತ್ವಾ ಪ್ರಜಾಃ ಉಪಾವರ್ತ್ಸ್ಯಂತಿ ಇತಿ ಅಬ್ರವೀತ್ | ಬಳಿಕ ಪ್ರಜೆಗಳು ನಿನ್ನ ಬಳಿಗೆ ಬರುತ್ತಾರೆಂದು ಹೇಳಿದನು. |
| ತಮ್ ಪ್ರಾತಿಷ್ಠತ್ ತತಃ ವೈ ಪ್ರಜಾಪತಿಮ್ ಪ್ರಜಾಃ ಉಪಾವರ್ತಂತ | [ಅನಂತರ ಬೃಹಸ್ಪತಿಯು ಗಾರ್ಮುತಚರುಯಾಗವನ್ನು ಮಾಡಿ] ಪ್ರಜಾಪತಿಯನ್ನು ಧಾನ್ಯವಂತನನ್ನಾಗಿ ಮಾಡಿದನು. ಬಳಿಕ ಪ್ರಜೆಗಳು ಪ್ರಜಾಪತಿಯ ಬಳಿಗೆ ಹಿಂದಿರುಗಿದರು. |

---

ಹೋದರು. ಆಗ ಬೃಹಸ್ಪತಿಯು 'ಈ ಪ್ರದೇಶದಲ್ಲಿ ಹುಟ್ಟಿರುವ ಈ ಗರ್ಮುದ್ಧಾನ್ಯದಿಂದ ನಿನ್ನನ್ನು ಧಾನ್ಯವಂತನನ್ನಾಗಿ ಮಾಡುತ್ತೇನೆ. ಆಗ ಪ್ರಜೆಗಳು ನಿನ್ನ ಬಳಿಗೆ ಬರುತ್ತಾರೆ' ಎಂದು ಹೇಳಿದನು. ಹಾಗೆಯೇ ಗಾರ್ಮುತಚರುಯಾಗವನ್ನು ಮಾಡಿದನು. ಅದರಿಂದ ಪ್ರಜಾಪತಿಯು ಧನವಂತನಾದನು. ಪ್ರಜೆಗಳು ಪ್ರಜಾಪತಿಯ ಬಳಿಗೆ ಹಿಂದಿರುಗಿದರು.

ಯಃ ಪ್ರಜಾಕಾಮಃ ಸ್ಯಾತ್ತಸ್ಮಾ ಏತಂ ಪ್ರಾಜಾಪತ್ಯಂ

ಗಾರ್ಮುತಂ ಚರುಂ ನಿರ್ವಪೇತ್ಪ್ರಜಾಪತಿಮೇವ

[ಪ್ರಜಾಪತಿಮ್ (೧) ಏವ] ಸ್ವೇನ ಭಾಗಧೇಯೇನೋಪ

ಧಾವತಿ ಸ ಏವಾಸ್ಮೈ ಪ್ರಜಾಂ ಪ್ರಜನಯತಿ

---

**ಯಃ** । ಪ್ರಜಾಕಾಮ ಇತಿ ಪ್ರಜಾ-ಕಾಮಃ । ಸ್ಯಾತ್ । ತಸ್ಮೈ । ಏತಮ್ । ಪ್ರಾಜಾಪತ್ಯಮಿತಿ ಪ್ರಾಜಾ-ಪತ್ಯಮ್ । ಗಾರ್ಮುತಮ್ । ಚರುಮ್ । ನಿರಿತಿ । ವಪೇತ್ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ಸಃ । ಏವ । ಅಸ್ಮೈ । ಪ್ರಜಾಮಿತಿ ಪ್ರ-ಜಾಮ್ । ಪ್ರೇತಿ । ಜನಯತಿ ।

---

**ಪ್ರಾಜಾಪತ್ಯಗಾರ್ಮುತಯಾಗದ ವಿಧಿ; ಅದರ ಫಲ**

| | |
|---|---|
| ಯಃ ಪ್ರಜಾಕಾಮಃ ಸ್ಯಾತ್ ತಸ್ಮೈ ಏತಮ್ ಪ್ರಾಜಾಪತ್ಯಮ್ ಗಾರ್ಮುತಮ್ ಚರುಮ್ ನಿರ್ವಪೇತ್ | ಯಾವ ಯಜಮಾನನು ಪ್ರಜೆಗಳನ್ನು ಬಯಸುತ್ತಾನೆಯೋ ಅವನಿಗಾಗಿ ಪ್ರಜಾಪತಿದೇವತಾಕವಾದ ಗಾರ್ಮುತಚರುಯಾಗವನ್ನು ಅನುಷ್ಠಿಸಬೇಕು. |
| ಪ್ರಜಾಪತಿಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಹವಿಃಪ್ರದಾನದಿಂದ ಯಜಮಾನನು ಪ್ರಜಾಪತಿಯನ್ನೇ ಸೇವಿಸುತ್ತಾನೆ. |
| ಸಃ ಏವ ಅಸ್ಮೈ ಪ್ರಜಾಮ್ ಪ್ರಜನಯತಿ | ಆ ಪ್ರಜಾಪತಿಯೇ ಈ ಯಜಮಾನನಿಗೆ ಪ್ರಜೆಗಳನ್ನುಂಟುಮಾಡುತ್ತಾನೆ. |

---

ಪ್ರಜಾಕಾಮನಾದವನು ಈ ಪ್ರಾಜಾಪತ್ಯಗಾರ್ಮುತಚರುಯಾಗವನ್ನು ಮಾಡಬೇಕು. ಇದರಿಂದ ಪ್ರಜಾಪತಿಯು ತೃಪ್ತನಾಗಿ ಈ ಯಜಮಾನನಿಗೆ ಪುತ್ರಾದಿಪ್ರಜೆಗಳನ್ನು ಕೊಡುತ್ತಾನೆ.

ಪ್ರಜಾಪತಿಃ ಪಶೂನಸೃಜತ ತೇऽಸ್ಮಾತ್ಸೃಷ್ಟಾಃ ಪರಾಂಚ ಆಯನ್ತೇ

ಯತ್ರಾವಸನ್ತತೋ ಗರ್ಮುದುದತಿಷ್ಠತ್ತಾನ್ಪೂಷಾ ಚಾನ್ವವೈತಾಗ್ಂ

ಸೋऽಬ್ರವೀತ್ಪೂಷಾऽನಯಾ ಮಾ ಪ್ರತಿಷ್ಠಾಥ ತ್ವಾ

---

**ಪ್ರಜಾಪತಿರಿತಿ ಪ್ರಜಾ-ಪತಿಃ । ಪಶೂನ್ । ಅಸೃಜತ । ತೇ । ಅಸ್ಮಾತ್ । ಸೃಷ್ಟಾಃ । ಪರಾಂಚಃ । ಆಯನ್ । ತೇ । ಯತ್ರ । ಅವಸನ್ । ತತಃ । ಗರ್ಮುತ್ । ಉದಿತಿ । ಅತಿಷ್ಠತ್ । ತಾನ್ । ಪೂಷಾ । ಚ । ಅನ್ವವೈತಾಮಿತ್ಯನು-ಅವೈತಾಮ್ । ಸಃ । ಅಬ್ರವೀತ್ । ಪೂಷಾ । ಅನಯಾ । ಮಾ । ಪ್ರೇತಿ । ತಿಷ್ಠ । ಅಥ । ತ್ವಾ ।**

---

## ಸೋಮಾಪೌಷ್ಣಗಾರ್ಮುತಯಾಗದ ಉಪಾಖ್ಯಾನ

| | |
|---|---|
| ಪ್ರಜಾಪತಿಃ ಪಶೂನ್ ಅಸೃಜತ | ಪ್ರಜಾಪತಿಬ್ರಹ್ಮನು ಪಶುಗಳನ್ನು ಸೃಷ್ಟಿಸಿದನು. |
| ಅಸ್ಮಾತ್ ಸೃಷ್ಟಾಃ ತೇ ಪರಾಂಚಃ ಆಯನ್ | ಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟ ಪಶುಗಳು ಪ್ರಜಾಪತಿಯಿಂದ ದೂರಕ್ಕೆ ಹೊರಟುಹೋದವು. |
| ತೇ ಯತ್ರ ಅವಸನ್ ತತಃ ಗರ್ಮುತ್ ಉದತಿಷ್ಠತ್ | ಪಶುಗಳು ಎಲ್ಲಿ ವಾಸಮಾಡುತ್ತಿದ್ದವೋ ಅಲ್ಲಿ ಕಾಡುಹೆಸರುಕಾಳುಧಾನ್ಯವು ಹುಟ್ಟಿತು. |
| ತಾನ್ ಪೂಷಾ ಚ ಅನ್ವವೈತಾಮ್ | ಆ ಪಶುಗಳನ್ನು ಪೂಷನೂ ಪ್ರಜಾಪತಿಯೂ ಹಿಂಬಾಲಿಸಿ ಹೋದರು. |
| ಸಃ ಪೂಷಾ ಅನಯಾ ಮಾ ಪ್ರತಿಷ್ಠ | ಆ ಪೂಷದೇವನು ಪ್ರಜಾಪತಿಗೆ "ಈ ಗಾರ್ಮುತ ಯಾಗದಿಂದ ನನ್ನನ್ನು ಧಾನ್ಯವಂತನನ್ನಾಗಿ ಮಾಡು. |
| ಅಥ ತ್ವಾ | ಅನಂತರ |

---

ಪ್ರಜಾಪತಿಯು ಪಶುಗಳನ್ನು ಸೃಷ್ಟಿಸಿದನು. ಸೃಷ್ಟಿಸಲ್ಪಟ್ಟ ಆ ಪಶುಗಳು ಪ್ರಜಾಪತಿಯನ್ನು ತ್ಯಜಿಸಿ, ದೂರಕ್ಕೆ ಹೊರಟುಹೋದವು. ಆ ಪಶುಗಳು ವಾಸಿಸುವ ಕಡೆಯಲ್ಲಿ ಆರಣ್ಯಕ ಮುದ್ಗ ಧಾನ್ಯವು ಬೆಳೆಯಿತು. ಆ ಪಶುಗಳನ್ನು ಪೂಷದೇವನೂ, ಪ್ರಜಾಪತಿಯೂ ಹಿಂಬಾಲಿಸಿ ಹೋದರು.

ಪಶವ ಉಪಾವರ್ತ್ಸ್ಯಂತೀತಿ ಮಾಂ ಪ್ರತಿಷ್ಠೇತಿ ಸೋಮೋಽ

ಬ್ರವೀನ್ಮಮ ವಾ [ವೈ (೨) ಅಕೃಷ್ಟಪಚ್ಯಮಿತ್ಯುಭೌ] ಅಕೃಷ್ಟ

ಪಚ್ಯಮಿತ್ಯುಭೌ ವಾಂ ಪ್ರತಿಷ್ಠಾನೀತ್ಯಬ್ರವೀತ್ತೌ

ಪ್ರಾತಿಷ್ಠತ್ತತೋ ವೈ

---

ಪಶವಃ। ಉಪಾವರ್ತ್ಸ್ಯಂತೀತ್ಯುಪ-ಆವರ್ತ್ಸ್ಯಂತಿ। ಇತಿ। ಮಾಮ್। ಪ್ರೇತಿ। ತಿಷ್ಠ। ಇತಿ। ಸೋಮಃ। ಅಬ್ರವೀತ್। ಮಮ। ವೈ। ಅಕೃಷ್ಟಪಚ್ಯಮಿತ್ಯಕೃಷ್ಟ-ಪಚ್ಯಮ್। ಇತಿ। ಉಭೌ। ವಾಮ್। ಪ್ರೇತಿ। ತಿಷ್ಠಾನಿ। ಇತಿ। ಅಬ್ರವೀತ್। ತೌ। ಪ್ರೇತಿ। ಅತಿಷ್ಠತ್। ತತಃ। ವೈ।

---

| | |
|---|---|
| ಪಶವಃ ಉಪಾವರ್ತ್ಸ್ಯಂತಿ ಇತಿ ಅಬ್ರವೀತ್ | ಪಶುಗಳು ನಿನ್ನನ್ನು ಆಶ್ರಯಿಸುತ್ತವೆ'' ಎಂದು ಹೇಳಿದನು. |
| ಸೋಮಃ ಮಾಮ್ ಪ್ರತಿಷ್ಠ ಇತಿ ಅಕೃಷ್ಟಪಚ್ಯಮ್ ಮಮ ವೈ ಇತಿ ಅಬ್ರವೀತ್ | ಸೋಮನು ''ನನಗಾಗಿ ಯಾಗ ಮಾಡು ಎಂದೂ, ಕೃಷಿ ಮಾಡದೇ ತಾನಾಗಿ ಬೆಳೆಯುವ ಧಾನ್ಯವು ನನ್ನದಷ್ಟೇ'' ಎಂದೂ, ಹೇಳಿದನು. |

**ಸೋಮಾಪೌಷ್ಣಯಾಗದ ವಿಧಿ; ಫಲ**

| | |
|---|---|
| ಉಭೌ ವಾಮ್ ಪ್ರತಿಷ್ಠಾನಿ ಇತಿ ಅಬ್ರವೀತ್ | ಆಗ ಪ್ರಜಾಪತಿಯು ''ನಿಮ್ಮಿಬ್ಬರಿಗಾಗಿಯೂ ಈ ಗಾರ್ಮುತಚರುಯಾಗವನ್ನು ಅನುಷ್ಠಿಸಿ, ನಿಮ್ಮಿಬ್ಬರನ್ನೂ ಧಾನ್ಯವಂತರನ್ನಾಗಿ ಮಾಡುತ್ತೇನೆ'' ಎಂದನು. |
| ತೌ ಪ್ರಾತಿಷ್ಠತ್ | ಹಾಗೆಯೇ ಈ ಯಾಗವನ್ನು ಮಾಡಿ ಸೋಮಾಪೂಷಣರನ್ನು ಪ್ರತಿಷ್ಠಿತರನ್ನಾಗಿ ಮಾಡಿದನು. |
| ತತಃ ವೈ | ಅನಂತರ |

---

ಆ ಪೂಷದೇವನು ಪ್ರಜಾಪತಿಗೆ 'ಈ ಗಾರ್ಮುತಚರುವಿನಿಂದ ನನ್ನನ್ನು ಧಾನ್ಯವಂತನ

ಪ್ರಜಾಪತಿಂ ಪಶವ ಉಪಾವರ್ತಂತ ಯಃ ಪಶುಕಾಮಃ

ಸ್ಯಾತ್ತಸ್ಮಾ ಏತಗ್ಂ ಸೋಮಾಪೌಷ್ಣಂ ಗಾರ್ಮುತಂ ಚರುಂ

ನಿರ್ವಪೇತ್ಸೋಮಾಪೂಷಣಾವೇವ ಸ್ವೇನ

ಭಾಗಧೇಯೇನೋಪಧಾವತಿ

---

ಪ್ರಜಾಪತಿಮಿತಿ ಪ್ರಜಾ-ಪತಿಮ್ । ಪಶವಃ । ಉಪಾವರ್ತಂತೇತ್ಯುಪ-ಆವರ್ತಂತ । ಯಃ। ಪಶುಕಾಮ ಇತಿ ಪಶು-ಕಾಮಃ । ಸ್ಯಾತ್ । ತಸ್ಮೈ । ಏತಮ್ । ಸೋಮಾಪೌಷ್ಣಮಿತಿ ಸೋಮಾ-ಪೌಷ್ಣಮ್ । ಗಾರ್ಮುತಮ್ । ಚರುಮ್ । ನಿರಿತಿ । ವಪೇತ್ । ಸೋಮಾಪೂಷಣಾವಿತಿ ಸೋಮಾ-ಪೂಷಣೌ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ ।

---

| | |
|---|---|
| ಪ್ರಜಾಪತಿಮ್ ಪಶವಃ ಉಪಾವರ್ತಂತ | ಪಶುಗಳು ಮತ್ತೆ ಪ್ರಜಾಪತಿಯನ್ನು ಆಶ್ರಯಿಸಿದವು. |
| ಯಃ ಪಶುಕಾಮಃ ಸ್ಯಾತ್ | ಯಾವ ಯಜಮಾನನು ಪಶುಗಳನ್ನು ಅಪೇಕ್ಷಿಸುತ್ತಾನೆಯೋ |
| ತಸ್ಮೈ ಏತಮ್ ಸೋಮಾ ಪೌಷ್ಣಮ್ ಗಾರ್ಮುತಮ್ ಚರುಮ್ ನಿರ್ವಪೇತ್ | ಆ ಯಜಮಾನನಿಗಾಗಿ ಸೋಮಾಪೂಷ ದೇವತಾಕವಾದ ಗಾರ್ಮುತಚರುಯಾಗವನ್ನು ಅನುಷ್ಠಿಸಬೇಕು. |
| ಸೋಮಾಪೂಷಣೌ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಗಾರ್ಮುತಚರುಯಾಗದಿಂದ ಸೋಮಾಪೂಷದೇವತೆಗಳನ್ನು ಸೇವಿಸಿದಂತಾಗುತ್ತದೆ. |

---

ನ್ನಾಗಿ ಮಾಡು. ಬಳಿಕ ಪಶುಗಳು ನಿನ್ನ ಬಳಿಗೆ ಬರುತ್ತವೆ' ಎಂದು ಹೇಳಿದನು. ಆಗಲೇ

ತಾವೇವಾಸ್ಮೈ ಪಶೂನ್ಪ್ರಜನಯತಸ್ಸೋಮೋ ವೈ

ರೇತೋಧಾಃ ಪೂಷಾ ಪಶೂನಾಂ ಪ್ರಜನಯಿತಾ

---

ತೌ । ಏವ । ಅಸ್ಮೈ । ಪಶೂನ್ । ಪ್ರೇತಿ । ಜನಯತಃ । **ಸೋಮಃ** । ವೈ । ರೇತೋಧಾ ಇತಿ ರೇತಃ-ಧಾಃ । ಪೂಷಾ । ಪಶೂನಾಮ್ । ಪ್ರಜನಯಿತೇತಿ ಪ್ರ-ಜನಯಿತಾ ।

---

| | |
|---|---|
| ಅಸ್ಮೈ ತೌ ಏವ ಪಶೂನ್ ಪ್ರಜನಯತಃ | ಸೋಮಾಪೂಷರೇ ಈ ಯಜಮಾನನಿಗಾಗಿ ಪಶುಗಳನ್ನುಂಟುಮಾಡುತ್ತಾರೆ. |

**ಸೋಮಾಪೂಷರು ಪಶುಗಳನ್ನು ಕೊಡುವ ರೀತಿ**

| | |
|---|---|
| ಸೋಮಃ ವೈ ರೇತೋಧಾಃ | ಸೋಮದೇವನು ಉತ್ಪಾದಕವಾದ ರೇತಸ್ಸನ್ನು ಧಾರಣೆ ಮಾಡತಕ್ಕವನು. |
| ಪೂಷಾ ಪಶೂನಾಂ ಪ್ರಜನಯಿತಾ | ಪೂಷದೇವನು ಪಶುಗಳನ್ನು ಉತ್ಪತ್ತಿ ಮಾಡ ತಕ್ಕವನು. |

---

ಸೋಮದೇವನು ಪ್ರಜಾಪತಿಗೆ 'ನನಗಾಗಿ ಗಾರ್ಮುತಚರುಯಾಗವನ್ನು ಮಾಡು. ತಾನಾಗಿಯೇ ಬೆಳೆಯುವ ಎಲ್ಲ ಸಸ್ಯವರ್ಗವೂ ನನ್ನದಷ್ಟೇ' ಎಂದು ಹೇಳಿದನು. ಬಳಿಕ ಪ್ರಜಾಪತಿಯು ನಿಮ್ಮಿಬ್ಬರಿಗಾಗಿಯೂ ಯಾಗವನ್ನು ಮಾಡುತ್ತೇನೆಂದನು. ಹಾಗೆಯೇ ಯಾಗವನ್ನು ಮಾಡಿ ಇಬ್ಬರನ್ನೂ ಧಾನ್ಯವಂತರನ್ನಾಗಿ ಮಾಡಿದನು. ಬಳಿಕ ಪಶುಗಳು ಯಜಮಾನನನ್ನು ಆಶ್ರಯಿಸಿದವು.

ಪಶುಕಾಮನು ಈ ಗಾರ್ಮುತಚರುಯಾಗವನ್ನು ಮಾಡಬೇಕು. ಇದರಿಂದ ಸೋಮಾಪೂಷ ದೇವತೆಗಳಿಗೆ ತಮ್ಮ ಹವಿರ್ಭಾಗವು ದೊರೆತು ಅವರು ತೃಪ್ತರಾಗುತ್ತಾರೆ. ಪಶುಗಳನ್ನು ಯಜಮಾನನಿಗೆ ಕೊಡುತ್ತಾರೆ. ಯಜಮಾನನು ಪಶುಮಂತನಾಗುತ್ತಾನೆ.

ಸೋಮ ಏವಾಸ್ಮೈ ರೇತೋ ದಧಾತಿ ಪೂಷಾ

ಪಶೂನ್ಪ್ರಜನಯತಿ ॥೧೪-4॥

[ವಪೇತ್ಪ್ರಜಾಪತಿಂ ವೈ ದಧಾತಿ ಪೂಷಾ ತ್ರೀಣಿ ಚ ।]

---

ಸೋಮಃ । ಏವ । ಅಸ್ಮೈ । ರೇತಃ । ದಧಾತಿ । ಪೂಷಾ । ಪಶೂನ್ । ಪ್ರೇತಿ । ಜನಯತಿ ॥4॥

---

| | |
|---|---|
| ಸೋಮಃ ಏವ ಅಸ್ಮೈ ರೇತಃ ದಧಾತಿ | ಸೋಮದೇವನು ಈ ಯಜಮಾನನಿಗಾಗಿ ಪಶುಗಳ ರೇತಸ್ಸು ನಿಲ್ಲುವಂತೆ ಮಾಡುತ್ತಾನೆ. |
| ಪೂಷಾ ಪಶೂನ್ ಪ್ರಜನಯತಿ | ಪೂಷದೇವನು ಪಶುಗಳು ಜನಿಸುವಂತೆ ಮಾಡುತ್ತಾನೆ. |

---

ಸೋಮದೇವನು ರೇತೋಧಾರಣೆ ಮಾಡತಕ್ಕವನು. ಪೂಷದೇವನು ಪಶುಗಳನ್ನು ಉತ್ಪಾದಿಸತಕ್ಕವನು. ಯಾಗದಿಂದ ತೃಪ್ತನಾದ ಸೋಮದೇವನು ರೇತಸ್ಸನ್ನು ಧರಿಸುವಂತೆ ಮಾಡುತ್ತಾನೆ. ಪೂಷದೇವನು ಪಶುಗಳು ಜನಿಸುವಂತೆ ಮಾಡುತ್ತಾನೆ. ಇದರಿಂದ ಯಜಮಾನನು ಪಶುಮಂತನಾಗುತ್ತಾನೆ.

* * *

## ॥ ಪಂಚಮೋಽನುವಾಕಃ ॥

**ಅಗ್ನೇ ಗೋಭಿರ್ನ ಆಗಹೀಂದೋ ಪುಷ್ಟ್ಯಾ**

**ಜುಷಸ್ವ ನಃ । ಇಂದ್ರೋ ಧರ್ತಾ ಗೃಹೇಷು ನಃ ॥**

---

**ಅಗ್ನೇ** । ಗೋಭಿಃ । ನಃ । ಏತಿ । ಗಹಿ । ಇಂದೋ ಇತಿ । ಪುಷ್ಟ್ಯಾ । ಜುಷಸ್ವ । ನಃ ॥ ಇಂದ್ರಃ । ಧರ್ತಾ । ಗೃಹೇಷು । ನಃ ॥

---

**ನಾಲ್ಕನೆಯ ಅನುವಾಕದಲ್ಲಿ ಗಾರ್ಮುತಚರುವನ್ನು ಹೇಳಿಯಾಯಿತು. ಆರನೆಯ ಅನುವಾಕದಲ್ಲಿ ಚಿತ್ರೇಷ್ಟಿಯನ್ನು ವಿಧಿಸಲಾಗುತ್ತದೆ. ಈ ಐದನೆಯ ಅನುವಾಕದಲ್ಲಿ ಚಿತ್ರೇಷ್ಟಿಯ ಉಪಹೋಮಮಂತ್ರಗಳು ಇವೆ.**

---

| **ಮಂತ್ರ** | **ವಿನಿಯೋಗ** |
|---|---|
| **ಅಗ್ನೇ... ಗೃಹೇಷು ನಃ ।** | **ಚಿತ್ರೇಷ್ಟಿಯಲ್ಲಿ ಪ್ರಥಮ ಉಪಹೋಮದ ಮಂತ್ರ.** |

---

**ಅಗ್ನೇ** = ಅಗ್ನಿದೇವನೇ ! **ಗೋಭಿಃ** = ಗೋವುಗಳೊಡನೆ; **ನಃ ಆ ಗಹಿ** = ನಮ್ಮನ್ನು ಕುರಿತು ಬಾ; **ಇಂದೋ** = ಚಂದ್ರನೇ !; **ಪುಷ್ಟ್ಯಾ** = ಪಶುಪುಷ್ಟಿಯಿಂದ; **ನಃ ಜುಷಸ್ವ** = ನಮ್ಮನ್ನು ಸಂತುಷ್ಟರಾಗುವಂತೆ ಮಾಡು; **ಇಂದ್ರಃ** = ಇಂದ್ರನು; **ನಃ ಗೃಹೇಷು** = ನಮ್ಮ ಮನೆಗಳಲ್ಲಿ; **ಧರ್ತಾ** [ಭವತು] = ಪಶುಗಳನ್ನು ನೆಲಸುವಂತೆ ಮಾಡಲಿ;

---

ಚಿತ್ರಾಯಾಗವು ಪಶುಗಳಿಗಾಗಿ ಮಾಡುವ ಯಾಗ. ಆಗ್ನೇಯವೇ ಮೊದಲಾದ ಏಳು ಹವಿಸ್ಸುಗಳಿವೆ. ಏಳು ಉಪಹೋಮಗಳಿವೆ. ಮೊದಲನೆಯ ಉಪಹೋಮದಮಂತ್ರವಿದಾಗಿದೆ. ಇದರ ತಾತ್ಪರ್ಯವು ಹೀಗಿದೆ :

ಅಗ್ನಿದೇವನೇ ! ನೀನು ಗೋವುಗಳೊಡನೆ ನಮ್ಮ ಮನೆಗೆ ಬಾ. ಚಂದ್ರನೇ ! ನೀನು ಪಶುಗಳು ಪುಷ್ಟವಾಗಿರುವಂತೆ ಮಾಡಿ ನಮ್ಮನ್ನು ಸಂತೋಷಪಡಿಸು. ಇಂದ್ರನು ನಮ್ಮ ಮನೆಗಳಲ್ಲಿ ಯಾವಾಗಲೂ ಪಶುಸಮೃದ್ಧಿಯು ಇರುವಂತೆ ಮಾಡಲಿ.

# ಸವಿತಾ ಯಸ್ಸಹಸ್ರಿಯಸ್ಸ ನೋ ಗೃಹೇಷು ರಾರಣತ್ । ಆ ಪೂಷಾ ಏತ್ವಾ ವಸು ॥ ಧಾತಾ ದದಾತು ನೋ ರಯಿಮೀಶಾನೋ ಜಗತಸ್ಪತಿಃ । ಸ ನಃ ಪೂರ್ಣೇನ ವಾವನತ್ ॥

**ಸವಿತಾ** । ಯಃ । ಸಹಸ್ರಿಯಃ । ಸಃ । ನಃ । ಗೃಹೇಷು । ರಾರಣತ್ ॥ ಏತಿ । ಪೂಷಾ । ಏತು । ಏತಿ । ವಸು ॥ **ಧಾತಾ** । ದದಾತು । ನಃ । ರಯಿಮ್ । ಈಶಾನಃ । ಜಗತಃ । ಪತಿಃ ॥ ಸಃ । ನಃ । ಪೂರ್ಣೇನ । ವಾವನತ್ ॥

| ಮಂತ್ರ | ವಿನಿಯೋಗ |
|---|---|
| **ಸವಿತಾ... ವಸು** ॥ | ದ್ವಿತೀಯ ಉಪಹೋಮದ ಮಂತ್ರ. |
| **ಧಾತಾ ... ವಾವನತ್** ॥ | ತೃತೀಯ ಉಪಹೋಮದ ಮಂತ್ರ. |

❖ **ಯಃ** = ಯಾವ ದೇವನು; **ಸಹಸ್ರಿಯಃ** = ಸಾವಿರಾರು ಸಂಖ್ಯೆಯಲ್ಲಿ ಪಶುಗಳನ್ನು ಕೊಡಬಲ್ಲನೋ; **ಸಃ ಸವಿತಾ** = ಆ ಸವಿತೃದೇವನು; **ನಃ ಗೃಹೇಷು** = ನಮ್ಮ ಮನೆಗಳಲ್ಲಿ; **ರಾರಣತ್** = ಸಂತೋಷವಾಗಿರಲಿ. **ಪೂಷಾ ಆ ಏತು** = ಪಶುಪೋಷಕನಾದ ಪೂಷದೇವನೂ ನಮ್ಮ ಮನೆಗೆ ಪಶುಪುಷ್ಟಿಕರನಾಗಿ ಬರಲಿ. **ವಸು ಆ** ಏತು = ಧನವೂ ನಮಗೆ ಲಭಿಸಲಿ. ❖ **ಈಶಾನಃ** = ಜಗತ್ತಿಗೆ ಒಡೆಯನಾದ; **ಜಗತಃ ಪತಿಃ** = ಲೋಕಗಳಿಗೆ ರಕ್ಷಕನಾದ; **ಧಾತಾ** = ಧಾತೃದೇವನು; **ನಃ** = ನಮಗೆ; **ರಯಿಮ್ ದದಾತು** = ಧನವನ್ನು ಕೊಡಲಿ. **ಸಃ** = ಆ ಧಾತೃದೇವನು; **ನಃ** = ನಮ್ಮನ್ನು; **ಪೂರ್ಣೇನ** = ಸರ್ವವಿಧವಾದ ಧನದಿಂದ; **ವಾವನತ್** = ಚೆನ್ನಾಗಿ ರಕ್ಷಿಸಲಿ.

ಸಹಸ್ರ ಸಂಖ್ಯೆಯಲ್ಲಿ ಪಶುಗಳುಳ್ಳ/ಪಶುಗಳನ್ನು ಕೊಡಬಲ್ಲ ಸವಿತೃದೇವನು ನಮ್ಮ ಮನೆಯಲ್ಲಿ ಪ್ರೀತಿಯಿಂದ ನೆಲಸಲಿ. ಪೋಷಕನಾದ ಪೂಷದೇವನೂ ನಮ್ಮ ಮನೆಗೆ ಬರಲಿ. ನಮ್ಮ ಮನೆಗೆ ಪುಷ್ಕಲಧನವೂ ಬರಲಿ.

# ತ್ವಷ್ಟಾ ಯೋ ವೃಷಭೋ ವೃಷಾ ಸ ನೋ ಗೃಹೇಷು ರಾರಣತ್ । ಸಹಸ್ರೇಣಾಯುತೇನ ಚ ॥

ತ್ವಷ್ಟಾ । ಯಃ । ವೃಷಭಃ । ವೃಷಾ । ಸಃ । ನಃ । ಗೃಹೇಷು । ರಾರಣತ್ ॥ ಸಹಸ್ರೇಣ । ಅಯುತೇನ । ಚ ॥

| ಮಂತ್ರ | ವಿನಿಯೋಗ |
|---|---|
| ತ್ವಷ್ಟಾ... ಚ ॥ | ನಾಲ್ಕನೆಯ ಉಪಹೋಮಮಂತ್ರ |

❖ **ಯಃ** = ಯಾವನು; **ವೃಷಭಃ** = ಶ್ರೇಷ್ಠನೋ; **ವೃಷಾ** = ಕಾಮನೆಗಳನ್ನು ಸುರಿಸಬಲ್ಲನೋ; **ಸಃ ತ್ವಷ್ಟಾ** = ಆ ತ್ವಷ್ಟ್ರುದೇವನು; **ಸಹಸ್ರೇಣ ಅಯುತೇನ ಚ** = ಸಹಸ್ರ-ಹತ್ತು ಸಹಸ್ರ ಪಶುಗಳನ್ನು ಕೂಡಿಕೊಂಡು; **ನಃ ಗೃಹೇಷು ರಾರಣತ್** = ನಮ್ಮ ಮನೆಯಲ್ಲಿ ಸಂತೋಷವಾಗಿರಲಿ.

ಧಾತೃದೇವನು ಜಗತ್ತಿಗೆ ಒಡೆಯನು. ರಕ್ಷಕನು. ಉತ್ಪಾದಕನೂ ಅವನೇ. ಆತನು ನಮಗೆ ಧನವನ್ನು ಕೊಡಲಿ. ಆತನು ಬಗೆಬಗೆಯ ಸಂಪತ್ತನ್ನು ಕೊಟ್ಟು ನಮ್ಮನ್ನು ಚೆನ್ನಾಗಿ ಕಾಪಾಡಲಿ.

ತ್ವಷ್ಟ್ರುವು ಶ್ರೇಷ್ಠನು. ಇಷ್ಟಾರ್ಥಗಳನ್ನು ಕೊಡತಕ್ಕವನು. ಆತನು ಸಾವಿರ ಹತ್ತು ಸಾವಿರ ಸಂಖ್ಯೆಯ ಪಶುಗಳಿಂದ ಕೂಡಿಕೊಂಡು ನಮ್ಮ ಮನೆಯಲ್ಲಿ ಸಂತೋಷದಿಂದ ಆಟವಾಡುತ್ತಿರಲಿ.

# ಯೇನ ದೇವಾ ಅಮೃತಂ [ಅಮೃತಮ್ (೧)]

# ದೀರ್ಘಗ್ಗ್ಂ ಶ್ರವೋ ದಿವ್ಯೈರಯಂತ । ರಾಯಸ್ಪೋಷ

# ತ್ವಮಸ್ಮಭ್ಯಂ ಗವಾಂ ಕುಲ್ಮಿಂ ಜೀವಸ ಆ ಯುವಸ್ವ ॥

---

**ಯೇನ** । ದೇವಾಃ । ಅಮೃತಮ್ । ದೀರ್ಘಮ್ । ಶ್ರವಃ । ದಿವಿ । ಐರಯಂತ ॥ ರಾಯಃ । ಪೋಷ । ತ್ವಮ್ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ಗವಾಮ್ । ಕುಲ್ಮಿಮ್ । ಜೀವಸೇ । ಏತಿ । ಯುವಸ್ವ ॥

---

| **ಮಂತ್ರ** | **ವಿನಿಯೋಗ** |
|---|---|
| **ಯೇನ... ಆ ಯುವಸ್ವ ॥** | ಐದನೆಯ ಉಪಹೋಮ ಮಂತ್ರ |

---

❖ **ರಾಯಃ ಪೋಷ** = ಧನವನ್ನು ಹೆಚ್ಚು ಮಾಡುವ ಪೂಷದೇವನೇ ! **ಯೇನ** = ಯಾವನಿನ್ನಿಂದ; **ದೇವಾಃ** = ದೇವತೆಗಳು; **ಅಮೃತವ್** = ಅಮೃತರಸವನ್ನೂ; **ದೀರ್ಘವ್ ಶ್ರವಃ** = ಅವಿಚ್ಛಿನ್ನವಾದ ಕೀರ್ತಿಗೆ ಕಾರಣವಾದ ಅನ್ನವನ್ನೂ; **ದಿವಿ ಐರಯಂತ** = ಸ್ವರ್ಗದಲ್ಲಿ ಸ್ಥಾಪಿಸಿದರೋ; **ತ್ವಮ್** = ಅಂತಹ ನೀನು; **ಅಸ್ಮಭ್ಯಮ್** = ನಮಗೆ; **ಜೀವಸೇ** = ಉತ್ತಮ ಜೀವನಕ್ಕಾಗಿ; **ಗವಾಮ್ ಕುಲ್ಮಿಮ್** = ಪಶುಸಮೂಹವನ್ನು; **ಆ ಯುವಸ್ವ** = ತಂದು ಸೇರಿಸು.

---

ಪೂಷನೇ ! ನೀನು ಧನವನ್ನು ವೃದ್ಧಿಗೊಳಿಸುವವನು. ನಿನ್ನಿಂದಲೇ ದೇವತೆಗಳು ಸ್ವರ್ಗದಲ್ಲಿ ಅಮೃತವನ್ನೂ, ಕೀರ್ತಿಗೆ ಸಾಧಕವಾದ ಶಾಶ್ವತವಾದ ಅನ್ನವನ್ನೂ ಸ್ಥಾಪಿಸಿರುತ್ತಾರೆ. ಅಂತಹ ನೀನು ನಮಗೆ ಪಶುಸಂಪತ್ತನ್ನು ಕೊಡು.

# ಅಗ್ನಿರ್ಗೃಹಪತಿಃ ಸೋಮೋ ವಿಶ್ವವನಿಃ ಸವಿತಾ ಸುಮೇಧಾಃ ಸ್ವಾಹಾ ॥ ಅಗ್ನೇ ಗೃಹಪತೇ ಯಸ್ತೇ ಘೃತ್ಯೋ ಭಾಗಸ್ತೇನ ಸಹ ಓಜ

---

**ಅಗ್ನಿಃ** । ಗೃಹಪತಿರಿತಿ ಗೃಹ-ಪತಿಃ । ಸೋಮಃ । ವಿಶ್ವವನಿರಿತಿ ವಿಶ್ವ-ವನಿಃ । ಸವಿತಾ । ಸುಮೇಧಾ ಇತಿ ಸು-ಮೇಧಾಃ । ಸ್ವಾಹಾ ॥ ಅಗ್ನೇ । ಗೃಹಪತ ಇತಿ ಗೃಹ-ಪತೇ । ಯಃ । ತೇ । ಘೃತ್ಯಃ । ಭಾಗಃ । ತೇನ । ಸಹಃ । ಓಜಃ ।

---

| ಮಂತ್ರ | ವಿನಿಯೋಗ |
|---|---|
| **ಅಗ್ನಿಃ... ಸ್ವಾಹಾ ॥** | ಆರನೆಯ ಉಪಹೋಮ ಮಂತ್ರ |
| **ಅಗ್ನೇ... ಸ್ವಾಹಾ ॥** | ಏಳನೆಯ ಉಪಹೋಮ ಮಂತ್ರ |

---

✣ **ಅಗ್ನಿಃ ಗೃಹಪತಿಃ** = ಅಗ್ನಿಯು ಮನೆಗಳ ಒಡೆಯನು/ಗೃಹರಕ್ಷಕನು. **ಸೋಮಃ ವಿಶ್ವವನಿಃ** = ಸೋಮರಾಜನು ಲೋಕವನ್ನು ಸಂತೋಷಗೊಳಿಸುವವನು. **ಸವಿತಾ ಸುಮೇಧಾಃ** = ಸವಿತೃದೇವನು ಮಂಗಳಕರವಾದ ಬುದ್ಧಿಯುಳ್ಳವನು; **ಸ್ವಾಹಾ** = ನಿಮಗೆ ಈ ಆಜ್ಯ ಹವಿಸ್ಸು ಹುತವಾಗಲಿ. ✣ **ಗೃಹಪತೇ ಅಗ್ನೇ** = ಗೃಹಸ್ವಾಮಿಯಾದ ಅಗ್ನಿದೇವನೇ ! **ತೇ ಯಃ ಘೃತ್ಯಃ ಭಾಗಃ** = ಆಜ್ಯಕ್ಕೆ ಸಂಬಂಧಿಸಿದ ನಿನ್ನ ಯಾವ ಭಾಗವುಂಟೋ; **ತೇನ** = ಅದರಿಂದ [ತೃಪ್ತನಾಗಿ] **ಸಹಃ** = ಬಲವನ್ನೂ; **ಓಜಃ** = ತೇಜಸ್ಸನ್ನೂ*

---

ಅಗ್ನಿದೇವನು ಮನೆಗಳಿಗೆ ಸ್ವಾಮಿಯು. ರಕ್ಷಕನು. ಸೋಮನು ತನ್ನ ಕಿರಣಗಳಿಂದ ಲೋಕವನ್ನು ಸಂತೋಷಗೊಳಿಸುವವನು. ಸವಿತೃದೇವನು ಮಂಗಳಕರವಾದ ಬುದ್ಧಿಯುಳ್ಳವನು. ಈ ದೇವತೆಗಳಿಗಾಗಿ ಈ ಆಜ್ಯ ಹವಿಸ್ಸು ಹುತವಾಗಲಿ.

---

* ಶರೀರದಲ್ಲಿ ಇರುವ ಎಂಟನೆಯ ಧಾತು.

ಆಕ್ರಮಮಾಣಾಯ ಧೇಹಿ ಶ್ರೈಷ್ಠ್ಯಾತ್ಪಥೋ

ಮಾ ಯೋಷಂ ಮೂರ್ಧಾ ಭೂಯಾಸಗ್ಂ

ಸ್ವಾಹಾ ॥೧೬- 5॥

[ಅಮೃತಮಷ್ಟಾತ್ರಿಗ್ಂಶಚ್ಚ।]

---

ಆಕ್ರಮಮಾಣಾಯೇತ್ಯಾ-ಕ್ರಮಮಾಣಾಯ। ಧೇಹಿ। ಶ್ರೈಷ್ಠ್ಯಾತ್। ಪಥಃ। ಮಾ। ಯೋಷಮ್। ಮೂರ್ಧಾ। ಭೂಯಾಸಮ್। ಸ್ವಾಹಾ ॥5॥

---

**ಆಕ್ರಮಮಾಣಾಯ** = ಶತ್ರುಗಳನ್ನು ಸೋಲಿಸಬಲ್ಲ ಯಜಮಾನನಿಗೆ; **ಧೇಹಿ** = ಕೊಡು. **ಶ್ರೈಷ್ಠ್ಯಾತ್ ಪಥಃ** = ಉತ್ತಮಮಾರ್ಗದಿಂದ; **ಮಾ ಯೋಷಮ್** = ತಪ್ಪಿದವನಾಗಿ ಆಗುವುದು ಬೇಡ; **ಮೂರ್ಧಾ ಭೂಯಾಸಮ್** = ನಾನು ಸಮಾನರಲ್ಲಿ ಶ್ರೇಷ್ಠನಾಗಿಯೇ ಇರುವೆನು; **ಸ್ವಾಹಾ** = ಈ ಆಜ್ಯ ಹವಿಸ್ಸು ನಿನಗೆ ಚೆನ್ನಾಗಿ ಹುತವಾಗಲಿ.

---

ಮನೆಯ ರಕ್ಷಕನಾದ ಅಗ್ನಿದೇವನೇ ! ನೀನು ನಾನು ನೀಡುವ ಆಜ್ಯಾಹುತಿಯನ್ನು ಸ್ವೀಕರಿಸು. ಬಲವನ್ನೂ, ತೇಜಸ್ಸನ್ನೂ ವೈರಿಗಳನ್ನು ಸೋಲಿಸಬಲ್ಲ ಯಜಮಾನನಿಗೆ ಕೊಡು. ನಾನು ಶ್ರೇಷ್ಠವಾದ ಮಾರ್ಗವನ್ನು ತಪ್ಪಿ ನಡೆಯದಂತಾಗಲಿ. ನಾನು ಉಳಿದವರಿಗಿಂತಲೂ ಶ್ರೇಷ್ಠನಾಗಿರುವಂತೆ ಆಗಲಿ.

★ ★ ★

# ಅನುವಾಕದ ವಿಶೇಷ ವಿಷಯಗಳು

## ೧) ವಿನಿಯೋಗ ಸಂಗ್ರಹ

**ಅಗ್ನೇ ಗೋಭಿಸೂತ್ತಪಹೋಮಾಶ್ಚಿತ್ರಾಯಾಗೇ ಹಿ ಸಪ್ತ ತೇ ॥**

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ - 7

## ೨. ಛಂದಸ್ಸು

| ಮಂತ್ರ | | ಛಂದಸ್ಸಿನ ಹೆಸರು |
|---|---|---|
| ೧. | ಅಗ್ನೇ ಗೋಭಿಃ... ನಃ ॥ | ಗಾಯತ್ರೀ |
| ೨. | ಸವಿತಾ... ವಸು ॥ | ಗಾಯತ್ರೀ |
| ೩. | ಧಾತಾ... ವಾವನತ್ ॥ | ಗಾಯತ್ರೀ |
| ೪. | ತ್ವಷ್ಟಾ... ಚ ॥ | ಗಾಯತ್ರೀ |
| ೫. | ಯೇನ... ಆಯುವಸ್ವ ॥ | ಸತೋಬೃಹತೀ |
| ೬. | ಅಗ್ನಿಃ... ಸ್ವಾಹಾ ॥ | ಯಜುಃ |
| ೭. | ಅಗ್ನೇ... ಸ್ವಾಹಾ ॥ | ಯಜುಃ |



## ॥ ಷಷ್ಠೋऽನುವಾಕಃ ॥

ಚಿತ್ರಯಾ ಯಜೇತ ಪಶುಕಾಮ ಇಯಂ ವೈ ಚಿತ್ರಾ

---

**ಚಿತ್ರಯಾ** । ಯಜೇತ । ಪಶುಕಾಮ ಇತಿ ಪಶು-ಕಾಮಃ । ಇಯಮ್ । ವೈ । ಚಿತ್ರಾ ।

---

**ಚಿತ್ರಾಯಾಗಸ್ಯೋಪಹೋಮಮಂತ್ರಾಃ ಪಂಚಮ ಈರಿತಾಃ ।**
**ಪಶುಕಾಮಸ್ಯ ಚಿತ್ರಾಖ್ಯೋ ಯಾಗಃ ಷಷ್ಠೇ ನಿರೂಪಿತಃ ॥**

ಐದನೆಯ ಅನುವಾಕದಲ್ಲಿ ಚಿತ್ರಾಯಾಗದ ಉಪಹೋಮಮಂತ್ರಗಳಿವೆ. ಆರನೆಯ ಅನುವಾಕದಲ್ಲಿ ಚಿತ್ರಾಯಾಗವು ಹೇಳಲ್ಪಟ್ಟಿದೆ.

---

### ಚಿತ್ರಾಯಾಗದ ವಿಧಿ; ಚಿತ್ರಾಶಬ್ದದ ನಿರ್ವಚನ; ಫಲ

| | |
|---|---|
| ಪಶುಕಾಮಃ ಚಿತ್ರಯಾ ಯಜೇತ | ಗವಾದಿಪಶುಗಳನ್ನು ಬಯಸುವವನು ಚಿತ್ರಾಯಾಗವನ್ನು ಅನುಷ್ಠಿಸಬೇಕು. |
| ಇಯಮ್ ವೈ ಚಿತ್ರಾ | ವಿಚಿತ್ರವಾದ ಪ್ರಾಣಿಗಳಿಗೆ ಆಶ್ರಯವಾಗಿರುವ ಈ ಭೂಮಿಯು ಚಿತ್ರಾ. |

---

ಪಶುಗಳನ್ನು ಅಪೇಕ್ಷಿಸುವವನು ಚಿತ್ರಾಯಾಗವನ್ನು ಅನುಷ್ಠಿಸಬೇಕು. ಆಗ್ನೇಯವಾದ ಅಷ್ಟಾಕಪಾಲ, ಸೌಮ್ಯಚರು, ತ್ವಷ್ಟೃದೇವತೆಗೆ ಅಷ್ಟಾಕಪಾಲ, ಸರಸ್ವತೀದೇವತೆಗೆ ಚರು, ಸರಸ್ವದ್ದೇವತೆಗೆ ಚರು, ಸಿನೀವಾಲಿದೇವತೆಗೆ ಚರು, ಇಂದ್ರದೇವತೆಗೆ ಏಕಾದಶಕಪಾಲ ಹವಿಸ್ಸು - ಈ ಏಳು ಯಾಗಗಳು ಒಟ್ಟಾಗಿ ಚಿತ್ರಾಯಾಗವೆನಿಸಿಕೊಳ್ಳುತ್ತವೆ. ಚಿತ್ರ ವಿಚಿತ್ರವಾದ ಹವಿಸ್ಸುಗಳು ಇರುವುದರಿಂದಲೂ, ಚಿತ್ರವಿಚಿತ್ರವಾದ ಪಶುಗಳನ್ನು ಕೊಡುವುದರಿಂದಲೂ ಚಿತ್ರಾಶಬ್ದವು ಯಾಗದ ನಾಮಧೇಯವಾಗಿದೆ.

ಯದ್ವಾ ಅಸ್ಯಾಂ ವಿಶ್ವಂ ಭೂತಮಧಿ ಪ್ರಜಾಯತೇ ತೇನೇಯಂ ಚಿತ್ರಾ ಯ ಏವಂ ವಿದ್ವಾಗ್ಂಶ್ಚಿತ್ರಯಾ ಪಶುಕಾಮೋ ಯಜತೇ ಪ್ರ ಪ್ರಜಯಾ ಪಶುಭಿರ್ಮಿಥುನೈರ್ಜಾಯತೇ

---

ಯತ್ । ವೈ । ಅಸ್ಯಾಮ್ । ವಿಶ್ವಮ್ । ಭೂತಮ್ । ಅಧೀತಿ । ಪ್ರಜಾಯತ ಇತಿ ಪ್ರ-ಜಾಯತೇ । ತೇನ । ಇಯಮ್ । ಚಿತ್ರಾ । ಯಃ । ಏವಮ್ । ವಿದ್ವಾನ್ । ಚಿತ್ರಯಾ । ಪಶುಕಾಮ ಇತಿ ಪಶು-ಕಾಮಃ । ಯಜತೇ । ಪ್ರೇತಿ । ಪ್ರಜಯೇತಿ ಪ್ರ-ಜಯಾ । ಪಶುಭಿರಿತಿ ಪಶು-ಭಿಃ । ಮಿಥುನೈಃ । ಜಾಯತೇ ।

---

| | |
|---|---|
| ಯತ್ ವೈ ಅಸ್ಯಾಮ್ ವಿಶ್ವಮ್ ಭೂತಮ್ ಅಧಿ ಪ್ರಜಾಯತೇ | ಯಾವ ಕಾರಣದಿಂದ ಈ ಸಮಸ್ತಪ್ರಾಣಿ ಜಾತವೂ ಈ ಭೂಮಿಯಲ್ಲಿ ಹುಟ್ಟುತ್ತದೆಯೋ |
| ತೇನ ಇಯಮ್ ಚಿತ್ರಾ | ಆ ಕಾರಣದಿಂದ ಈ ಭೂಮಿಯು ಚಿತ್ರೆಯೆನಿಸಿ ಕೊಳ್ಳುತ್ತದೆ. |
| ಯಃ ಏವಂ ವಿದ್ವಾನ್ ಚಿತ್ರಯಾ ಪಶುಕಾಮಃ ಯಜತೇ | ಹೀಗೆ ತಿಳಿದವನಾದ, ಪಶುಕಾಮನಾದ ಯಾವ ಯಜಮಾನನು ಈ ಯಾಗವನ್ನು ಅನುಷ್ಠಿಸುತ್ತಾನೆಯೋ [ಅವನು] |
| ಪ್ರಜಯಾ ಪಶುಭಿಃ ಮಿಥುನೈಃ ಪ್ರಜಾಯತೇ | ಸ್ತ್ರೀಪುಂರೂಪವಾದ ಪ್ರಜೆಗಳಿಂದಲೂ, ಪಶುಗಳಿಂದಲೂ ಸಂಪನ್ನನಾಗುತ್ತಾನೆ. |

---

ಚಿತ್ರವಿಚಿತ್ರವಾದ ಸಕಲಪ್ರಾಣಿಗಳಿಗೂ ಆಶ್ರಯವಾದ ಈ ಭೂಮಿಯು ಚಿತ್ರೆಯಾಗಿದೆ. ಹಾಗೆಯೇ ಬಗೆಬಗೆಯ ಪಶುಗಳನ್ನು ಫಲವನ್ನಾಗಿ ನೀಡುವುದರಿಂದಲೂ, ಚಿತ್ರವಿಚಿತ್ರವಾದ ಹವಿಸ್ಸುಗಳಿರುವುದರಿಂದಲೂ, ಈ ಯಾಗವೂ ಚಿತ್ರೆಯೆನಿಸುವುದು. ಹೀಗೆ ತಿಳಿದು ಯಾಗವನ್ನು ಅನುಷ್ಠಿಸುವ ಯಜಮಾನನು ಪ್ರಜೆಗಳನ್ನೂ, ಪಶುಗಳನ್ನೂ ಹೆಣ್ಣು-ಗಂಡುರೂಪವಾದ ಜೋಡಿಗಳಲ್ಲಿ ಪಡೆದುಕೊಳ್ಳುವನು. ಇದರಿಂದ ಪ್ರಜಾ-ಪಶುಸಂಪತ್ತಿಯನ್ನು ಪಡೆಯುವನು.

ಪ್ರೈವಾಽಽಗ್ನೇಯೇನ ವಾಪಯತಿ ರೇತಃ ಸೌಮ್ಯೇನ

ದಧಾತಿ ರೇತ ಏವ ಹಿತಂ ತ್ವಷ್ಟಾ ರೂಪಾಣಿ ವಿಕರೋತಿ

ಸಾರಸ್ವತೌ ಭವತ

---

ಪ್ರ । ಇತಿ । ಏವ । ಆಗ್ನೇಯೇನ । ವಾಪಯತಿ । ರೇತಃ । ಸೌಮ್ಯೇನ । ದಧಾತಿ । ರೇತಃ । ಏವ । ಹಿತಮ್ । ತ್ವಷ್ಟಾ । ರೂಪಾಣಿ । ವೀತಿ । ಕರೋತಿ । ಸಾರಸ್ವತೌ । ಭವತಃ ।

---

**ಪ್ರತ್ಯೇಕಯಾಗಗಳ ಫಲನಿರೂಪಣೆ**

| | |
|---|---|
| ಆಗ್ನೇಯೇನ ಏವ ಪ್ರ ವಾಪಯತಿ | ಆಗ್ನೇಯಯಾಗದಿಂದ ಉತ್ಪತ್ತಿಕಾರಣವಾದ ರೇತಸ್ಸನ್ನು ಭೂಮಿಯಲ್ಲಿ ಬೀಜಗಳನ್ನು ಬಿತ್ತುವಂತೆ ಬಿತ್ತುತ್ತಾನೆ. |
| ಸೌಮ್ಯೇನ ರೇತಃ ದಧಾತಿ | ಸೌಮ್ಯಯಾಗದಿಂದ ಆ ರೇತಸ್ಸು ಸ್ಥಿರವಾಗಿ ನಿಲ್ಲುವಂತೆ ಮಾಡುತ್ತಾನೆ. |
| ಹಿತಮ್ ರೇತಃ ತ್ವಷ್ಟಾ ಏವ ರೂಪಾಣಿ ವಿಕರೋತಿ | ತ್ವಷ್ಟೃದೇವನು ಆ ರೇತಸ್ಸನ್ನು ಬಗೆಬಗೆಯ ರೂಪಗಳನ್ನು ಪಡೆಯುವಂತೆ ಮಾಡುತ್ತಾನೆ. |
| ಸಾರಸ್ವತೌ ಭವತಃ | ಸರಸ್ವತೀದೇವತಾಕವಾದ ಚರುವೂ, ಸರಸ್ವದ್ದೇವತಾಕವಾದ ಚರುವೂ ಈ ಯಾಗದಲ್ಲಿ ಇದೆ. |

---

ಚಿತ್ರಾಯಾಗದ ಮೊದಲನೆಯ ಯಾಗವಾದ ಆಗ್ನೇಯಯಾಗವು ಪ್ರಜಾ-ಪಶುಗಳ ಉತ್ಪತ್ತಿಗೆ ಕಾರಣವಾದ ರೇತೋರೂಪವಾದ ಬೀಜವನ್ನು ಬಿತ್ತಿದಂತೆ ಮಾಡುತ್ತದೆ. ಸೌಮ್ಯಯಾಗವು ಆ ರೇತಸ್ಸನ್ನು ಧರಿಸಿದಂತೆ ಮಾಡುತ್ತದೆ. ತ್ವಾಷ್ಟ್ರಯಾಗವು ಬಗೆಬಗೆಯ ರೂಪಗಳನ್ನು ಸೃಷ್ಟಿಸುತ್ತದೆ. ಸರಸ್ವತೀ - ಸರಸ್ವದ್ಯಾಗಗಳು - ದೇವತೆಗಳ ಸ್ತ್ರೀ ಪುರುಷರಂತೆ ಇರುವ ಆ

ಏತದ್ವೈ ದೈವ್ಯಂ ಮಿಥುನಂ ದೈವ್ಯಮೇವಾಸ್ಮೈ [...ಮೇವಾಸ್ಮೈ

(೧) ಮಿಥುನಂ] ಮಿಥುನಂ ಮಧ್ಯತೋ ದಧಾತಿ ಪುಷ್ಟ್ಯೈ

ಪ್ರಜನನಾಯ ಸಿನೀವಾಲ್ಯೈ ಚರುರ್ಭವತಿ ವಾಗ್ವೈ ಸಿನೀವಾಲೀ

---

ಏತತ್ । ವೈ । ದೈವ್ಯಮ್ । ಮಿಥುನಮ್ । ದೈವ್ಯಮ್ । ಏವ । ಅಸ್ಮೈ । ಮಿಥುನಮ್ । ಮಧ್ಯತಃ । ದಧಾತಿ । ಪುಷ್ಟ್ಯೈ । ಪ್ರಜನನಾಯೇತಿ ಪ್ರ-ಜನನಾಯ । **ಸಿನೀವಾಲ್ಯೈ** । ಚರುಃ । ಭವತಿ । ವಾಕ್ । ವೈ । ಸಿನೀವಾಲೀ ।

---

| | |
|---|---|
| ಏತತ್ ವೈ ದೈವ್ಯಮ್ ಮಿಥುನಮ್ | ಈ ಸರಸ್ವತೀ - ಸರಸ್ವದ್ದೇವತೆಗಳು ದೇವತೆಗಳ ಸತೀಪತಿಗಳಂತಿರುತ್ತಾರೆ. |
| ಅಸ್ಮೈ ಪುಷ್ಟ್ಯೈ ಪ್ರಜನನಾಯ ದೈವ್ಯಮ್ ಮಿಥುನಮ್ ಏವ | ಯಜಮಾನನು ಈ ಯಾಗದಿಂದ ದೇವತೆಗಳ ಯುಗ್ಮವನ್ನೇ ಮನೆಯ ಒಳಗಡೆಯೇ ಇಟ್ಟು ಕೊಂಡಂತಾಗುತ್ತದೆ. ಇದು ಪ್ರಜಾ-ಪಶುಗಳ ಪುಷ್ಟಿಗೂ ಉತ್ಪತ್ತಿಗೂ ಕಾರಣವಾಗುತ್ತದೆ. |

**ಉಳಿದ ಯಾಗಗಳ ಫಲನಿರೂಪಣೆ - ಸಪ್ತಸಂಖ್ಯೆಯ ಪ್ರಶಂಸೆ**

| | |
|---|---|
| ಮಧ್ಯತಃ ದಧಾತಿ ಸಿನೀವಾಲ್ಯೈ ಚರುಃ ಭವತಿ | ಸಿನೀವಾಲೀದೇವತಾಕವಾದ ಚರುಯಾಗವು ಆರನೆಯದಾಗಿದೆ. |
| ವಾಕ್ ವೈ ಸಿನೀವಾಲೀ | ಸಿನೀವಾಲೀದೇವತೆಯು ವಾಕ್ಸ್ವರೂಪವಷ್ಟೆ. |

---

ಯಾಗದೇವತೆಗಳಿಂದ - ಪ್ರಜಾಪಶುಗಳ ಉತ್ಪತ್ತಿಯನ್ನೂ, ಪುಷ್ಟಿಯನ್ನೂ ಉಂಟು ಮಾಡುತ್ತವೆ. ಈ ವಿಷಯವು ಭೂಮಿಯಲ್ಲಿ ಬೀಜಗಳನ್ನು ಬಿತ್ತಿ ಬೆಳೆಯನ್ನು ಬೆಳೆದಂತೆ ಇದೆ.

ಚಿತ್ರಾಯಾಗದಲ್ಲಿ ಆರನೆಯದು ಸಿನೀವಾಲೀದೇವತಾಕವಾದ ಚರುಯಾಗ. ಸಿನೀ ನೀವಾಲಿಯು ವಾಗ್ರೂಪಗಳು. ಪುಷ್ಟಿಗೆ ಕಾರಣವೇ ವಾಕ್ಕು. ಆದುದರಿಂದ ಈ ಯಾಗದಿಂದ

ಪುಷ್ಟಿಃ ಖಲು ವೈ ವಾಕ್ಪುಷ್ಟಿಮೇವ ವಾಚಮುಪೈತ್ಯೈಂದ್ರ

ಉತ್ತಮೋ ಭವತಿ ತೇನೈವ ತನ್ಮಿಥುನಗ್ಂ ಸಪ್ತೈತಾನಿ

ಹವೀಗ್ಂಷಿ ಭವಂತಿ ಸಪ್ತ ಗ್ರಾಮ್ಯಾಃ ಪಶವಸ್ಸಪ್ತಾರಣ್ಯಾಃ

---

ಪುಷ್ಟಿಃ । ಖಲು । ವೈ । ವಾಕ್ । ಪುಷ್ಟಿಮ್ । ಏವ । ವಾಚಮ್ । ಉಪೇತಿ । ಏತಿ । ಐಂದ್ರಃ ।

ಉತ್ತಮ ಇತ್ಯುತ್ - ತಮಃ । ಭವತಿ । ತೇನ । ಏವ । ತತ್ । ಮಿಥುನಮ್ । ಸಪ್ತ । ಏತಾನಿ ।

ಹವೀಗ್ಂಷಿ । ಭವಂತಿ । ಸಪ್ತ । ಗ್ರಾಮ್ಯಾಃ । ಪಶವಃ । ಸಪ್ತ । ಆರಣ್ಯಾಃ ।

---

| | |
|---|---|
| ಪುಷ್ಟಿಃ ಖಲು ವೈ ವಾಕ್ | ವಾಕ್ಕು ಪ್ರಜಾ-ಪಶುಗಳ ಅಭಿವೃದ್ಧಿಗೆ ಕಾರಣವಾಗಿ ಪುಷ್ಟಿ ಸ್ವರೂಪವಾಗಿದೆ. |
| ಪುಷ್ಟಿಮ್ ಏವ ವಾಚಮ್ ಉಪೈತಿ | [ಈ ಯಾಗದಿಂದ ಯಜಮಾನನು] ಪುಷ್ಟಿಸ್ವರೂಪವಾದ ಮಾತನ್ನೇ ಪಡೆಯುತ್ತಾನೆ. |
| ಐಂದ್ರಃ ಉತ್ತಮಃ ಭವತಿ | ಐಂದ್ರಯಾಗವು ಕೊನೆಯ ಯಾಗವಾಗಿದೆ. |
| ತೇನ ಏವ ತತ್ ಮಿಥುನಮ್ | ಈ ಯಾಗದ ದೇವತೆಯಾದ ಇಂದ್ರನೂ, ಸಿನೀವಾಲೀ ಯಾಗದ ದೇವತೆಯಾದ ಸಿನೀವಾಲಿಯೂ ಸ್ತ್ರೀ ಪುರುಷ ಯುಗ್ಮದಂತೆ. |
| ಏತಾನಿ ಸಪ್ತ ಹವೀಗ್ಂಷಿ ಭವಂತಿ | ಹೀಗೆ ಚಿತ್ರಾಯಾಗದ ಹವಿಸ್ಸುಗಳ ಸಂಖ್ಯೆಯು ಏಳಾಗಿದೆ. |
| ಸಪ್ತ ಗ್ರಾಮ್ಯಾಃ ಪಶವಃ | ಗ್ರಾಮದಲ್ಲಿ ವಾಸಿಸುವ ಗ್ರಾಮ್ಯಪಶುಗಳ ಸಂಖ್ಯೆಯು ಏಳು*. |

---

ಯಜಮಾನನು ಪ್ರಜಾಪಶುಪುಷ್ಟಿಯನ್ನೂ ಅದಕ್ಕೆ ಸಾಧನವಾದ ಮಾತನ್ನೂ ಪಡೆಯುತ್ತಾನೆ. ಏಳನೆಯದು ಕಡೆಯದಾದ ಐಂದ್ರಯಾಗ. ಸಿನೀವಾಲಿಯೂ ಇಂದ್ರನೂ ಒಂದು ಸ್ತ್ರೀ ಪುರುಷಯುಗ್ಮವಿದ್ದಂತೆ. ಆದುದರಿಂದ ಪ್ರಜಾ-ಪಶು ಸಮೃದ್ಧಿಯನ್ನು ಯಜಮಾನನು ಹೊಂದುತ್ತಾನೆ. ಈ ಸಂಖ್ಯೆಯು ಪ್ರಶಂಸಾರ್ಹವಿದೆ*. ಹವಿಸ್ಸುಗಳೂ ಏಳು. ಗ್ರಾಮ್ಯಪಶುಗಳೂ ಏಳು,

---

* ಗೋವು, ಪುರುಷ, ಕುದುರೆ, ಆಡು, ಕುರಿ, ಕತ್ತೆ ಹಾಗೂ ಒಂಟೆ. ಹೀಗೆಯೇ ಸಂಖ್ಯೆಗಳ ಪ್ರಶಂಸೆಯು ಶ್ರುತಿಯಲ್ಲಿ ಕಂಡುಬರುತ್ತದೆ.

ಸಪ್ತ ಛಂದಾಗ್ಂಸ್ಯುಭಯಸ್ಯಾವರುದ್ಧ್ಯಾ ಅಥೈತಾ

ಆಹುತೀರ್ಜುಹೋತ್ಯೇತೇ ವೈ ದೇವಾಃ ಪುಷ್ಟಿಪತಯಸ್ತ

ಏವಾಸ್ಮಿನ್ಪುಷ್ಟಿಂ ದಧತಿ

---

ಸಪ್ತ । ಛಂದಾಗ್ಂಸಿ । ಉಭಯಸ್ಯ । ಅವರುಧ್ಯಾ ಇತ್ಯವ-ರುಧ್ಯೈ । **ಅಥ** । ಏತಾಃ । ಆಹುತೀರಿತ್ಯಾ-ಹುತೀಃ । ಜುಹೋತಿ । ಏತೇ । ವೈ । ದೇವಾಃ । ಪುಷ್ಟಿಪತಯ ಇತಿ ಪುಷ್ಟಿ ಪತಯಃ । ತೇ । ಏವ । ಅಸ್ಮಿನ್ನ್ । ಪುಷ್ಟಿಮ್ । ದಧತಿ ।

---

| | |
|---|---|
| ಆರಣ್ಯಾಃ ಸಪ್ತ | ಆರಣ್ಯವಾಸಿಗಳಾದ ಪ್ರಾಣಿಗಳು ಏಳು*. |
| ಸಪ್ತ ಛಂದಾಗ್ಂಸಿ | ಛಂದಸ್ಸುಗಳೂ ಏಳಾಗಿವೆ*. |
| ಉಭಯಸ್ಯ ಅವರುಧ್ಯೈ | ಈ ಸಪ್ತ ಸಂಖ್ಯಾಕವಾದ ಯಾಗಗಳಿಂದ ಉಭಯ ವಿಧವಾದ ಪ್ರಾಣಿಗಳನ್ನೂ, ಛಂದಸ್ಸುಗಳನ್ನೂ ಯಜಮಾನನು ಪಡೆಯುತ್ತಾನೆ. |

### ಉಪಹೋಮವಿಧಾನ; ಅದರ ಫಲ

| | |
|---|---|
| ಅಥ ಏತಾಃ ಆಹುತೀಃ ಜುಹೋತಿ | ಅನಂತರ '**ಅಗ್ನೇ ಗೋಭಿಃ**' ಮೊದಲಾದ ಮಂತ್ರಗಳಿಂದ ಆಜ್ಯಹೋಮವನ್ನು ಅನುಷ್ಠಿಸಬೇಕು. |
| ಏತೇ ವೈ ದೇವಾಃ ಪುಷ್ಟಿಪತಯಃ | ಈ ಅಗ್ನಿ-ಸೋಮಾದಿಗಳೇ ಪುಷ್ಟಿಗೆ ಒಡೆಯರಷ್ಟೆ. |
| ತೇ ಏವ ಅಸ್ಮಿನ್ ಪುಷ್ಟಿಮ್ ದಧತಿ | ಆ ದೇವತೆಗಳೇ ಈ ಯಜಮಾನನಲ್ಲಿ ಪ್ರಜಾಪಶುಗಳ ಪುಷ್ಟಿಗಳ ಅಭಿವದ್ಧಿಯನ್ನು ಉಂಟು ಮಾಡುತ್ತಾರೆ. |

---

ಆರಣ್ಯಪಶುಗಳೂ ಏಳು. ಗಾಯತ್ರೀ ಮೊದಲಾದ ಮುಖ್ಯ ಛಂದಸ್ಸುಗಳೂ ಏಳು. ಹೀಗೆ ಈ ಸಪ್ತ ಸಂಖ್ಯೆಯ ಹವಿಸ್ಸುಗಳುಳ್ಳ ಚಿತ್ರಾಯಾಗದಿಂದ ಯಜಮಾನನು ಗ್ರಾಮ್ಯಪಶುಗಳನ್ನೂ, ಆರಣ್ಯಪಶುಗಳನ್ನೂ ಯಾಗಸಾಧನವಾದ ಛಂದಸ್ಸುಗಳನ್ನೂ ಪಡೆದು ಪಶುಮಂತನಾಗುತ್ತಾನೆ.

---

* ಎರಡು ಗೊರಸಿನ ಪ್ರಾಣಿಗಳು, ಹಿಂಸೆ ಮಾಡುವ ಹುಲಿ ಮೊದಲಾದವು, ಪಕ್ಷಿಗಳು, ಹಾವು ಮುಂತಾದ ಸರೀಸೃಪಗಳು, ಕಪಿ, ಆನೆ, ನದಿಯಲ್ಲಿರುವ ಜಂತುಗಳು – ಈ ಏಳು ಆರಣ್ಯಗಳು.

* ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ ಈ ಏಳು ಛಂದಸ್ಸುಗಳು.

ಪುಷ್ಯತಿ ಪ್ರಜಯಾ ಪಶುಭಿರಥೋ ಯದೇತಾ

ಆಹುತೀರ್ಜುಹೋತಿ ಪ್ರತಿಷ್ಠಿತ್ಯೈ ॥೧೮-6॥

[ಅಸ್ಮೈ ತ ಏವ ದ್ವಾದಶ ಚ ॥]

---

ಪುಷ್ಯತಿ । ಪ್ರಜಯೇತಿ ಪ್ರ-ಜಯಾ । ಪಶುಭಿರಿತಿ ಪಶು-ಭಿಃ । ಅಥೋ ಇತಿ । ಯತ್ । ಏತಾಃ । ಆಹುತೀರಿತ್ಯಾ-ಹುತೀಃ । ಜುಹೋತಿ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ ॥6॥

---

| | |
|---|---|
| ಪುಷ್ಯತಿ ಪ್ರಜಯಾ ಪಶುಭಿಃ | ಯಜಮಾನನು ಪ್ರಜೆಗಳಿಂದಲೂ, ಪಶುಗಳಿಂದಲೂ ವೃದ್ಧಿಯನ್ನು ಹೊಂದಿ ಪುಷ್ಟನಾಗುತ್ತಾನೆ. |
| ಅಥೋ ಯತ್ ಏತಾಃ ಆಹುತೀಃ ಜುಹೋತಿ ಪ್ರತಿಷ್ಠಿತ್ಯೈ | ಮತ್ತು ಈ ಆಹುತಿಗಳನ್ನು ಕೊಡುವುದೆಂಬುದು ಯಾವುದುಂಟೋ ಅದು ಯಜಮಾನನ ಶ್ರೇಷ್ಠ ಸ್ಥಿತಿಗೆ ಕಾರಣವಾಗುತ್ತದೆ. |

---

ಬಳಿಕ **'ಅಗ್ನೇ ಗೋಭಿಃ'** ಮುಂತಾದ ಏಳು ಮಂತ್ರಗಳಿಂದ ಆಜ್ಯಾಹುತಿಗಳನ್ನು ಕೊಡಬೇಕು. ಈ ಅಗ್ನ್ಯಾದಿದೇವತೆಗಳು ಪುಷ್ಟಿಯ ಪ್ರಭುಗಳು. ಅವರು ಈ ಯಜಮಾನನಿಗೆ ಪ್ರಜಾ-ಪಶುಗಳ ಅಭಿವೃದ್ಧಿಯನ್ನು ಕೊಡುತ್ತಾರೆ. ಯಜಮಾನನು ಪ್ರಜೆಗಳ ಮತ್ತು ಪಶುಗಳ ಪುಷ್ಟಿಯನ್ನು ಹೊಂದುತ್ತಾನೆ ಮತ್ತು ಈ ಆಹುತಿಗಳನ್ನು ಕೊಡುವುದು ಯಜಮಾನನು ಶ್ರೇಷ್ಠವಾದ ಸ್ಥಿತಿಯಲ್ಲಿ ಬಾಳುವುದಕ್ಕೆ ಕಾರಣವಾಗುತ್ತದೆ.

★ ★ ★

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

**೧. 'ಚಿತ್ರಯಾ ಯಜೇತ ಪಶುಕಾಮಃ' ಎಂಬಲ್ಲಿ 'ಚಿತ್ರಾ' ಎಂದರೇನು ?**

**[ಜೈ.ಸೂ. ೧-೪-೬-೭]**

**'ಚಿತ್ರಯಾ ಯಜೇತ ಪಶುಕಾಮಃ'** ಎಂಬ ವಾಕ್ಯದಲ್ಲಿರುವ **'ಚಿತ್ರಾ'** ಎಂಬ ಪದವು ಏನನ್ನು ಬೋಧಿಸುತ್ತದೆ ? ಎಂಬುದು ಇಲ್ಲಿನ ಸಂಶಯ.

ಈ ವಾಕ್ಯವು ಅಗ್ನೀಷೋಮೀಯಪಶುವಿನಲ್ಲಿ ಚಿತ್ರತ್ವವನ್ನೂ ಸ್ತ್ರೀತ್ವವನ್ನೂ ವಿಧಿಸುತ್ತದೆ. **'ಅಗ್ನೀಷೋಮೀಯಂ ಪಶುಮಾಲಭೇತ'** ಎಂದು ವಿಹಿತವಾಗಿರುವ ಪಶುಯಾಗವನ್ನು **'ಯಜೇತ'** ಎಂಬ ಪದದಿಂದ ಅನುವಾದ ಮಾಡಿ ಆ ಪಶುವಿನಲ್ಲಿರಬೇಕಾದ ಗುಣವನ್ನು ಈ ವಾಕ್ಯವು ವಿಧಿಸುತ್ತದೆ. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ **ಸಿದ್ಧಾಂತವು** ಹೀಗಿದೆ; ಈ ವಾಕ್ಯದಿಂದ ಗುಣವು ವಿಧಿಸಲ್ಪಡುವುದಾದರೆ ಚಿತ್ರತ್ವವೂ ಸ್ತ್ರೀತ್ವವೂ ಗುಣವಾಗುವುದರಿಂದ ಅದನ್ನು ಅನುಸರಿಸಿ ವಾಕ್ಯಭೇದವು ಉಂಟಾಗುವುದು. ಅನೇಕ ಗುಣಗಳನ್ನು ವಿಧಿಸುವುದು ವಾಕ್ಯಭೇದವನ್ನುಂಟುಮಾಡುವುದರಿಂದ ಉಚಿತವಲ್ಲವೆಂಬುದು ಈ ವಚನದಿಂದ ತಿಳಿಸಲಾಗಿದೆ;

**ಪ್ರಾಪ್ತೇ ಕರ್ಮಣಿ ನಾನೇಕೋ ವಿಧಾತುಂ ಶಕ್ಯತೇ ಗುಣಃ ।**
**ಅಪ್ರಾಪ್ತೇ ತು ವಿಧೀಯಂತೇ ಬಹವೋಽಪ್ಯೇಕಯತ್ನತಃ ॥**

**- ತಂತ್ರವಾರ್ತಿಕ ೨-೨-೬**

ಹೀಗಾಗಿ ಇಲ್ಲಿ ಗುಣವಿಧಾನವಿಲ್ಲ. **'ದಧಿ ಮಧು ಘೃತಮಾಪೋ ಧಾನಾಸ್ತಂಡುಲಾಸ್ತತ್ಸಂಸೃಷ್ಟಂ ಪ್ರಾಜಾಪತ್ಯಮ್'*** ಎಂಬ ವಾಕ್ಯದಿಂದ ಯಾಗವಿಧಿ; **'ಚಿತ್ರಯಾ ಯಜೇತ'** ಎಂಬುದರಿಂದ ಫಲವಿಧಿ; ಈ ಯಾಗದಲ್ಲಿ ವಿಚಿತ್ರದ್ರವ್ಯಗಳಿರುವುದರಿಂದ ಚಿತ್ರಾಶಬ್ದವು ಕರ್ಮನಾಮಧೇಯವಾಗಿದೆ. ಇದರಂತೆಯೇ ಆಜ್ಯ-ಪೃಷ್ಠ್ಯಾದಿಶಬ್ದಗಳೂ ಕರ್ಮನಾಮಧೇಯಗಳು.

---

* **ತೈತ್ತಿರೀಯಶಾಖೆಯಲ್ಲಿ 'ದಧಿ ಮಧು ಘೃತಮಾಪೋ ಧಾನಾ ಭವಂತಿ' ಎಂಬ ವಾಕ್ಯವು ಈ ಪ್ರಕರಣದಲ್ಲಿ ಇಲ್ಲ. ಆ ವಾಕ್ಯವು ಪ್ರಾಜಾಪತ್ಯಯಾಗಪ್ರಕರಣದಲ್ಲಿ ಇದೆ. ಈ ಪ್ರಕರಣದಲ್ಲಿ ಆಗ್ನೇಯ ಅಷ್ಟಾಕಪಾಲಾದಿಯಾಗಗಳು ಶಾಖಾಂತರದಲ್ಲಿ ಇವೆ. ಈ ಚಿತ್ರಾಯಾಗಪ್ರಕರಣದಲ್ಲಿ ಆಗ್ನೇಯಾದಿ ಯಾಗಗಳಿವೆ. ಪ್ರಾಜಾಪತ್ಯಯಾಗವು ಇಲ್ಲ. ಆದುದರಿಂದ ಈ ಮೇಲಿನ ಮೀಮಾಂಸಾವಿಚಾರವು ಶಾಖಾಂತರ ವಾಕ್ಯವನ್ನು ಅವಲಂಬಿಸಿದೆಯೆನ್ನಬಹುದು. ಚಿತ್ರಾಶಬ್ದವು ಕರ್ಮನಾಮಧೇಯವಾಗಿದೆಯೆನ್ನುವುದು ಎರಡೂ ಪಕ್ಷಗಳಲ್ಲಿ ಸಮಾನವೇ.**

**೨. ಪಶುಗಳನ್ನು ಫಲವನ್ನಾಗಿ ಪಡೆಯುವುದು ಎಲ್ಲಿ? [ಜೈ.ಸೂ. ೪-೩]**

**'ಚಿತ್ರಯಾ ಯಜೇತ ಪಶುಕಾಮಃ'** ಎಂದು ವಿಹಿತವಾದ ಚಿತ್ರೇಷ್ಟಿಯ ಫಲವಾದ ಪಶುಗಳನ್ನು ಯಜಮಾನನು ಹೊಂದುವುದು ಎಲ್ಲಿ? ಸ್ವರ್ಗಫಲವನ್ನು ಹೇಳಿರುವ ಇಷ್ಟಿಯನ್ನು ಅನುಷ್ಠಿಸಿದರೆ ಫಲವಾದ ಸ್ವರ್ಗವನ್ನು ಈ ದೇಹದಲ್ಲಿ ಅನುಭವಿಸಲು ಆಗದುದರಿಂದ ದೇಹಾಂತರವನ್ನು ಕಲ್ಪಿಸಿದಂತೆ ಪಶುಗಳೆಂಬ ಫಲವನ್ನು ಅನುಭವಿಸುವುದಕ್ಕಾಗಿಯೂ ದೇಹಾಂತರದ ಕಲ್ಪನೆಯೇ ಯುಕ್ತ. ಇದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ **ಸಿದ್ಧಾಂತವು** ಹೀಗಿದೆ : ಸ್ವರ್ಗಾದಿಗಳು ಈ ದೇಹದಲ್ಲಿ ಅನುಭವಿಸಲು ಅಸಾಧ್ಯವಾದವುಗಳು. ಆದುದರಿಂದ ದೇಹಾಂತರವನ್ನು ಕಲ್ಪಿಸಬೇಕು. ಆದರೆ ಪಶ್ವಾದಿಗಳನ್ನು ಈ ದೇಹದಲ್ಲಿಯೇ ಅನುಭವಿಸಲು ಸಾಧ್ಯವಿರುವುದರಿಂದ ದೇಹಾಂತರಕಲ್ಪನೆಯು ಬೇಕಾಗಿಲ್ಲ. ಆದರೆ ಪ್ರತಿಬಂಧಕದಿಂದ ಫಲಪ್ರತಿಬಂಧವಾಗಬಹುದು. ಅದಕ್ಕಾಗಿ ದೇಹಾಂತರದಲ್ಲಿ ಫಲಾನುಭವವಾಗುತ್ತದೆಯೆಂದು ಕಲ್ಪಿಸಬೇಕಾಗಿಲ್ಲ.

**೩. ಸಾರಸ್ವತಯಾಗದಲ್ಲಿ ನಿರ್ವಾಪ-ಪ್ರೋಕ್ಷಣಗಳು ಹೇಗೆ ? [ಜೈ.ಸೂ. ೫-೧]**

ಈ ಚಿತ್ರಾಯಾಗದಲ್ಲಿ **'ಸಾರಸ್ವತೌ ಭವತಃ'** ಎಂಬ ವಚನವಿದೆ. ಹೀಗಾಗಿ ಸರಸ್ವತೀದೇವತಾಕವಾದ ಚರುವು ಒಂದು. ಸರಸ್ವದ್ದೇವತಾತ್ಮಕವಾದ ಚರುವು ಇನ್ನೊಂದು. ಇಲ್ಲಿ ಹವಿರ್ನಿರ್ವಾಪ - ಪ್ರೋಕ್ಷಣಗಳನ್ನು ಅನುಷ್ಠಿಸುವಾಗ ಯಾವುದಕ್ಕೆ ಪ್ರಾಥಮ್ಯವನ್ನು ಕೊಡಬೇಕು ? ಎಂಬುದು ಇಲ್ಲಿನ **ಸಂಶಯ.**

ಯಾವ ದೇವತೆಗಾದರೂ ಪ್ರಾಥಮ್ಯವನ್ನಿತ್ತು ನಿರ್ವಾಪ-ಪ್ರೋಕ್ಷಣಗಳನ್ನು ಅನುಷ್ಠಿಸಬಹುದೆಂದು ಇಲ್ಲಿನ **ಪೂರ್ವಪಕ್ಷ.**

ಇಲ್ಲಿಯ **ಸಿದ್ಧಾಂತವು** ಹೀಗಿದೆ; **ಸಾರಸ್ವತೌ** ಎಂಬಲ್ಲಿ ಸಮಾಸವನ್ನು ಹೇಳುವಾಗ **'ಸರಸ್ವತೀ ಚ ಸರಸ್ವಾನ್ ಚ'** ಎಂದು ಸರಸ್ವತೀದೇವತಾವಾಚಕವಾದ ಶಬ್ದವು ಮೊದಲಿದೆ. ಹಾಗೆಯೇ ಯಾಜ್ಯಾ-ಪುರೋನುವಾಕ್ಯೆಗಳಲ್ಲಿಯೂ ಸಹ **'ಪ್ರ ಣೋ ದೇವೀ ಸರಸ್ವತೀ' 'ಆ ನೋ ದಿವಃ'** ಎಂದು ಮೊದಲು ಪಠಿತವಾಗಿದೆ. ಆದುದರಿಂದ ಮೊದಲು ಸರಸ್ವತೀಯಾಗದ ನಿರ್ವಾಪ-ಪ್ರೋಕ್ಷಣಾದಿಗಳನ್ನು ಮಾಡಬೇಕು.



## ॥ ಸಪ್ತಮೋಽನುವಾಕಃ ॥

**ಮಾರುತಮಸಿ ಮರುತಾಮೋಜೋಽಪಾಂ ಧಾರಾಂ ಭಿಂಧಿ**

---

**ಮಾರುತಮ್** । ಅಸಿ । ಮರುತಾಮ್ । ಓಜಃ । ಅಪಾಮ್ । ಧಾರಾಮ್ । ಭಿಂಧಿ ।

---

ಆರನೆಯ ಅನುವಾಕದಲ್ಲಿ ಚಿತ್ರಾಯಾಗವಿಧಿಯನ್ನು ಹೇಳಲಾಯಿತು. ಈ ಏಳನೆಯ ಅನುವಾಕವನ್ನು ಮೊದಲು ಮಾಡಿ *ನಾಲ್ಕು ಅನುವಾಕಗಳಲ್ಲಿ ಕಾರೀರೀಷ್ಟಿಯನ್ನು ಹೇಳಲಾಗುತ್ತದೆ. ಈ ಏಳನೆಯ ಅನುವಾಕದಲ್ಲಿ ಕಾರೀರೀಷ್ಟಿಯ ಕೆಲವು ಮಂತ್ರಗಳು ಇವೆ.

---

| ಮಂತ್ರ | ವಿನಿಯೋಗ |
|---|---|
| ಮಾರುತಮ್... ಭಿಂಧಿ ॥ | ಕೃಷ್ಣವಸ್ತ್ರವನ್ನು ಧರಿಸುವ ಮಂತ್ರ. |

---

**ಮಾರುತಮ್ ಅಸಿ** = [ಎಲೈ ಕೃಷ್ಣ ವಸ್ತ್ರವೇ !] ನೀನು ವಾಯುಸಂಬಂಧಿಯಾಗಿದ್ದೀಯೆ; **ಮರುತಾಮ್ ಓಜಃ** ಅಸಿ = ಮರುದ್ದೇವತೆಗಳ ಬಲವಾಗಿರುವೆ; **ಅಪಾಮ್ ಧಾರಾಮ್ ಭಿಂಧಿ** = ನೀರುಗಳ ಧಾರೆಯನ್ನು ಸುರಿಸು/ನೀರನ್ನು ಧರಿಸಿರುವ ಮೇಘಗಳನ್ನು ಭೇದಿಸಿ ಮಳೆಯು ಸುರಿಯುವಂತೆ ಮಾಡು.

---

ಎಲೈ ! ಕರಿಯ ಬಟ್ಟೆಯೇ ! ನೀನು ವಾಯುಸಂಬಂಧಿ. ವಾಯುದೇವತೆಗಳ ಬಲವೂ ಆಗಿರುತ್ತೀಯೆ*. ನೀನು ಮೇಘಗಳನ್ನು ಭೇದಿಸು; ಅವುಗಳಲ್ಲಿ ನೀರನ್ನು ಧಾರಾಕಾರವಾಗಿ ಸುರಿಸು.

---

* ಈ ನಾಲ್ಕು ಅನುವಾಕಗಳು ಹಗಲಿನಲ್ಲಿಯೇ ಅಧ್ಯಯನ ಮಾಡಬೇಕಾದ ದಿವಾಕೀರ್ತ್ಯಗಳು. ಇವುಗಳ ವಿಶೇಷ ವಿಷಯವನ್ನು ಕಾಂಡಾನುಕ್ರಮಣಿಕೆಯಲ್ಲಿ ಹೇಳಿರುತ್ತಾರೆ.

* ಕಪ್ಪು ಬಣ್ಣದ ಬಟ್ಟೆಯು ಬೇಗ ಒಣಗುತ್ತದೆ.

# ರಮಯತ ಮರುತಃ ಶ್ಯೇನಮಾಯಿನಂ ಮನೋಜವಸಂ ವೃಷಣಗ್ಂ ಸುವೃಕ್ತಿಮ್ ॥ ಯೇನ ಶರ್ಧ ಉಗ್ರಮವಸೃಷ್ಟಮೇತಿ

---

**ರಮಯತ । ಮರುತಃ । ಶ್ಯೇನಮ್ । ಆಯಿನಮ್ । ಮನೋಜವಸಮಿತಿ ಮನಃ-ಜವಸಮ್ । ವೃಷಣಮ್ । ಸುವೃಕ್ತಿಮಿತಿ ಸು-ವೃಕ್ತಿಮ್ । ಯೇನ । ಶರ್ಧಃ । ಉಗ್ರಮ್ । ಅವಸೃಷ್ಟಮಿತ್ಯವ-ಸೃಷ್ಟಮ್ । ಏತಿ ।**

---

| ಮಂತ್ರ | ವಿನಿಯೋಗ |
|---|---|
| ರಮಯತ... ಸುವೃಕ್ತಿಮ್ ॥ | ಪಶ್ಚಾದ್ವಾತನಿವರ್ತನಮಂತ್ರ |
| ಯೇನ... ಸ್ವಸ್ತಿ । | ಹಿಂದಿನ ಮಂತ್ರದ ಶೇಷ |

---

❖ **ಮರುತಃ** = ವಾಯುದೇವತೆಗಳೇ ! **ಶ್ಯೇನಮ್** = ಗಿಡಗದಂತೆ ಶೀಘ್ರಗತಿಯುಳ್ಳ; **ಆಯಿನಮ್** = ಬರುತ್ತಿರುವ; **ವೃಷಣಮ್** = ಮಳೆಯನ್ನು ಸುರಿಸುವ, **ಸುವೃಕ್ತಿಮ್** = ಪಶ್ಚಾದ್ವಾತವನ್ನು ತಡೆಯುವ; **ಮನೋಜವಸಮ್** = ಮನಸ್ಸಿನಂತೆ ವೇಗವುಳ್ಳ; [ಪುರೋವಾತವನ್ನು] **ರಮಯತ** = ವಿಹರಿಸುವಂತೆ ಮಾಡಿರಿ. ❖ [ಎಲೈ ಮರುದ್ದೇವತೆಗಳೇ !] **ಯೇನ** = ಯಾವ ಪುರೋವಾತದಿಂದ; [ನೀರು] **ಅವಸೃಷ್ಟಮ್** = ಮೋಡಗಳಿಂದ ಬಿಡಲ್ಪಟ್ಟು; **ಉಗ್ರಮ್** = ಜೋರಾಗಿ; **ಶರ್ಧಃ** = ಸಡಿಲವಾಗಿ ಹರಡಿಕೊಂಡು **ಏತಿ** = ಸುರಿಯುತ್ತದೆಯೋ; [ಆ ಪೂರ್ವದಿಕ್ಕಿನಿಂದ ಬೀಸುವ ಗಾಳಿಯು ಎಲ್ಲೆಲ್ಲಿಯೂ ಚೆನ್ನಾಗಿ ವಿಹರಿಸುವಂತೆ ಮಾಡಿರಿ]

---

ಹೇ! ಮರುದ್ದೇವತೆಗಳೇ! ಬಲವಾಗಿಯೂ, ವೇಗವಾಗಿಯೂ ಬೀಸುವ, ಮಳೆಯನ್ನು

# ತದಶ್ವಿನಾ ಪರಿಧತ್ತಗ್ಗ್ಂ ಸ್ವಸ್ತಿ। ಪುರೋವಾತೋ ವರ್‍ಷಞ್ಜಿನ್ವರಾವೃತ್ಸ್ವಾಹಾ

---

ತತ್ । ಅಶ್ವಿನಾ । ಪರೀತಿ । ಧತ್ತಮ್ । ಸ್ವಸ್ತಿ ॥ **ಪುರೋವಾತ ಇತಿ ಪುರಃ - ವಾತಃ ।** ವರ್‍ಷನ್ । ಜಿನ್ವಃ । ಆವೃದಿತ್ಯಾ-ವೃತ್ । ಸ್ವಾಹಾ ॥

---

| ಮಂತ್ರ | ವಿನಿಯೋಗ |
|---|---|
| ಪುರೋವಾತೋ... ಸ್ವಾಹಾ । | ವಾತಹೋಮದ ಪ್ರಥಮಮಂತ್ರ. |

---

**ಅಶ್ವಿನಾ** = ಅಶ್ವಿನೀದೇವತೆಗಳೇ ! **ತತ್** = ಆ ಮಳೆಯ ನೀರನ್ನು; **ಸ್ವಸ್ತಿ** = ಲೋಕಕ್ಕೆ ಕ್ಷೇಮ ಕರವಾಗುವಂತೆ; **ಪರಿಧತ್ತಮ್** = ಸುತ್ತಲೂ ಇರುವಂತೆ ಮಾಡಿ, ❖ **ಪುರೋವಾತಃ*** = ಮಳೆಯನ್ನು ತರುವ ಪೂರ್ವದಿಕ್ಕಿನಿಂದ ಬೀಸುವ ಗಾಳಿಯು; **ವರ್‍ಷನ್** = ಮಳೆಯನ್ನು ಸುರಿಸುತ್ತಾ; **ಜಿನ್ವಃ*** = ಲೋಕವನ್ನು ಸಂತೋಷ ಪಡಿಸುತ್ತಾ; **ಆವೃತ್** = ಸುತ್ತುತ್ತಿರಲಿ; **ಸ್ವಾಹಾ** = ಆ ಪುರೋವಾತನಿಗೆ ಈ ಹವ್ಯವು ಹುತವಾಗಲಿ.

---

ಸುರಿಸುವಂತಹ, ಮಳೆಗೆ ಪ್ರತಿಬಂಧಕವಾದ ಪಶ್ಚಾದ್ವಾತವನ್ನು ತಡೆಯಬಲ್ಲ ಪುರೋವಾತ ವನ್ನು ಕ್ರೀಡಿಸುವಂತೆ ಮಾಡಿರಿ.

ಮರುತರೇ ! ಯಾವ ಪೂರ್ವವಾತದಿಂದ ನೀರು ಮೋಡಗಳಿಂದ ಮುಕ್ತವಾಗಿ ಭೂಮಿಯಲ್ಲಿ ಜೋರಾಗಿ ಸುರಿಯುತ್ತದೆಯೋ ಆ ಪುರೋವಾತವು ನಿಮ್ಮ ಅನುಗ್ರಹದಿಂದ ಎಲ್ಲೆಲ್ಲಿಯೂ ಪ್ರತಿಬಂಧಕವಿಲ್ಲದೆ ವಿಹರಿಸುವಂತೆ ಮಾಡಿರಿ. ಅಶ್ವಿನೀದೇವತೆಗಳೇ ! ದೇವವೈದ್ಯರಾದ ನೀವು ಮಳೆಯ ನೀರು ವಿಶ್ವಕ್ಕೆ ಕ್ಷೇಮಕರವಾಗುವಂತೆ ಮಾಡಿರಿ. ಮಳೆ ಯನ್ನು ತರುವ ಪೂರ್ವದಿಕ್ಕಿನ ವಾಯುವು ಮಳೆಯನ್ನು ಸುರಿಸಿ, ಲೋಕಕ್ಕೆ ಹರ್ಷ

---

* ಎಂಟು ವಾತನಾಮಗಳಲ್ಲಿಯೂ ಈ ಪದವು ಸಂಬಂಧಿಸುತ್ತದೆ.

* ಜಿನ್ವಃ, ಉಗ್ರಃ, ಭೀಮಃ, ತ್ವೇಷಃ, ಪೂರ್ತಿಃ, ಶ್ರುತಃ, ವಿರಾಟ್ ಮತ್ತು ಭೂತಃ ಈ ಎಂಟೂ ಮಳೆಯನ್ನು ತರಿಸುವ ವಾಯುವಿನ ಹೆಸರುಗಳೆಂದೂ ವಿವರಿಸಬಹುದು.

# ವಾತಾವದ್ವರ್ಷನ್ನುಗ್ರರಾವೃತ್ಸ್ವಾಹಾ ಸ್ತನಯನ್ವರ್ಷ -ನ್ಭೀಮರಾವೃತ್ಸ್ವಾಹಾऽ-

---

**ವಾತಾವದಿತಿ ವಾತ-ವತ್** । ವರ್ಷನ್ । ಉಗ್ರಃ । ಆವೃದಿತ್ಯಾ-ವೃತ್ । ಸ್ವಾಹಾ । **ಸ್ತನಯನ್** । ವರ್ಷನ್ । ಭೀಮಃ । ಆವೃದಿತ್ಯಾ-ವೃತ್ । ಸ್ವಾಹಾ ।

---

| ಮಂತ್ರ | ವಿನಿಯೋಗ |
|---|---|
| **ವಾತಾವತ್... ಸ್ವಾಹಾ ॥** | ವಾತಹೋಮದ ದ್ವಿತೀಯಮಂತ್ರ. |
| **ಸ್ತನಯನ್... ಸ್ವಾಹಾ ॥** | ವಾತಹೋಮದ ತೃತೀಯಮಂತ್ರ |

---

❖ **ವಾತಾವತ್ ವರ್ಷನ್** = ಬಿರುಗಾಳಿಯುಳ್ಳದ್ದಾಗಿ ಮಳೆಯನ್ನು ಸುರಿಸುತ್ತಾ; **ಉಗ್ರಃ** = ದೊಡ್ಡ ದೊಡ್ಡ ಹನಿಗಳಿಂದ ಕೂಡಿದ್ದಾಗಿ; **ಆವೃತ್** = ಆವರಿಸಲಿ; **ಸ್ವಾಹಾ** = [ಅಂತಹ ವಾಯುವಿಗೆ] ಇದು ಹುತವಾಗಲಿ; ❖ **ಸ್ತನಯನ್** = ಗುಡುಗುತ್ತಾ; **ವರ್ಷನ್** = ಮಳೆಯನ್ನು ಸುರಿಸುತ್ತಾ; **ಭೀಮಃ** = ತನ್ನ ಗುಡುಗಿನ ಧ್ವನಿಯಿಂದ ಭಯವನ್ನುಂಟು ಮಾಡುತ್ತಾ; **ಆವೃತ್** = ಸುತ್ತುತ್ತಿರಲಿ; **ಸ್ವಾಹಾ** = [ಅಂತಹ ವಾಯುವಿಗೆ] ಇದು ಹುತವಾಗಲಿ.

---

ವನ್ನುಂಟುಮಾಡುತ್ತಾ, ಬಿರುಗಾಳಿಯಂತಾಗಿ ದೊಡ್ಡ ದೊಡ್ಡ ಹನಿಗಳನ್ನು ಸುರಿಸುತ್ತಾ ಗುಡುಗಿನ ಭಯವನ್ನುಂಟುಮಾಡುವ ಧ್ವನಿಯಿಂದೊಡಗೂಡಿ, ಸಿಡಿಲಿಲ್ಲದೆ, ಮಿಂಚನ್ನು ಪ್ರಕಾಶಪಡಿಸುತ್ತಾ, ಹಗಲು-ರಾತ್ರಿಗಳಲ್ಲಿಯೂ ಮಳೆಯನ್ನು ತರಲಿ. ಈ ಗಾಳಿಯು ಬಹಳ ಮಳೆಯನ್ನುಂಟುಮಾಡಿತೆಂದು ಎಲ್ಲರೂ ಹೇಳುವಂತಾಗಲಿ. ಇಂತಹ ವಾಯುವಿಗೆ ಈ ಹವಿಸ್ಸು ಹುತವಾಗಲಿ. ಸೂರ್ಯನು ಪ್ರಕಾಶಿಸುತ್ತಿರುವಾಗ ಮಳೆಯನ್ನು ಸುರಿಸುವ,

-ನಶನ್ಯವಸ್ಫೂರ್ಜನ್ದಿದ್ಯುದ್ವರ್ಷನ್ತ್ವೇಷರಾವೃತ್ಸ್ವಾ-
ಹಾऽತಿರಾತ್ರಂ ವರ್ಷನ್ಪೂರ್ತಿರಾವೃತ್ಸ್ವಾಹಾ [ಪೂರ್ತಿರಾ
ವೃತ್ (೧)] ಬಹು ಹಾಯಮವೃಷಾದಿತಿ

---

ಅನಶನಿ । ಅವಸ್ಫೂರ್ಜನ್ನಿತ್ಯವ-ಸ್ಫೂರ್ಜನ್ನ್ । ದಿದ್ಯುತ್ । ವರ್ಷನ್ನ್ । ತ್ವೇಷಃ । ಆವೃದಿತ್ಯಾ-ವೃತ್ । ಸ್ವಾಹಾ । ಅತಿರಾತ್ರಮಿತ್ಯತಿ-ರಾತ್ರಮ್ । ವರ್ಷನ್ನ್ । ಪೂರ್ತಿಃ । ಆವೃದಿತ್ಯಾ-ವೃತ್ । ಸ್ವಾಹಾ । ಬಹು । ಹ । ಅಯಮ್ । ಅವೃಷಾತ್ । ಇತಿ ।

---

| ಮಂತ್ರ | ವಿನಿಯೋಗ |
|---|---|
| ಅನಶನಿ.. ಸ್ವಾಹಾ ॥ | ವಾತಹೋಮದ ಚತುರ್ಥಮಂತ್ರ |
| ಅತಿರಾತ್ರಂ... ಸ್ವಾಹಾ ॥ | ವಾತಹೋಮದ ಪಂಚಮಮಂತ್ರ |
| ಬಹು ಹಾಯಮ್... ಸ್ವಾಹಾ ॥ | ವಾತಹೋಮದ ಷಷ್ಠಮಂತ್ರ |

---

❖ **ಅನಶನಿ** = ಸಿಡಿಲಿಲ್ಲದೆ; **ಅವಸ್ಫೂರ್ಜನ್** = ಮಳೆಯ ಶಬ್ದವನ್ನುಂಟುಮಾಡುತ್ತಾ; **ದಿದ್ಯುತ್** = ಮಿಂಚಿನಿಂದ ಪ್ರಕಾಶಗೊಳಿಸುತ್ತಾ; **ವರ್ಷನ್** = ಮಳೆ ಸುರಿಸುತ್ತಾ; **ತ್ವೇಷಃ** = ಹೊಲಗದ್ದೆಗಳನ್ನು ಬೆಳಗುತ್ತಾ; **ಆವೃತ್** = ಸುತ್ತುತ್ತಿರಲಿ; **ಸ್ವಾಹಾ** = [ಅಂತಹ ವಾಯುವಿಗೆ] ಇದು ಹುತವಾಗಲಿ; ❖ **ಅತಿರಾತ್ರಮ್ ವರ್ಷನ್** = ರಾತ್ರಿಯನ್ನು ಅತಿಕ್ರಮಿಸಿ ಹಗಲು-ರಾತ್ರಿಗಳಲ್ಲಿ ಮಳೆಗರೆಯುತ್ತಾ; **ಪೂರ್ತಿಃ ಆವೃತ್** = ಭೂಮಿಯನ್ನು ತುಂಬುತ್ತಾ ಸುತ್ತುತ್ತಿರಲಿ, **ಸ್ವಾಹಾ** = [ಅಂತಹ ವಾಯುವಿಗೆ] ಇದು ಹುತವಾಗಲಿ. ❖ **ಅಯಮ್** = ಈ ಗಾಳಿಯು; **ಬಹು ಅವೃಷಾತ್ ಹ** = ಬಹಳವಾಗಿ ಮಳೆಯನ್ನು ಸುರಿಸಿತಷ್ಟೆ. **ಇತಿ** = ಹೀಗೆಂದು;

ಶ್ರುತರಾವೃತ್ಸ್ವಾಹಾಽಽತಪತಿ ವರ್ಷನ್ವಿರಾಡಾವೃತ್ಸ್ವಾ

ಹಾಽವಸ್ಫೂರ್ಜನ್ದಿದ್ಯುದ್ವರ್ಷನ್ಭೂತರಾವೃತ್ಸ್ವಾಹಾ

---

ಶ್ರುತಃ। ಆವೃದಿತ್ಯಾ-ವೃತ್। ಸ್ವಾಹಾ। **ಆತಪತೀತ್ಯಾ - ತಪತಿ**। ವರ್ಷನ್ನ್। ವಿರಾಡಿತಿ ವಿ-ರಾಟ್। ಆವೃದಿತ್ಯಾ-ವೃತ್। ಸ್ವಾಹಾ। **ಅವಸ್ಫೂರ್ಜನ್ನಿತ್ಯವ-ಸ್ಫೂರ್ಜನ್ನ್**। ದಿದ್ಯುತ್। ವರ್ಷನ್ನ್। ಭೂತಃ। ಆವೃದಿತ್ಯಾ-ವೃತ್। ಸ್ವಾಹಾ।

---

| ಮಂತ್ರ | ವಿನಿಯೋಗ |
|---|---|
| **ಆತಪತಿ ... ಸ್ವಾಹಾ ॥** | ವಾತಹೋಮದ ಸಪ್ತಮಮಂತ್ರ. |
| **ಅವಸ್ಫೂರ್ಜನ್... ಸ್ವಾಹಾ ॥** | ವಾತಹೋಮದ ಅಷ್ಟಮಮಂತ್ರ. |

---

**ಶ್ರುತಃ** = ಪ್ರಸಿದ್ಧವಾಗಿರುವ; [ವಾಯುವು] **ಆವೃತ್** = ಮಳೆಯನ್ನು ಸುರಿಸುತ್ತಿರಲಿ; **ಸ್ವಾಹಾ** = [ಆ ವಾಯುವಿಗೆ] ಇದು ಹುತವಾಗಲಿ; **ಆತಪತಿ** [ಸತಿ] = ಸೂರ್ಯನು ಪ್ರಕಾಶಿಸುತ್ತಿರುವಾಗ; **ವರ್ಷನ್** = ಮಳೆ ಸುರಿಸುತ್ತಾ; **ವಿರಾಟ್** = ಪ್ರಕಾಶಿಸುತ್ತಿರುವ ವಾಯುವು; **ಆವೃತ್** = ಮತ್ತೆ ಮತ್ತೆ ಬರುತ್ತಿರಲಿ; **ಸ್ವಾಹಾ** = ಆ ವಾಯುವಿಗೆ ಈ ಹವಿಸ್ಸು ಹುತವಾಗಲಿ. ❖ **ಅವಸ್ಫೂರ್ಜನ್** = ಮಳೆಯನ್ನು ಸುರಿಸುವಾಗ ಶಬ್ದವನ್ನು ಮಾಡುತ್ತಾ; **ದಿದ್ಯುತ್ ವರ್ಷನ್** = ಮಿಂಚಿನಿಂದ ಪ್ರಕಾಶಗೊಳಿಸುತ್ತಾ; **ಭೂತಃ** = ಇಂತಹ ಲಕ್ಷಣಗಳಿಂದ ಕೂಡಿದ್ದಾಗಿರುವ ವಾಯುವು; **ಆವೃತ್** = ಮತ್ತೆ ಮತ್ತೆ ಸುತ್ತುತ್ತಾ ಬರಲಿ; **ಸ್ವಾಹಾ** = ಆ ವಾಯುವಿಗೆ ಈ ಹವಿಸ್ಸು ಹುತವಾಗಲಿ.

---

ಶಬ್ದ ಮಾಡುವ, ಮಿಂಚಿನಿಂದ ಪ್ರಕಾಶಗೊಳಿಸುವ ವಾಯುವು ಮತ್ತೆ ಮತ್ತೆ ಸುತ್ತುತ್ತಿರಲಿ.

ಸಂತೋಷವನ್ನುಂಟುಮಾಡುವ, ಶುದ್ಧಿಗೊಳಿಸುವಂತಹ, ಪ್ರವಾಹರೂಪವಾದ ಹರಿಯುವ, ಬಿಳಿಯ ಬಣ್ಣವುಳ್ಳ, ಮಿಂಚಿನ ಪ್ರಕಾಶವುಳ್ಳ, ಮೋಡದಲ್ಲಿರುವಾಗ ಸೂರ್ಯ

# ಮಾಂದಾ ವಾಶಾಃ ಶುಂಧ್ಯೂರಜಿರಾಃ ।
# ಜ್ಯೋತಿಷ್ಮತೀಸ್ತಮಸ್ವರೀರುಂದತೀಃ ಸುಫೇನಾಃ ॥
# ಮಿತ್ರಭೃತಃ ಕ್ಷತ್ರಭೃತಸ್ಸುರಾಷ್ಟ್ರಾ ಇಹ ಮಾಽವತ ॥

---

**ಮಾಂದಾಃ** । ವಾಶಾಃ । ಶುಂಧ್ಯೂಃ । ಅಜಿರಾಃ ॥ ಜ್ಯೋತಿಷ್ಮತೀಃ । ತಮಸ್ವರೀಃ । ಉಂದತೀಃ । ಸುಫೇನಾ ಇತಿ ಸು-ಫೇನಾಃ ॥ ಮಿತ್ರಭೃತ ಇತಿ ಮಿತ್ರ-ಭೃತಃ । ಕ್ಷತ್ರಭೃತ ಇತಿ ಕ್ಷತ್ರ-ಭೃತಃ । ಸುರಾಷ್ಟ್ರಾ ಇತಿ ಸು-ರಾಷ್ಟ್ರಾಃ । ಇಹ । ಮಾ । ಅವತ ॥

---

| ಮಂತ್ರ | ವಿನಿಯೋಗ |
| --- | --- |
| **ಮಾಂದಾ..... ಮಾಽವತ ॥** | ಕೃಷ್ಣಾಜಿನದಲ್ಲಿ ಖರ್ಜೂರ ಅಥವಾ ಕರೀರಗಳ ಹಿಟ್ಟನ್ನು ಹಾಕಿ ಜೇನುತುಪ್ಪದಿಂದ ಕಲಸಲು |

---

❖ **ಮಾಂದಾಃ*** = ಸಂತೋಷಕ್ಕೆ ಕಾರಣವಾದ ನೀರುಗಳೇ ! **ವಾಶಾಃ** = ಮಳೆ ಬರುವಾಗ ಶಬ್ದ ಮಾಡತಕ್ಕವುಗಳೇ ! **ಶುಂಧ್ಯೂಃ** = ಶುದ್ಧಿ ಮಾಡತಕ್ಕವುಗಳೇ ! **ಅಜಿರಾಃ** = ಪ್ರವಾಹರೂಪದಿಂದ ಹರಿಯತಕ್ಕವುಗಳೇ ! **ಜ್ಯೋತಿಷ್ಮತೀಃ** = ಬಿಳಿಯ ಬಣ್ಣವುಳ್ಳವುಗಳೇ !/ ಮಿಂಚಿನ ಪ್ರಕಾಶವುಳ್ಳವುಗಳೇ !; **ತಮಸ್ವರೀಃ** = ಕತ್ತಲೆಯನ್ನು ಉಂಟುಮಾಡತಕ್ಕವುಗಳೇ !; **ಉಂದತೀಃ** = ಭೂಮಿಯನ್ನು ತೋಯಿಸತಕ್ಕವುಗಳೇ !; **ಸುಫೇನಾಃ** = ನೊರೆಯಿಂದ ಕೂಡಿರತಕ್ಕವುಗಳೇ ! **ಮಿತ್ರಭೃತಃ** = ಜಗತ್ತಿಗೆ ಮಿತ್ರರಂತಿರುವ ಓಷಧೀ-ಸಸ್ಯಗಳನ್ನು ಪೋಷಿಸತಕ್ಕವುಗಳೇ ! **ಕ್ಷತ್ರಭೃತಃ** = ರಾಜ್ಯಾಧಿಪತಿಗಳನ್ನು ಪೋಷಿಸತಕ್ಕವುಗಳೇ ! **ಸುರಾಷ್ಟ್ರಾಃ** = ರಾಷ್ಟ್ರವನ್ನು ಪೋಷಿಸತಕ್ಕವುಗಳೇ ! **ಇಹ** = ಈ ಯಾಗಕರ್ಮದಲ್ಲಿ; **ಮಾ ಅವತ** = ನನ್ನನ್ನು ರಕ್ಷಿಸಿರಿ.

---

* **'ಮಾಂದಾಃ'** ಮೊದಲಾದ ಹನ್ನೊಂದು ಶಬ್ದಗಳು ನೀರಿನ ನಾಮಧೇಯಗಳು.

# ವೃಷ್ಣೋ ಅಶ್ವಸ್ಯ ಸಂದಾನಮಸಿ ವೃಷ್ಟ್ಯೈ

# ತ್ವೋಪನಹ್ಯಾಮಿ ॥೨೦-7॥

**[ಪೂರ್ತಿರಾವೃದ್ಧ್ವಿಚತ್ವಾರಿಗ್ಂಶಚ್ಚ ।]**

---

**ವೃಷ್ಣಃ** । ಅಶ್ವಸ್ಯ । ಸಂದಾನಮಿತಿ ಸಮ್-ದಾನಮ್ । ಅಸಿ । ವೃಷ್ಟ್ಯೈ । ತ್ವಾ । ಉಪೇತಿ । ನಹ್ಯಾಮಿ ॥7॥

---

| ಮಂತ್ರ | ವಿನಿಯೋಗ |
|---|---|
| **ವೃಷ್ಣೋ... ನಹ್ಯಾಮಿ ॥** | ಕೃಷ್ಣಾಜಿನದ ಕೊನೆಗಳನ್ನು ಕೂಡಿಸಿ ಕರಿಯ ಹಗ್ಗದಿಂದ ಕಟ್ಟಲು |

---

❖ [ಎಲೈ ! ರಜ್ಜುವೇ !] **ವೃಷ್ಣಃ ಅಶ್ವಸ್ಯ** = ರೇತೋವರ್ಷಣಸಮರ್ಥವಾದ ಕುದುರೆಯನ್ನು; **ಸಂದಾನಮ್ ಅಸಿ** = ಕಟ್ಟಿಹಾಕಲು ಸಮರ್ಥನಾಗಿದ್ದೀಯೆ - **ವೃಷ್ಟ್ಯೈ ತ್ವಾ** = ಮಳೆಗಾಗಿಯೇ ನಿನ್ನನ್ನು; **ಉಪನಹ್ಯಾಮಿ** = ಕಟ್ಟುತ್ತಿದ್ದೇನೆ.

---

ನನ್ನು ಮುಚ್ಚಿ ಕತ್ತಲೆಯನ್ನುಂಟುಮಾಡುವ, ಭೂಮಿಯನ್ನು ತೋಯಿಸುವ, ಹರಿಯುವಾಗ ಉಂಟಾಗುವ ನೊರೆಯಿಂದ ಕೂಡಿರುವ, ಸಸ್ಯಗಳನ್ನು ಪೋಷಿಸುವ, ಮಳೆಯಿಂದ ಲೋಕ ಕ್ಷೇಮವನ್ನುಂಟುಮಾಡಿ ರಾಷ್ಟ್ರಾಧಿಪತಿಗಳನ್ನು ಪೋಷಿಸುವ, ಸಸ್ಯಸಮೃದ್ಧಿಯನ್ನುಂಟುಮಾಡಿ ರಾಷ್ಟ್ರವನ್ನು ಪೋಷಿಸುವ ನೀರುಗಳೇ ! ನೀವು ನನ್ನನ್ನು ಈ ಯಾಗಕಾರ್ಯದಲ್ಲಿ ರಕ್ಷಿಸಿರಿ.

*ಎಲೈ ಕರಿಯ ಹಗ್ಗವೇ ! ನೀನು ರೇತಸ್ಸನ್ನು ಸುರಿಸಬಲ್ಲ ಕುದುರೆಯನ್ನು ಕಟ್ಟಲು ಸಮರ್ಥನಾಗಿದ್ದೀಯೆ. ಮಳೆಗಾಗಿ ಕೃಷ್ಣಾಜಿನವನ್ನು ನಿನ್ನಿಂದ ಕಟ್ಟುತ್ತೇನೆ. ಇದರಿಂದ ಮಳೆಯು ಉಂಟಾಗಲಿ.

---

* ಈ ಕಾರೀರೀಷ್ಟಿಯಲ್ಲಿ ಎಲ್ಲ ಸಾಧನಗಳೂ ಕಪ್ಪು ಬಣ್ಣದವಾಗಿರುತ್ತವೆ. ಮಳೆಯನ್ನು ಸುರಿಸುವ ಮೋಡವೂ ಕಪ್ಪು ಬಣ್ಣದ್ದಾಗಿರುತ್ತದೆ. ಈ ವರ್ಣಸಾಮ್ಯವಿರುವುದರಿಂದ ಮಳೆಯು ಶೀಘ್ರವಾಗಿ ಬರುತ್ತದೆ.

# ವಿನಿಯೋಗಸಂಗ್ರಹ

ಕಾರೀರ್ಯಾಂ ಮಾರುತಂ[1] ಕೃಷ್ಣಂ ಸ್ವಾಮೀ ಧಾರಯತೇ ಪಟಮ್ ।
[2]ರಮೇತಿ ಪಶ್ಚಿಮಂ ವಾತಂ ಪುರೋವಾತಂ ಕರೋತಿ ಹಿ ॥

[3-10]ಪುರೋಽಷ್ಟಾವಾಹುತೀರ್ಹುತ್ವಾ ಮಾಂದಾಃ[11] ಸಂಯೌತಿ ಸಕ್ತುಕಮ್ ।
ವೃಷ್ಣ[12] ಸಂನಹ್ಯತೇ ಸಕ್ತುಂ ಮಂತ್ರಾ ದ್ವಾದಶ ವರ್ಣಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ - 12

* * *

## ॥ ಅಷ್ಟಮೋಽನುವಾಕಃ ॥

ದೇವಾ ವಸವ್ಯಾ ಅಗ್ನೇ ಸೋಮ ಸೂರ್ಯ । ದೇವಾಃ ಶರ್ಮಣ್ಯಾ ಮಿತ್ರಾವರುಣಾಽರ್ಯಮನ್ । ದೇವಾಃ ಸಪೀತಯೋಽಪಾಂ ನಪಾದಾಶುಹೇಮನ್ ॥ * ಉದ್ನೋ ದತ್ತೋ

---

**ದೇವಾಃ** । ವಸವ್ಯಾಃ । ಅಗ್ನೇ । ಸೋಮ । ಸೂರ್ಯ ॥ **ದೇವಾಃ** । ಶರ್ಮಣ್ಯಾಃ । ಮಿತ್ರಾವರುಣೇತಿ ಮಿತ್ರಾ-ವರುಣಾ । ಅರ್ಯಮನ್ । ದೇವಾಃ । ಸಪೀತಯ ಇತಿ ಸ-ಪೀತಯಃ । ಅಪಾಮ್ । ನಪಾತ್ । ಆಶುಹೇಮನ್ನಿತ್ಯಾಶು-ಹೇಮನ್ । **ಉದ್ನಃ** । ದತ್ತ ।

---

ಏಳನೆಯ ಅನುವಾಕದಲ್ಲಿ ಕೆಲವು ಕಾರೀರೀಷ್ಟಿಮಂತ್ರಗಳನ್ನು ಹೇಳಲಾಯಿತು. ಈ ಎಂಟನೆಯ ಅನುವಾಕದಲ್ಲಿ ಉಳಿದ ಕೆಲವು ಮಂತ್ರಗಳು ಇವೆ.

---

| ಮಂತ್ರ | ವಿನಿಯೋಗ |
|---|---|
| ೧. **ದೇವಾ ವಸವ್ಯಾ... ಸೂರ್ಯ** । ಉದ್ನಃ... ಅವತ ॥<br>೨. **ದೇವಾಃ ಶರ್ಮಣ್ಯಾ**...ನ್ । ಉದ್ನಃ...ಅವತ ॥<br>೩. **ದೇವಾಃ ಸಪೀತಯಃ...ನ್** । ಉದ್ನಃ...ಅವತ ॥ | ಮೂರು ಚಾವಣಿಗಳಿರುವ ಬಂಡಿಯಲ್ಲಿರುವ ಮೂರು ಕರೀರಪಿಷ್ಟಗಳನ್ನು ಕಟ್ಟಿರುವ ಕೃಷ್ಣಾಜಿನವನ್ನು ಕಟ್ಟಲು/ ಕೃಷ್ಣಾಜಿನದಲ್ಲಿ ಮೂರು ಕರೀರ ಪಿಷ್ಟದ ಉಂಡೆಗಳನ್ನು ಕಟ್ಟಲು, **ಭ. ಭಾ. ಭಾ.** |
| **ಉದ್ನೋ ದತ್ತ... ವೃಷ್ಟ್ಯಾಽವತ** । | ಮೂರು ಮಂತ್ರಗಳಿಗೆ ಅನುಷಂಗ ಮಾಡಲು |

---

⁘ **ವಸವ್ಯಾಃ** = ಪ್ರಾಣಗಳ ವಾಸಕ್ಕೆ ಕಾರಣರಾಗಿರುವ; **ಅಗ್ನೇ, ಸೋಮ, ಸೂರ್ಯ** =

---

★ **ಉದ್ನೋ... ಅವತ** । ಈ ಮಂತ್ರಭಾಗವು ಹಿಂದಿನ **ದೇವಾ ವಸವ್ಯಾಃ, ದೇವಾಃ ಶರ್ಮಣ್ಯಾಃ, ದೇವಾಃ ಸಪೀತಯಃ** ಎಂಬ ಮೂರು ಮಂತ್ರಭಾಗಗಳಿಗೂ ಸೇರುತ್ತದೆ.

-ದಧಿಂ ಭಿಂತ ದಿವಃ ಪರ್ಜನ್ಯಾದಂತರಿಕ್ಷಾತ್ಪೃಥಿವ್ಯಾಸ್ತತೋ

ನೋ ವೃಷ್ಟ್ಯಾಽವತ ॥

---

ಉದಧಿಮಿತ್ಯುದ-ಧಿಮ್ । ಭಿಂತ । ದಿವಃ । ಪರ್ಜನ್ಯಾತ್ । ಅಂತರಿಕ್ಷಾತ್ । ಪೃಥಿವ್ಯಾಃ । ತತಃ । ನಃ । ವೃಷ್ಟ್ಯಾ । ಅವತ ॥

---

ಅಗ್ನಿ, ಸೋಮ ಮತ್ತು ಸೂರ್ಯ ಎಂಬ; **ದೇವಾಃ** = ದೇವತೆಗಳೇ ! **ಉದ್ನಃ ದತ್ತ** = ನಮಗೆ ನೀರನ್ನು ಕೊಡಿ; **ಉದಧಿಮ್ ಭಿಂತ** = ನೀರು ತುಂಬಿರುವ ಮೇಘವನ್ನು ಭೇದಿಸಿ ಮಳೆಯು ಬೀಳುವಂತೆ ಮಾಡಿ. **ದಿವಃ ಅಂತರಿಕ್ಷಾತ್ ಪೃಥಿವ್ಯಾಃ** = ಸ್ವರ್ಗ, ಅಂತರಿಕ್ಷ ಮತ್ತು ಭೂಲೋಕ - ಇವುಗಳನ್ನು ವ್ಯಾಪಿಸಿ; **ಪರ್ಜನ್ಯಾತ್** = ಪರ್ಜನ್ಯದೇವನ ಅನುಗ್ರಹ ದಿಂದ ಸುರಿಯುವ; **ವೃಷ್ಟ್ಯಾ** = ಮಳೆಯಿಂದ; **ತತಃ ನಃ ಅವತ** = ಮಳೆ ಸುರಿಸಿ, ಅನಂತರ ನಮ್ಮನ್ನು ರಕ್ಷಿಸಿ. ✣ **ದೇವಾಃ ಶರ್ಮಣ್ಯಾಃ** = ಸುಖವನ್ನು ಕೊಡುವ ದೇವತೆ ಗಳಾದ; **ಮಿತ್ರಾವರುಣಾ ಅರ್ಯಮನ್** = ಮಿತ್ರಾವರುಣ ಮತ್ತು ಅರ್ಯಮರೇ ! ಉದ್ನೋ ದತ್ತ, ಉದಧಿಂ ಭಿಂತ, ದಿವಃ ಅಂತರಿಕ್ಷಾತ್ ಪೃಥಿವ್ಯಾಃ ಪರ್ಜನ್ಯಾತ್ ವೃಷ್ಟ್ಯಾ ಅವತ = ನಮಗೆ ನೀರನ್ನು ಕೊಡಿ, ನೀರು ತುಂಬಿರುವ ಮೋಡಗಳನ್ನು ಭೇದಿಸಿ ಮಳೆ ಬೀಳುವಂತೆ ಮಾಡಿ, ಸ್ವರ್ಗ, ಅಂತರಿಕ್ಷ ಮತ್ತು ಭೂಲೋಕಗಳನ್ನು ವ್ಯಾಪಿಸಿ ಪರ್ಜನ್ಯಾನುಗ್ರಹದಿಂದ ಮಳೆಯನ್ನು ಸುರಿಸಿ, ನಮ್ಮನ್ನು ರಕ್ಷಿಸಿ.

---

ಪ್ರಾಣಿಗಳಿಗೆ ವಾಸಸ್ಥಾನವನ್ನು ಕಲ್ಪಿಸಿಕೊಡುವ ಅಗ್ನಿ, ಸೋಮ ಹಾಗೂ ಸೂರ್ಯರೆಂಬ ದೇವತೆಗಳೇ ! ನೀವು ನಮಗೆ ಜೀವನಾಧಾರವಾದ ನೀರನ್ನು ಕೊಡಿ. ನೀರನ್ನು ಧರಿಸಿರುವ ಮೋಡವನ್ನು ಭೇದಿಸಿ ಮಳೆಯನ್ನು ಸುರಿಸಿರಿ. ಪರ್ಜನ್ಯದೇವನ ಅನುಗ್ರಹದಿಂದ ಮೂರು ಲೋಕಗಳನ್ನು ವ್ಯಾಪಿಸಿ ಸುರಿಯುವ ಮಳೆಯ ಮೂಲಕ ನಮ್ಮನ್ನು ರಕ್ಷಿಸಿರಿ. ಸುಖಸಾಧಕರಾದ ಮಿತ್ರಾವರುಣ - ಅರ್ಯಮದೇವತೆಗಳೇ ! ನೀವೂ ಅದೇ ತೆರನಾಗಿ ನಮ್ಮನ್ನು ಸಲಹಿರಿ.

**ದಿವಾ ಚಿತ್ತಮಃ ಕೃಣ್ವಂತಿ ಪರ್ಜನ್ಯೇನೋದವಾಹೇನ ।**

**ಪೃಥಿವೀಂ ಯದ್ವ್ಯುಂದಂತಿ ॥ ಆ ಯಂ ನರಃ**

**ಸುದಾನವೋ ದದಾಶುಷೇ**

---

**ದಿವಾ** । ಚಿತ್ । ತಮಃ । ಕೃಣ್ವಂತಿ । ಪರ್ಜನ್ಯೇನ । ಉದವಾಹೇನೇತ್ಯುದ-ವಾಹೇನ ॥ ಪೃಥಿವೀಮ್ । ಯತ್ । ವ್ಯುಂದಂತೀತಿ ವಿ-ಉಂದಂತಿ ॥ **ಆ** । ಯಮ್ । ನರಃ । ಸುದಾನವ ಇತಿ ಸು-ದಾನವಃ । ದದಾಶುಷೇ ।

---

| ಮಂತ್ರ | ವಿನಿಯೋಗ |
|---|---|
| **ದಿವಾ.... ವ್ಯುಂದಂತಿ ॥** | ಮೊದಲನೆಯ ಉಂಡೆಯ ಹೋಮಮಂತ್ರ/ ಬಂಧನಮಂತ್ರ ಆಪ. ಶ್ರೌ. |
| **ಆ ಯಂ... ವೃಷ್ಟಯಃ ॥** | ಎರಡನೆಯ ಕಾರೀರಪಿಂಡದ ಹೋಮಮಂತ್ರ. |

---

✣ **ದೇವಾಃ ಸಪೀತಯಃ** = ಸಮಾನಸೋಮಪಾನವನ್ನು ಮಾಡುವ; **ಅಪಾಮ್ ನಪಾತ್, ಆಶುಹೇಮನ್** = ನೀರನ್ನು ರಕ್ಷಿಸುವ, ಶೀಘ್ರಗತಿಯುಳ್ಳ ಅಪಾಮ್ ನಪಾತ್ ಮೊದಲಾದ ದೇವತೆಗಳೇ ! ಉದ್ನಃ ದತ್ತ ದಧಿಂ ಭಿಂತ, ದಿವಃ ಅಂತರಿಕ್ಷಾತ್ ಪೃಥಿವ್ಯಾಃ ಪರ್ಜನ್ಯಾತ್ ವೃಷ್ಟ್ಯಾ ಅವತ = ನಮಗೆ ನೀರನ್ನು ಕೊಡಿ, ನೀರು ತುಂಬಿರುವ ಮೇಘಗಳನ್ನು ಭೇದಿಸಿ ಮಳೆಯು ಬೀಳುವಂತೆ ಮಾಡಿ. ಸ್ವರ್ಗ, ಅಂತರಿಕ್ಷ ಹಾಗೂ ಭೂಲೋಕಗಳನ್ನು ವ್ಯಾಪಿಸಿ ಪರ್ಜನ್ಯಾನುಗ್ರಹದಿಂದ ಮಳೆಯನ್ನು ಸುರಿಸಿ, ನಮ್ಮನ್ನು ರಕ್ಷಿಸಿ. ✣ **ಪೃಥಿವೀಮ್ ಯತ್ ವ್ಯುಂದಂತಿ** = ಯಾವಾಗ ವೃಷ್ಟಿದೇವತೆಗಳು ಭೂಮಿಯನ್ನು ಮಳೆಯಿಂದ ತೋಯಿಸುತ್ತಾರೆಯೋ, [ಆಗ] **ಉದವಾಹೇನ ಪರ್ಜನ್ಯೇನ** = ನೀರನ್ನು ಒಯ್ಯುವ ಮೋಡಗಳಿಂದ; **ದಿವಾ ಚಿತ್ ತಮಃ ಕೃಣ್ವಂತಿ** = ಹಗಲಿನಲ್ಲಿಯೇ ಕತ್ತಲನ್ನು ಉಂಟುಮಾಡುತ್ತಾರೆಯೋ; [ಅವರಿಗಾಗಿ ಇದು ಹುತವಾಗಲಿ]. ✣ **ಸುದಾನವಃ** = ದೇವತೆಗಳಿಗೆ ಒಳ್ಳೆಯ ಹವಿಸ್ಸನ್ನು ಸಮರ್ಪಿಸುವ; **ನರಃ** = ಋತ್ವಿಜರಾದ ಮಾನವರು; **ದದಾಶುಷೇ** = ದೇವತೆಗಳಿಗೆ ಹವಿಸ್ಸನ್ನು ಸಮರ್ಪಿಸುವ ಯಜಮಾನನಿಗಾಗಿ;

# ದಿವಃ ಕೋಶಮಚುಚ್ಯವುಃ । ವಿ ಪರ್ಜನ್ಯಾಃ ಸೃಜಂತಿ ರೋದಸೀ ಅನು

ದಿವಃ । ಕೋಶಮ್ । ಅಚುಚ್ಯವುಃ ॥ ವೀತಿ । ಪರ್ಜನ್ಯಾಃ । ಸೃಜಂತಿ । ರೋದಸೀ ಇತಿ । ಅನ್ವಿತಿ ।

**ಯಮ್ ಕೋಶಮ್** = ಯಾವ ದೇವತೆಗಳ ಕೋಶರೂಪವಾಗಿರುವ ಮೇಘವನ್ನು; **ದಿವಃ** = ಅಂತರಿಕ್ಷದಿಂದ/ಸ್ವರ್ಗದಿಂದ/**ಸೂರ್ಯ**ನಿಂದ; **ಆ ಅಚುಚ್ಯವುಃ** = ಸುತ್ತಲೂ ಸುರಿಸುವಂತೆ ಮಾಡಿದರೋ; **ಪರ್ಜನ್ಯಾಃ** = ಆ ಹಲವು ಮೋಡಗಳು; **ರೋದಸೀ ಅನು** = ಭೂಮ್ಯಾಕಾಶಗಳನ್ನು ಉದ್ದೇಶಿಸಿ; **ವಿ ಸೃಜಂತಿ** = ನೀರನ್ನು ಸುರಿಸುತ್ತವೆ.

ಸಮಾನವಾದ ಸೋಮಪಾನವುಳ್ಳ, ಮಳೆಯು ನಾಶವಾಗದಂತೆ ಮಾಡುವ, ಶೀಘ್ರ ಗಮನವುಳ್ಳ ಅಪಾಂ ನಪಾತ್ ಮೊದಲಾದ ದೇವತೆಗಳೇ ! ನೀವೂ ಅದೇ ರೀತಿಯಲ್ಲಿ ನಮ್ಮನ್ನು ಕಾಪಾಡಿರಿ.

ಮೂರು ಚಾವಣಿಗಳಲ್ಲಿ ಮೂರು ದಿನ ದಿನಕ್ಕೆ ಒಂದೊಂದರಂತೆ ಕರೀರಪಿಷ್ಟ ಮೊದಲಾದವುಗಳುಳ್ಳ ಉಂಡೆಗಳನ್ನು ಕೃಷ್ಣಾಜಿನದಲ್ಲಿ ಕಟ್ಟಬೇಕು. ಮಳೆ ಬಂದರೆ **'ದಿವಾ ಚಿತ್'** ಮೊದಲಾದ ಮೂರು ಮಂತ್ರಗಳಿಂದ ಆ ಉಂಡೆಗಳನ್ನು ಹೋಮ ಮಾಡಬೇಕು.

ವೃಷ್ಟಿದೇವತೆಗಳು ಮಳೆಯಿಂದ ಭೂಮಿಯನ್ನು ತೋಯಿಸುವಾಗ ನೀರು ತುಂಬಿರುವ ಮೇಘಗಳಿಂದ ಹಗಲಿನಲ್ಲಿಯೇ ಕತ್ತಲೆಯುಂಟಾಗುವಂತೆ ಮಾಡುತ್ತಾರೆ. ರಾತ್ರಿಯಲ್ಲಿ ಕತ್ತಲೆಯುಂಟುಮಾಡುತ್ತಾರೆಂದು ಹೇಳುವುದೇನಿದೆ ? ಅಂತಹ ದೇವತೆಗಳಿಗಾಗಿ ಇದು ಹುತವಾಗಲಿ.

**'ಯಜ್ಞಾದ್ಭವತಿ ಪರ್ಜನ್ಯಃ'** ಎಂಬ ವಚನದಂತೆ ಯಜ್ಞದ ಅನುಷ್ಠಾನದಿಂದ ಮಳೆಯುಂಟಾಗುತ್ತದೆ. ಋತ್ವಿಜರು ಯಜಮಾನನ ಪ್ರತಿನಿಧಿಗಳಾಗಿ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುತ್ತಾರೆ. ದೇವತೆಗಳ ಅನುಗ್ರಹದಿಂದ ಮೋಡಗಳು ಮಳೆಯನ್ನು ಸುರಿಸುತ್ತವೆ. ಮೋಡಗಳು ಭೂಮಿ-ಆಕಾಶಗಳನ್ನು ವ್ಯಾಪಿಸುವಂತಹ ಮಳೆಯನ್ನು ಸುರಿಸುತ್ತವೆ.

**ಧನ್ವನಾ ಯಂತಿ [೧] ವೃಷ್ಟಯಃ ॥ ಉದೀರಯಥಾ ಮರುತಃ ಸಮುದ್ರತೋ ಯೂಯಂ ವೃಷ್ಟಿಂ ವರ್‌ಷಯಥಾ ಪುರೀಷಿಣಃ ।**

---

ಧನ್ವನಾ । ಯಂತಿ । ವೃಷ್ಟಯಃ ॥ **ಉದಿತಿ । ಈರಯಥ ।** ಮರುತಃ । ಸಮುದ್ರತಃ । ಯೂಯಮ್ । ವೃಷ್ಟಿಮ್ । ವರ್‌ಷಯಥ । ಪುರೀಷಿಣಃ ॥

---

| **ಮಂತ್ರ** | **ವಿನಿಯೋಗ** |
|---|---|
| **ಉದೀರಯಥಾ... ಅವೃತ್ಸತ ॥** | ಮೂರನೆಯ ಕಾರೀರಪಿಷ್ಟಪಿಂಡಹೋಮಮಂತ್ರ |

---

**ವೃಷ್ಟಯಃ** = ಆ ಮಳೆಯ ನೀರುಗಳು; **ಧನ್ವನಾ** = ನೀರಿಲ್ಲದ ಪ್ರದೇಶದಲ್ಲಿ; **ಯಂತಿ** = [ನದಿಗಳಾಗಿ] ಹರಿಯುತ್ತವೆ; ✣ **ಮರುತಃ** = ಮರುದ್ದೇವತೆಗಳೇ ! **ಯೂಯಮ್** = ನೀವು; **ಸಮುದ್ರತಃ** = ಸಮುದ್ರದಂತಿರುವ ಮೋಡದಿಂದ; **ವೃಷ್ಟಿಮ್** = ಮಳೆಯನ್ನು; **ಉದೀರಯಥ** = ಉಂಟು ಮಾಡಿರಿ; ★**ಪುರೀಷಿಣಃ** = ನೀರುಳ್ಳ/ನೀರನ್ನು ಸುರಿಸಬಲ್ಲ ಮರುದ್ದೇವತೆಗಳೇ ! **ವರ್‌ಷಯಥ** = ಮಳೆಗರೆಯಿರಿ;

---

ಆ ನೀರುಗಳು ಪ್ರವಾಹರೂಪವಾಗಿ ನೀರಿಲ್ಲದ ಭೂಪ್ರದೇಶದಲ್ಲಿ ಹರಿದು ಸಸ್ಯವೃದ್ಧಿಯನ್ನುಂಟು ಮಾಡುತ್ತವೆ. ಇಂತಹ ಪರ್ಜನ್ಯದೇವತೆಗಳಿಗಾಗಿ ಈ ಹವಿಸ್ಸು ಹುತವಾಗಲಿ.

ಮರುದ್ದೇವತೆಗಳೇ ! ನೀವು ಸಮುದ್ರದಂತೆ ನೀರಿನಿಂದ ತುಂಬಿರುವ ಮೋಡಗಳಿಂದ

---

★ ಈ ಅರ್ಥವು ಭ.ಭಾ. ಭಾಷ್ಯವನ್ನು ಅನುಸರಿಸಿದೆ. '**ಪುರೀಷ**' ಶಬ್ದಕ್ಕೆ ನೀರು ಎಂಬ ಅರ್ಥವು ನಿರುಕ್ತದಲ್ಲಿ ಹೇಳಲ್ಪಟ್ಟಿದೆ.
ಸಾಯಣಭಾಷ್ಯದಲ್ಲಿ '**ಪುರೀಷಿಣಃ ವರ್ಷಯಥ**' = ಧೂಳಿನಿಂದ ಕೂಡಿದ ಭೂಮಿಯನ್ನು ತೋಯಿಸಿರಿ ಎಂಬ ಅರ್ಥವನ್ನು ವಿವರಿಸಲಾಗಿದೆ. **ಪುರೀಷಿಣಃ** ಎಂಬ ಸರ್ವಾನುದಾತ್ತ ಸ್ವರವು ಆಗ ಹೊಂದುವುದಿಲ್ಲ. ವೈದಿಕಪ್ರಯೋಗವಾದುದರಿಂದ ಸ್ವರವ್ಯತ್ಯಯವೆಂದು ಹೇಳಬೇಕಾಗುತ್ತದೆ.

# ನ ವೋ ದಸ್ರಾ ಉಪದಸ್ಯಂತಿ ಧೇನವಃ ಶುಭಂ ಯಾತಾಮನು ರಥಾ ಅವೃತ್ಸತ ॥ ಸೃಜಾ ವೃಷ್ಟಿಂ ದಿವ ಆಽಽದ್ಭಿಃ ಸಮುದ್ರಂ ಪೃಣ ॥

---

ನ। ವಃ। ದಸ್ರಾಃ। ಉಪೇತಿ। ದಸ್ಯಂತಿ। ಧೇನವಃ। ಶುಭಮ್। ಯಾತಾಮ್। ಅನ್ವಿತಿ। ರಥಾಃ। ಅವೃತ್ಸತ॥ ಸೃಜ। ವೃಷ್ಟಿಮ್। ದಿವಃ। ಏತಿ। ಅದ್ಭಿರಿತ್ಯತ್-ಭಿಃ। ಸಮುದ್ರಮ್। ಪೃಣ॥

---

| ಮಂತ್ರ | ವಿನಿಯೋಗ |
|---|---|
| ಸೃಜಾ... ಪೃಣ ॥ | ಉತ್ಕರಪ್ರದೇಶದಲ್ಲಿ ಇಟ್ಟಿರುವ - ಬಿಸಿಲಿನಲ್ಲಿಯೇ ಒಣಗಿರುವ - ಕಪ್ಪುಬಣ್ಣದ ಗಡಿಗೆಯನ್ನು ತುಂಬಿಸಲು |

---

**ದಸ್ರಾಃ** = ಭೂಮಿಯ ಒಣಗಿರುವಿಕೆಯನ್ನು ಹೋಗಲಾಡಿಸುವ ಮರುದ್ದೇವತೆಗಳೇ! **ಶುಭಮ್ ಯಾತಾಮ್** = ಲೋಕಾನುಗ್ರಹಕಾರ್ಯಕ್ಕಾಗಿ ಬರುತ್ತಿರುವ; **ವಃ** = ನಿಮ್ಮ; **ಧೇನವಃ** = ಹಾಲನ್ನೀಯುವ ಹಸುಗಳಂತಿರುವ ಮೋಡಗಳು; **ನ ಉಪದಸ್ಯಂತಿ** = ಯಾವಾಗಲೂ ಕ್ಷೀಣಿಸುವುದಿಲ್ಲ; **ರಥಾಃ** = ಯಾಗಕ್ಕಾಗಿ ಆಗಮಿಸುವ ದೇವತೆಗಳ ರಥಗಳು; **ಅನು ಅವೃತ್ಸತ** = ನಿಮ್ಮ ರಥಗಳನ್ನು ಅನುಸರಿಸಿ ಬರಲಿ. [ಇಂತಹ ಮರುದ್ದೇವತೆಗಳಿಗಾಗಿ ಇದು ಹುತವಾಗಲಿ]. ❖ [ಎಲೈ, ಮರುತ್ಸಂಘವೇ!] **ದಿವಃ** = ಅಂತರಿಕ್ಷದಿಂದ; **ವೃಷ್ಟಿಮ್ ಸೃಜ** = ಮಳೆಯನ್ನು ಉಂಟುಮಾಡು; **ಅದ್ಭಿಃ** = ಆ ನೀರುಗಳಿಂದ, ***ಸಮುದ್ರಮ್ ಆ ಪೃಣ** = ಸಮುದ್ರದಂತಿರುವ ಈ ಕುಂಭವನ್ನು ತುಂಬು.

---

ಮಳೆಯನ್ನು ಸುರಿಸಿರಿ. ನೀರಿನಿಂದ ತುಂಬಿರುವ ಮರುದ್ದೇವತೆಗಳೇ!/**ಧೂಳಿನಿಂದ ಕೂಡಿ ಬೀಸುವ ಮರುತರೇ!** ನೀವು ಮಳೆಯನ್ನು ಸುರಿಸಿರಿ. ಒಣಗಿದ ಭೂಮಿಯನ್ನು ತೋಯಿಸಬಲ್ಲವರೇ! ಹಾಲನ್ನು ಕರೆಯುವ ಧೇನುಗಳಂತಿರುವ ನಿಮ್ಮ ಮೋಡಗಳು

---

* **ಸಮುದ್ರ = ಮೋಡ; ಎಲೈ ಮರುತ್ಸಂಘವೇ! ಮತ್ತೆ ಮತ್ತೆ ಮೋಡಗಳನ್ನು ನೀರಿನಿಂದ ತುಂಬು.**

**ಭ.ಭಾ.ಭಾ.**

**ಅಬ್ಜಾ ಅಸಿ ಪ್ರಥಮಜಾ ಬಲಮಸಿ ಸಮುದ್ರಿಯಮ್ ॥**

**ಉನ್ನಂಭಯ ಪೃಥಿವೀಂ ಭಿಂಧೀದಂ ದಿವ್ಯಂ ನಭಃ ।**

---

**ಅಬ್ಜಾ ಇತ್ಯಪ್-ಜಾಃ** । ಅಸಿ । ಪ್ರಥಮಜಾ ಇತಿ ಪ್ರಥಮ-ಜಾಃ । ಬಲಮ್ । ಅಸಿ । ಸಮುದ್ರಿಯಮ್ ॥ **ಉದಿತಿ** । **ನಂಭಯ** । ಪೃಥಿವೀಮ್ । ಭಿಂಧಿ । ಇದಮ್ । ದಿವ್ಯಮ್ । ನಭಃ ॥

---

| ಮಂತ್ರ | ವಿನಿಯೋಗ |
|---|---|
| **ಅಬ್ಜಾ... ಸಮುದ್ರಿಯಮ್ ॥** | ಮೂರು ಕಾಲಿನ ಬಂಡಿಯ ಆಧಾರಸ್ತಂಭದಲ್ಲಿ ಅಥವಾ ಕೀಲುಗಳಲ್ಲಿ ಕಟ್ಟಿರುವ ಕರಿಯ ಹೆಣ್ಣು ಕುರಿಯನ್ನು ಪ್ರೋಕ್ಷಿಸಲು |
| **ಉನ್ನಂಭಯ... ದೃತಿಮ್ ॥** | ವರ್ಷಾಹೂಸ್ತಂಬದಲ್ಲಿ ಹೋಮವನ್ನು ಮಾಡಲು |

---

✣ [ಎಲೈ ಕುರಿಯೇ! ನೀನು] **ಅಬ್ಜಾಃ ಅಸಿ** = ನೀರಿನಿಂದ ಹುಟ್ಟಿರುತ್ತೀಯೆ. **ಪ್ರಥಮಜಾಃ ಅಸಿ** = ಪ್ರಥಮನಾದ ಪ್ರಜಾಪತಿಯಿಂದ ಜನಿಸಿರುವೆ/ಸೂರ್ಯನನ್ನು ಆವರಿಸಿದ ಕತ್ತಲೆಯನ್ನು ದೇವತೆಗಳು ದೂರ ಮಾಡಿದಾಗ ಮೊದಲು ಜನಿಸಿರುವೆ*. **ಸಮುದ್ರಿಯಮ್ ಬಲಮ್ ಅಸಿ** = ಮೋಡಕ್ಕೆ ಸಂಬಂಧಿಸಿದ ಬಲಸಾಧನವಾದ ನೀರೇ ಆಗಿರುತ್ತೀಯೆ/ಮಳೆಯನ್ನು ಉಂಟುಮಾಡುವ ಸಾಮರ್ಥ್ಯವೂ ನೀನು ಆಗಿರುವೆ* ✣ [ಎಲೈ.! ವರ್ಷಾಹೂಸ್ತಂಬವೇ !] ಕೊಮ್ಮೆ ಗಿಡವೇ ! **ಪೃಥಿವೀಮ್ ಉನ್ನಂಭಯ** = ಭೂಮಿಯನ್ನು ಚೆನ್ನಾಗಿ ತೋಯಿಸು. **ಇದಮ್ ದಿವ್ಯಮ್ ನಭಃ ಭಿಂಧಿ** = ಆಕಾಶದಲ್ಲಿ ಹುಟ್ಟಿರುವ, ಅಂತರಿಕ್ಷದಂತೆಯೇ ವ್ಯಾಪಕವಾಗಿರುವ ಮೇಘಮಂಡಲವನ್ನು ಭೇದಿಸಿ, ಮಳೆಯನ್ನು ಸುರಿಸು.

---

ಯಾವಾಗಲೂ ಕ್ಷೀಣಿಸುವುದಿಲ್ಲ, ಲೋಕಕಲ್ಯಾಣಾರ್ಥವಾಗಿ ಹವಿಸ್ಸನ್ನು ಸ್ವೀಕರಿಸಲು ಬರುವ

---

* ತೈ.ಸಂ. 2-1-2.

* ಈ ಹೋಮದ ಅನಂತರ ಕುರಿಯು ಕೂಗಿದರೆ ಮಳೆಯು ಬರುವ ಸೂಚನೆಯಾಗುತ್ತದೆ.

**ಉದ್ನೋ ದಿವ್ಯಸ್ಯ ನೋ ದೇಹೀಶಾನೋ ವಿಸೃಜಾ ದೃತಿಮ್ ॥**

**ಯೇ ದೇವಾ ದಿವಿಭಾಗಾ ಯೇಽಂತರಿಕ್ಷಭಾಗಾ**

**- ಯೇ ಪೃಥಿವಿಭಾಗಾಃ ।**

---

ಉದ್ನಃ । ದಿವ್ಯಸ್ಯ । ನಃ । ದೇಹಿ । ಈಶಾನಃ । ವೀತಿ । ಸೃಜ । ದೃತಿಮ್ ॥ **ಯೇ** । ದೇವಾಃ । ದಿವಿಭಾಗಾ ಇತಿ ದಿವಿ-ಭಾಗಾಃ । ಯೇ । ಅಂತರಿಕ್ಷಭಾಗಾ ಇತ್ಯಂತರಿಕ್ಷ-ಭಾಗಾಃ । ಯೇ । ಪೃಥಿವಿಭಾಗಾ ಇತಿ ಪೃಥಿವಿ-ಭಾಗಾಃ ॥

---

| ಮಂತ್ರ | ವಿನಿಯೋಗ |
| --- | --- |
| ಯೇ... ವಿವಿಶಂತು ॥ | ಆಹವನೀಯಾಗ್ನಿಯ ಮೇಲ್ಭಾಗದಲ್ಲಿ ಕೃಷ್ಣಾಜಿನವನ್ನು ಕೊಡಹಲು |

---

**ಉದ್ನಃ ದಿವ್ಯಸ್ಯ ನಃ ದೇಹಿ** = ದಿವ್ಯವಾದ ನೀರನ್ನು ನಮಗೆ ಕೊಡು; **ಈಶಾನಃ ದೃತಿಮ್ ವಿ ಸೃಜ** = [ಪುನರ್ನವಾಸ್ತಂಬದ ಉತ್ಪಾದಕನಾದ ದೇವನೇ!] ವೃಷ್ಟಿಯನ್ನು ಕೊಡಲು ಸಮರ್ಥನಾದ ನೀನು ನೀರಿನ ಚೀಲದಂತಿರುವ ಮೋಡಗಳು ಮಳೆಯನ್ನು ಸುರಿಸುವಂತೆ ಮಾಡು. ❖ **ಯೇ ದಿವಿಭಾಗಾಃ ದೇವಾಃ** = ಸ್ವರ್ಗವನ್ನು ಹೊಂದಿರುವ ಯಾವ ದೇವತೆಗಳಿದ್ದಾರೆಯೋ; **ಯೇ ಅಂತರಿಕ್ಷಭಾಗಾಃ** ದೇವಾಃ = ಅಂತರಿಕ್ಷವನ್ನು ಹೊಂದಿರುವ ಯಾವ ದೇವತೆಗಳಿದ್ದಾರೆಯೇ **ಯೇ ಪೃಥಿವಿಭಾಗಾಃ** ದೇವಾಃ = ಭೂಮಿಯಲ್ಲಿರುವ ಯಾವ ದೇವತೆಗಳು ಇದ್ದಾರೆಯೋ;

---

ನಿಮ್ಮ ರಥಗಳನ್ನು ಬೇರೆ ದೇವತೆಗಳ ರಥಗಳೂ ಅನುಸರಿಸಿ ಬರಲಿ. ಇಂತಹ ನಿಮಗೆ ಈ ಹವಿಸ್ಸು ಹುತವಾಗಲಿ.

ಎಲೈ ಮರುದ್ಗಣವೇ ! ಅಂತರಿಕ್ಷದಿಂದ ಮಳೆಯನ್ನು ಉಂಟುಮಾಡು. ಆ ನೀರುಗಳಿಂದ ಸಮುದ್ರದಂತಿರುವ ಕುಂಭವನ್ನು ತುಂಬು/ಮೇಘಗಳನ್ನು ತುಂಬು.

## ತ ಇಮಂ ಯಜ್ಞಮವಂತು ತ ಇದಂ ಕ್ಷೇತ್ರಮಾವಿಶಂತು

## ತ ಇದಂ ಕ್ಷೇತ್ರಮನು ವಿವಿಶಂತು ।।೨೨-8।।

---

ತೇ । ಇಮಮ್ । ಯಜ್ಞಮ್ । ಅವಂತು । ತೇ । ಇದಮ್ । ಕ್ಷೇತ್ರಮ್ । ಏತಿ । ವಿಶಂತು ।
ತೇ । ಇದಮ್ । ಕ್ಷೇತ್ರಮ್ । ಅನು । ವೀತಿ । ವಿಶಂತು ।।8।।

**[ಯಂತಿ ದೇವಾ ವಿಗ್ಂಶತಿಶ್ಚ ।]**

---

**ತೇ** = ಅವರು; **ಇಮಮ್ ಯಜ್ಞಮ್** = ಈ ಯಜ್ಞವನ್ನು; **ಅವಂತು** = ರಕ್ಷಿಸಲಿ. **ತೇ** = ಅವರು, **ಇದಮ್ ಕ್ಷೇತ್ರಮ್** = ಈ ವಿಶಾಲಭೂಮಿಯನ್ನು; **ಆ ವಿಶಂತು** = [ಮಳೆಯನ್ನಿತ್ತು] ವ್ಯಾಪಿಸಲಿ; **ತೇ** = ಅವರು; **ಇದಮ್ ಕ್ಷೇತ್ರಮ್** = ಯಜಮಾನನ ಈ ಕ್ಷೇತ್ರಾದಿಗಳನ್ನು; **ಅನು ವಿವಿಶಂತು** = ವಿಶೇಷವಾಗಿ ಮಳೆಯಿಂದ ತುಂಬಲಿ.

---

ಎಲೈ ! ಕುರಿಯೇ ! ನೀನು ನೀರಿನಿಂದ ಜನಿಸಿರುವೆ. ಪ್ರಜಾಪತಿಯಿಂದ ಹುಟ್ಟಿರುವೆ. ಮಳೆಯನ್ನು ಉಂಟುಮಾಡುವ ಸಾಮರ್ಥ್ಯವೂ ನೀನಾಗಿರುವೆ.

ಎಲೈ ! ಕೊಮ್ಮೆ ಗಿಡವೇ ! ನೀನು ಮಳೆಯನ್ನು ಸುರಿಸಿ ಭೂಮಿಯನ್ನು ತೋಯಿಸು. ಅಂತರಿಕ್ಷದಲ್ಲಿ ಹುಟ್ಟಿ ಚಲಿಸುವ ಮೋಡಗಳಿಂದ ಮಳೆಯನ್ನು ಸುರಿಸು. ದಿವ್ಯವಾದ ನೀರನ್ನು ನಮಗೆ ಕೊಡು. ಪುನರ್ನವೋತ್ಪಾದಕನಾದ ದೇವನೇ ! ನೀನು ನಮಗೆ ಮಳೆಯನ್ನು ಕೊಡಲು ಸಮರ್ಥನು. ನೀರಿನ ಚೀಲದಂತೆ ಜಲಪೂರ್ಣವಾದ ಮೇಘಗಳಿಂದ ಮಳೆಯನ್ನು ಸುರಿಸು.

ಸ್ವರ್ಗ, ಅಂತರಿಕ್ಷ ಮತ್ತು ಭೂಮಿಯ ದೇವತೆಗಳು ಈ ಯಜ್ಞವನ್ನು ರಕ್ಷಿಸಿ, ಭೂಮಿಗೆ - ವಿಶೇಷವಾಗಿ ಯಜಮಾನನ ಕ್ಷೇತ್ರಕ್ಕೆ - ಮಳೆಯನ್ನು ಕೊಟ್ಟು ಅನುಗ್ರಹಿಸಲಿ.

★ ★ ★

# ವಿನಿಯೋಗಸಂಗ್ರಹ

ವೃಷ್ಟಿಪ್ರದಾಯಾಂ ಕಾರೀರ್ಯಾಂ ದೇವಾ[1-3] ಇತ್ಯಾದಿಕೈಸ್ತ್ರಿಭಿಃ ।
ದಿನತ್ರಯೇ ಚರ್ಮಬಂಧಃ ಶಕಟಸ್ಥೇ ಭದಿಸ್ತ್ರಯೇ ।
ಉದ್ನೋ ದತ್ತೇತಿ ವಾಕ್ಯಂ ತು ತ್ರಯಾಣಾಂ ಶೇಷ ಇಷ್ಯತೇ ॥

[4-6]ದಿವಾ ತ್ರಿಭಿಃ ಸಕುತ್ತಹೋಮಃ [7]ಸೃಜೇತ್ಕುತ್ಕರಸಂಸ್ಥಿತಾಮ್ ।
ಸ್ಥಾಲೀಮದ್ಭಿಃ ಪೂರಯಿತ್ವಾ ಹ್ಯಬ್ಜಾ[8] ಪ್ರೋಕ್ಷತ್ಯಮಿಂ ಸ್ಥಿತಾಮ್ ॥

[9]ಉನ್ನಂ ಪುನರ್ನವಾಹೋಮೋ [10]ಯೇ ಚರ್ಮಾಗ್ನೌ ತು ಧೂಯತೇ ।
ಅಷ್ಟಮೇತ್ವನುವಾಕೇಽಸ್ಮಿನ್ ದಶ ಮಂತ್ರಾ ಉದೀರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ - 10

★ ★ ★

## ॥ ನವಮೋಽನುವಾಕಃ ॥

ಮಾರುತಮಸಿ ಮರುತಾಮೋಜ ಇತಿ ಕೃಷ್ಣಂ ವಾಸಃ

ಕೃಷ್ಣತೂಷಂ ಪರಿಧತ್ತ

---

**ಮಾರುತಮ್** । ಅಸಿ । ಮರುತಾಮ್ । ಓಜಃ । ಇತಿ । ಕೃಷ್ಣಮ್ । ವಾಸಃ । ಕೃಷ್ಣತೂಷಮಿತಿ ಕೃಷ್ಣ-ತೂಷಮ್ । ಪರೀತಿ । ಧತ್ತೇ ।

---

ಎಂಟನೆಯ ಅನುವಾಕದಲ್ಲಿ ಕಾರೀರೇಷ್ಟಿಯ ಉತ್ತರಭಾಗದ ಮಂತ್ರಗಳನ್ನು ಹೇಳಲಾಯಿತು. ಈ ಒಂಬತ್ತನೆಯ ಅನುವಾಕದಲ್ಲಿ ಏಳನೆಯ ಅನುವಾಕದ ಮಂತ್ರಗಳ ವಿನಿಯೋಗವು ಹೇಳಲ್ಪಟ್ಟಿದೆ.

### ಯಜಮಾನನು ಕೃಷ್ಣವಸ್ತ್ರವನ್ನು ಧರಿಸುವ ವಿಧಿ

| | |
|---|---|
| ಮಾರುತಮ್ ಅಸಿ<br>ಮರುತಾಮ್ ಓಜಃ ಇತಿ | ಮಾರುತಮಸಿ.... ಎಂಬ ಮಂತ್ರದಿಂದ |
| ಕೃಷ್ಣತೂಷಮ್ ಕೃಷ್ಣಮ್<br>ವಾಸಃ ಪರಿಧತ್ತೇ | ಕರಿಯ ಅಂಚುಗಳುಳ್ಳ ಕಪ್ಪು ಬಟ್ಟೆಯನ್ನು (ಯಜಮಾನನು) ಉಟ್ಟುಕೊಳ್ಳಬೇಕು. |

---

ಕಾರೀರೇಷ್ಟಿಯನ್ನು ಅನುಷ್ಠಿಸುವ ಯಜಮಾನನು **'ಮಾರುತಮಸಿ'** ಎಂಬ ಮಂತ್ರದಿಂದ ಕರಿಯ ಅಂಚುಗಳುಳ್ಳ ಕಪ್ಪು ಬಟ್ಟೆಯನ್ನು ಧರಿಸಬೇಕು. ಮಳೆಗರೆಯುವ ಮೋಡದ ಬಣ್ಣವೂ ಕಪ್ಪೇ.

ಏತದ್ವೈ ವೃಷ್ಟ್ಯೈ ರೂಪಗ್ಂ ಸರೂಪ ಏವ ಭೂತ್ವಾ

ಪರ್ಜನ್ಯಂ ವರ್ಷಯತಿ ರಮಯತ ಮರುತಃ ಶ್ಯೇನ

ಮಾಯಿನಮಿತಿ ಪಶ್ಚಾದ್ವಾತಂ ಪ್ರತಿಮೀವತಿ

---

ಏತತ್ । ವೈ । ವೃಷ್ಟ್ಯೈ । ರೂಪಮ್ । ಸರೂಪ ಇತಿ ಸ-ರೂಪಃ । ಏವ । ಭೂತ್ವಾ।

ಪರ್ಜನ್ಯಮ್ । ವರ್ಷಯತಿ । **ರಮಯತ** । ಮರುತಃ । ಶ್ಯೇನಮ್ । ಆಯಿನಮ್ । ಇತಿ ।

ಪಶ್ಚಾದ್ವಾತಮಿತಿ ಪಶ್ಚಾತ್-ವಾತಮ್ । ಪ್ರತೀತಿ । ಮೀವತಿ ।

---

| | |
|---|---|
| ಏತತ್ ವೈ ವೃಷ್ಟ್ಯೈ ರೂಪಮ್ | ಈ ಕಪ್ಪುಬಣ್ಣವೇ ಮಳೆಯನ್ನು ಸುರಿಸುವ ಮೋಡದ ರೂಪವಾಗಿದೆ. |
| ಸರೂಪಃ ಏವ ಭೂತ್ವಾ | [ಯಜಮಾನನು] ಕಪ್ಪಾದ ಮೋಡಗಳಿಗೆ ಸಮಾನವರ್ಣವನ್ನು ಹೊಂದಿದವನಾಗಿ |
| ಪರ್ಜನ್ಯಮ್ ವರ್ಷಯತಿ | ಮಳೆಯು ಸುರಿಯುವಂತೆ ಮಾಡಲು ಸಮರ್ಥನಾಗುತ್ತಾನೆ. |

**ಪಶ್ಚಾದ್ವಾತದ ತಡೆ; ಪುರೋವಾತಕ್ಕೆ ಪ್ರೇರಣೆ; ಆ ಮಂತ್ರದ ವ್ಯಾಖ್ಯಾನ**

| | |
|---|---|
| ರಮಯತ ಮರುತಃ ಶ್ಯೇನಮ್ ಆಯಿನಮ್ ಇತಿ | **'ರಮಯತ ಮರುತಃ.....ಸುವೃಕ್ತಿಮ್'** ಎಂಬ ಮಂತ್ರದಿಂದ |
| ಪಶ್ಚಾದ್ವಾತಮ್ ಪ್ರತಿಮೀವತಿ | ಮಳೆಗೆ ಪ್ರತಿಬಂಧಕವಾದ ಪಶ್ಚಾದ್ವಾತವನ್ನು ತಡೆಯುತ್ತಾನೆ. |

---

ಆದುದರಿಂದ ಇಂತಹ ಬಟ್ಟೆಯನ್ನು ಧರಿಸಿ* ಯಜಮಾನನು ಮಳೆಯು ಸುರಿಯುವಂತೆ ಮಾಡಲು ಸಮರ್ಥನಾಗುತ್ತಾನೆ.

---

★ **ಹೀಗೆ ರೂಪಸಾದೃಶ್ಯವೂ, ಸಂಖ್ಯಾಸಾದೃಶ್ಯವೂ ಕಾರ್ಯಸಾಧಕಗಳೆಂದು ಶ್ರುತಿಯಲ್ಲಿ ಹಲವು ಕಡೆ ವಿವರಣೆ ಇದೆ.**

ಪುರೋವಾತಮೇವ ಜನಯತಿ ವರ್ಷಸ್ಯಾವರುದ್ಧ್ಯೈ

ವಾತನಾಮಾನಿ ಜುಹೋತಿ ವಾಯುರ್ವೈ ವೃಷ್ಟ್ಯಾ ಈಶೇ

ವಾಯುಮೇವ ಸ್ವೇನ ಭಾಗಧೇಯೇನೋಪಧಾವತಿ

---

ಪುರೋವಾತಮಿತಿ ಪುರಃ-ವಾತಮ್ । ಏವ । ಜನಯತಿ । ವರ್ಷಸ್ಯ । ಅವರುದ್ಧ್ಯಾ ಇತ್ಯವ – ರುಧ್ಯೈ । **ವಾತನಾಮಾನೀತಿ ವಾತ – ನಾಮಾನಿ** । ಜುಹೋತಿ । ವಾಯುಃ । ವೈ । ವೃಷ್ಟ್ಯಾಃ । ಈಶೇ । ವಾಯುಮ್ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ ।

---

| | |
|---|---|
| ವರ್ಷಸ್ಯ ಅವರುಧ್ಯೈ | ಮಳೆಯ ಪ್ರಾಪ್ತಿಗಾಗಿ |
| ಪುರೋವಾತಮ್ ಏವ ಜನಯತಿ | ಮಳೆಯನ್ನು ತರುವ ಪುರೋವಾತವೇ ಉಂಟಾಗುವಂತೆ ಮಾಡುತ್ತಾನೆ. |

**ಪುರೋವಾತ ಮುಂತಾದ ಎಂಟು ವಾತನಾಮಹೋಮವಿಧಿ**

| | |
|---|---|
| ವಾತನಾಮಾನಿ ಜುಹೋತಿ | ಬಳಿಕ ಎಂಟು ವಾತನಾಮಹೋಮಗಳನ್ನು ಮಾಡಬೇಕು. |
| ವಾಯುಃ ವೈ ವೃಷ್ಟ್ಯಾಃ ಈಶೇ | ವಾಯುವೇ ಮಳೆಗೆ ಅಧಿಪತಿಯಾಗಿರುತ್ತಾನೆ. |
| ವಾಯುಮ್ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಉಪಹೋಮಗಳಿಂದ ಯಜಮಾನನು ವಾಯುವಿನ ಭಾಗವನ್ನು ಸಮರ್ಪಿಸಿ, ಸೇವಿಸಿದವನಾಗುತ್ತಾನೆ. |

---

**'ರಮಯತ ಮರುತಃ'** ಎಂಬ ಮಂತ್ರದ ಪಾದದಿಂದ ಮಳೆಗೆ ಪ್ರತಿಬಂಧಕವಾದ ಪಶ್ಚಾದ್ವಾತವು ತೊಲಗುತ್ತದೆ. ಮಳೆಗೆ ಅನುಕೂಲವಾದ ಪುರೋವಾತವೇ ಬೀಸುವಂತಾಗುತ್ತದೆ.

ಸ ಏವಾಸ್ಮೈ ಪರ್ಜನ್ಯಂ ವರ್ಷಯತ್ಯಷ್ಟೌ

[(೧)ಜುಹೋತಿ] ಜುಹೋತಿ ಚತಸ್ರೋ ವೈ ದಿಶಶ್ಚತಸ್ರೋಽ

ವಾಂತರದಿಶಾ ದಿಗ್ಭ್ಯ ಏವ ವೃಷ್ಟಿಗ್ಂ ಸಂ ಪ್ರಚ್ಯಾವಯತಿ

---

ಸಃ । ಏವ । ಅಸ್ಮೈ । ಪರ್ಜನ್ಯಮ್ । ವರ್ಷಯತಿ । ಅಷ್ಟೌ । ಜುಹೋತಿ । ಚತಸ್ರಃ । ವೈ । ದಿಶಃ । ಚತಸ್ರಃ । ಅವಾಂತರದಿಶಾ ಇತ್ಯವಾಂತರ – ದಿಶಾಃ । ದಿಗ್ಭ್ಯ ಇತಿ ದಿಕ್– ಭ್ಯಃ । ಏವ । ವೃಷ್ಟಿಮ್ । ಸಮ್ । ಪ್ರೇತಿ । ಚ್ಯಾವಯತಿ ।

---

| | |
|---|---|
| ಸಃ ಏವ ಅಸ್ಮೈ ಪರ್ಜನ್ಯಮ್ ವರ್ಷಯತಿ | ಆ ವಾಯುವೇ ಈ ಯಜಮಾನನಿಗಾಗಿ ಮಳೆಯನ್ನು ಸುರಿಸಿತ್ತಾನೆ. |
| ಅಷ್ಟೌ ಜುಹೋತಿ ಚತಸ್ರಃ ವೈ ದಿಶಃ ಚತಸ್ರಃ ಅವಾಂತರದಿಶಾಃ | ಈ ಹೋಮಗಳು ಎಂಟು ಇವೆ. ದಿಕ್ಕುಗಳು ನಾಲ್ಕು. ವಿದಿಕ್ಕುಗಳೂ ನಾಲ್ಕು. ಹೀಗೆ ಇವುಗಳ ಒಟ್ಟು ಸಂಖ್ಯೆಯೂ ಎಂಟಾಗಿದೆ. (ಹೀಗಾಗಿ ಎಂಟು ಹೋಮಗಳಿಂದ) |
| ದಿಗ್ಭ್ಯಃ ಏವ ವೃಷ್ಟಿಮ್ ಸಂ ಪ್ರಚ್ಯಾವಯತಿ | ಎಂಟು ದಿಕ್ಕುಗಳಿಂದಲೂ ಮಳೆಯು ಬೀಳುವಂತೆ ಮಾಡುತ್ತಾನೆ. |

---

**'ಪುರೋವಾತೋ ವರ್ಷನ್'** ಮೊದಲಾದ ಎಂಟು ಮಂತ್ರಗಳಿಂದ ಎಂಟು ವಾತನಾಮಹೋಮಗಳನ್ನು ಅನುಷ್ಠಿಸಬೇಕು. ವಾಯುವೇ ವೃಷ್ಟಿಗೆ ಪ್ರಭುವಾಗಿದ್ದಾನೆ. ಈ ಹವಿಸ್ಸುಗಳನ್ನು ಪಡೆದು ವಾಯುವು ಸಂಪ್ರೀತನಾಗುತ್ತಾನೆ. ಆತನೇ ಈ ಯಜಮಾನನಿಗಾಗಿ ಮಳೆಯನ್ನು ಸುರಿಸುತ್ತಾನೆ. ಎಂಟು ಹೋಮಗಳಿಂದ ಎಂಟು ದಿಕ್ಕುಗಳಿಂದಲೂ ಮಳೆಯು ಸುರಿಯುವಂತಾಗುತ್ತದೆ.

## ಕೃಷ್ಣಾಜಿನೇ ಸಂಯೌತಿ ಹವಿರೇವಾಕರಂತರ್ವೇದಿ ಸಂಯೌತ್ಯವರುದ್ಧ್ಯೈ ಯತೀನಾಮದ್ಯಮಾನಾನಾಗ್ಂ ಶೀರ್ಷಾಣಿ ಪರಾಪತನ್ತ್ ।

---

ಕೃಷ್ಣಾಜಿನ ಇತಿ ಕೃಷ್ಣ– ಅಜಿನೇ । ಸಮಿತಿ । ಯೌತಿ । ಹವಿಃ । ಏವ । ಅಕಃ । ಅಂತರ್ವೇದೀತ್ಯಂತಃ-ವೇದಿ । ಸಮಿತಿ । ಯೌತಿ । **ಯತೀನಾಮ್** । ಅದ್ಯಮಾನಾನಾಮ್ । ಶೀರ್ಷಾಣಿ । ಪರೇತಿ । ಅಪತನ್ನ್ ।

---

**ಕಾರೀರಪಿಷ್ಟಸಂಯವನ ವಿಧಿ; ಸ್ಥಾನ-ದೇಶಗಳು; ಫಲಪ್ರಶಂಸೆ**

| | |
|---|---|
| ಕೃಷ್ಣಾಜಿನೇ ಸಂಯೌತಿ | ಯಜ್ಞಸ್ವರೂಪವಾದ ಕೃಷ್ಣಾಜಿನದಲ್ಲಿ ಕಾರೀರ ಪಿಷ್ಟವನ್ನು ಕಲಸಬೇಕು. |
| ಹವಿಃ ಏವ ಅಕಃ | ಇದರಿಂದ ಆ ಪಿಷ್ಟವು ಯಜ್ಞದ ಹವಿಸ್ಸಾಗುವಂತೆ ಆಗುತ್ತದೆ. |
| ಅಂತರ್ವೇದಿ ಸಂಯೌತಿ ಅವರುದ್ಧ್ಯೈ | ವೇದಿಯ ಒಳಗಡೆ ಕಲಸಬೇಕು. ಇದರಿಂದ ಪಿಷ್ಟವು ಯಾಗಾರ್ಹವಾಗಿ ವೃಷ್ಟಿಗೆ ಕಾರಣವಾಗುತ್ತದೆ. |

**ಕರೀರಪಿಷ್ಟವಿಧಿಃ ಅದರ ಉಪಾಖ್ಯಾನ – ಫಲ**

| | |
|---|---|
| ಅದ್ಯಮಾನಾನಮ್ | (ಇಂದ್ರನಿಂದ ಬಿಸುಡಲ್ಪಟ್ಟು ತೋಳಗಳಿಂದ / ಕಾಡುನಾಯಿಗಳಿಂದ ) ತಿನ್ನಲ್ಪಡುವ |
| ಯತೀನಾಮ್ ಶೀರ್ಷಾಣಿ ಪರಾ ಅಪತನ್ | ಬ್ರಹ್ಮಜ್ಞಾನನಿಷ್ಠರಲ್ಲದ ಮತ್ತು ಸನ್ಯಾಸಾಶ್ರಮವ್ರತಗಳನ್ನು ಪಾಲಿಸದ ಸನ್ಯಾಸಿಗಳ / ರಾಕ್ಷಸವಿಶೇಷಗಳ ತಲೆಬುರುಡೆಗಳು ಭೂಮಿಯಲ್ಲಿ ಬಿದ್ದಿದ್ದವು. |

---

ಕೃಷ್ಣಾಜಿನದಲ್ಲಿ ಕಾರೀರಪಿಷ್ಟವನ್ನು **'ಮಾಂದಾ ವಾಶಾ'** ಮೊದಲಾದ ಮಂತ್ರಗಳಿಂದ ಜೇನಿನಿಂದ ಕಲಸಬೇಕು. ಇದರಿಂದ ಆ ಪಿಷ್ಟವು ಹವಿಸ್ಸಾಗುತ್ತದೆ. ಈ ಕಲಸುವಿಕೆಯು

ಖರ್ಜೂರಾ ಅಭವನ್ತೇಷಾಗ್ಂ ರಸ ಊರ್ಧ್ವೋಽಪತತ್ತಾನಿ

ಕರೀರಾಣ್ಯಭವನ್ಥ್ಸೌಮ್ಯಾನಿ ವೈ ಕರೀರಾಣಿ ಸೌಮ್ಯಾ

ಖಲು ವಾ ಆಹುತಿರ್ದಿವೋ ವೃಷ್ಟಿಂ ಚ್ಯಾವಯತಿ

---

ತೇ । ಖರ್ಜೂರಾಃ । ಅಭವನ್ನ್ । ತೇಷಾಮ್ । ರಸಃ । ಊರ್ಧ್ವಃ । ಅಪತತ್ । ತಾನಿ । ಕರೀರಾಣಿ । ಅಭವನ್ನ್ । ಸೌಮ್ಯಾನಿ । ವೈ । ಕರೀರಾಣಿ । ಸೌಮ್ಯಾ । ಖಲು । ವೈ । ಆಹುತಿರಿತ್ಯಾ-ಹುತಿಃ । ದಿವಃ । ವೃಷ್ಟಿಮ್ । ಚ್ಯಾವಯತಿ ।

---

| | |
|---|---|
| ತೇ ಖರ್ಜೂರಾಃ ಅಭವನ್ | ಅವು ತಾಲವೆಂಬ ಹೆಸರಿನ ಮಹಾಖರ್ಜೂರ ವೃಕ್ಷಗಳಾದವು. |
| ತೇಷಾಗ್ಂ ರಸಃ | ಆ ಖರ್ಜೂರ ಫಲಗಳ ರಸವು |
| ಊರ್ಧ್ವಃ ಅಪತತ್ | ಮೇಲಕ್ಕೆ ಹಾರಿ ಕೆಳಕ್ಕೆ ಬಿದ್ದಿತು. |
| ತಾನಿ ಕರೀರಾಣಿ ಅಭವನ್ | ಆ ರಸವು *ಕರೀರಗಳಾಗಿ ಪರಿಣಮಿಸಿತು./ ಸೋಮಲತಾಸದೃಶವಾದ ಲತೆಯಾಯಿತು. |
| ಕರೀರಾಣಿ ಸೌಮ್ಯಾನಿ ವೈ | ಕರೀರಗಳು ಸೋಮಸಂಬಂಧಿಯಾಗಿವೆ. |
| ಸೌಮ್ಯಾ ಆಹುತಿಃ ದಿವಃ ವೃಷ್ಟಿಮ್ ಚ್ಯಾವಯತಿ ಖಲು ವೈ | [ಹೀಗೆ] ಸೋಮಸಂಬಂಧಿಯಾದ ಕರೀರ ಪಿಷ್ಟದ ಆಹುತಿಯು ದ್ಯುಲೋಕದಿಂದ ಮಳೆಯನ್ನು ತರುತ್ತದೆ. |

---

ವೇದಿಕೆಯ ಒಳಗಡೆ ಮಾಡಲ್ಪಡಬೇಕು. ಇದರಿಂದ ಅದು ಯಾಗಾರ್ಹವಾಗಿ ವೃಷ್ಟಿಯು ಬರುತ್ತದೆ.

ಕರೀರಪಿಷ್ಟವು ಮಳೆಗೆ ಸಾಧನ. ಈ ಬಗ್ಗೆ ಶ್ರುತಿಯಲ್ಲಿ ಉಪಾಖ್ಯಾನವಿದೆ.ಸನ್ಯಾಸವನ್ನು ಸ್ವೀಕರಿಸಿದ್ದರೂ ಬ್ರಹ್ಮಜ್ಞಾನವಿಲ್ಲದ, ಸನ್ಯಾಸನಿಯಮಗಳನ್ನು ಪಾಲಿಸದ/ರಾಕ್ಷಸರಂತಿರುವ

---

★ ಬಿದಿರು ಮೊಳಕೆ, ಮುಳ್ಳಿನ ಗಿಡ, ಗಡಿಗೆ.

★ ವಂಶಾಂಕುರೇ ಕರೀರೋಽಸ್ತ್ರಿ ತರುಭೇದೇ ಘಟೇ ಚ ನಾ ಅಮರಕೋಶ, ನಾನಾರ್ಥವರ್ಗ.

ಯತ್ಕರೀರಾಣಿ ಭವಂತಿ [೨] ಸೌಮ್ಯಯೈವಾಽಽಹುತ್ಯಾ ದಿವೋ ವೃಷ್ಟಿಮವರುಂಧೇ ಮಧುಷಾ ಸಂಯೌತ್ಯಪಾಂ ವಾ ಏಷ ಓಷಧೀನಾಗ್ಂ ರಸೋ

---

ಯತ್ । ಕರೀರಾಣಿ । ಭವಂತಿ । ಸೌಮ್ಯಯಾ । ಏವ । ಆಹುತ್ಯೇತ್ಯಾ– ಹುತ್ಯಾ । ದಿವಃ । ವೃಷ್ಟಿಮ್ । ಅವೇತಿ । ರುಂಧೇ । **ಮಧುಷಾ** । ಸಮಿತಿ । ಯೌತಿ । ಅಪಾಮ್ । ವೈ । ಏಷಃ । ಓಷಧೀನಾಮ್ । ರಸಃ ।

---

| | |
|---|---|
| ಯತ್ ಕರೀರಾಣಿ ಭವಂತಿ | ಕರೀರಹೋಮವೆಂಬುದು ಯಾವುದುಂಟೋ (ಅದರಿಂದ) |
| ಸೌಮ್ಯಯಾ ಏವ ಆಹುತ್ಯಾ ದಿವಃ ವೃಷ್ಟಿಮ್ಅವರುಂಧೇ | ಸೋಮನಿಗೆ ಸಂಬಂಧಿಸಿದ ಕರೀರಪಿಷ್ಟ ಹೋಮದಿಂದ ದೇವಲೋಕದಿಂದ ಮಳೆಯು ಸುರಿಯುವಂತೆ ಆಗುತ್ತದೆ. |

**ಜೇನುತುಪ್ಪದಿಂದ ಕರೀರೆಪಿಷ್ಟವನ್ನು ಕಲಸುವ ವಿಧಿಃ ಫಲ**

| | |
|---|---|
| ಮಧುಷಾ ಸಂಯೌತಿ | ಜೇನುತುಪ್ಪದಿಂದ ಕೃಷ್ಣಾಜಿನದಲ್ಲಿ ಹಾಕಿರುವ ಕರೀರಪಿಷ್ಟವನ್ನು ಮಿಶ್ರಣ ಮಾಡಬೇಕು. |
| ಅಪಾಮ್ ಓಷಧೀನಾಮ್ ಏಷಃ ರಸಃ ಯತ್ ಮಧು | ಮಧುವೆಂಬುದು ಯಾವುದುಂಟೋ ಅದು ನೀರು ಮತ್ತು ಓಷಧಿಗಳ ರಸವಾಗಿದೆ.★ |

---

ಯತಿಗಳನ್ನು ಇಂದ್ರನು ಹಿಡಿದು ನರಿ –ತೋಳಗಳಿಗೆ ತಿನ್ನಲು ಹಾಕಿದನು.★ ಆ ಯತಿಗಳ ತಲೆಬುರುಡೆಗಳು ನೆಲದಲ್ಲಿ ಬಿದ್ದವು. ಅವು ಖರ್ಜೂರವೃಕ್ಷಗಳಾದವು.

---

★ ತೈ. ಸಂ. 6.2.7. ಇಂದ್ರೋ ....... ಆದನ್ ।

★ ಜೇನುನೊಣಗಳು ಹೂಗಳ ರಸವನ್ನು ಸಂಗ್ರಹಿಸಿ ಜೇನನ್ನುಂಟುಮಾಡುತ್ತವೆಯಷ್ಟೆ

ಯನ್ಮಧ್ವದ್ಭ್ಯ ಏವೌಷಧೀಭ್ಯೋ ವರ್ಷತ್ಯಥೋ ಅದ್ಭ್ಯ

ಏವೌಷಧೀಭ್ಯೋ ವೃಷ್ಟಿಂ ನಿನಯತಿ ಮಾಂದಾ ವಾಶಾ

ಇತಿ ಸಂಯೌತಿ

---

ಯತ್ । ಮಧು । ಅದ್ಭ್ಯ ಇತ್ಯತ್-ಭ್ಯಃ । ಏವ । ಓಷಧೀಭ್ಯ ಇತ್ಯೋಷಧಿ – ಭ್ಯಃ । ವರ್ಷತಿ । ಅಥೋ ಇತಿ । ಅದ್ಭ್ಯ ಇತ್ಯತ್ –ಭ್ಯಃ । ಏವ । ಓಷಧೀಭ್ಯ ಇತ್ಯೋಷಧಿ–ಭ್ಯಃ । ವೃಷ್ಟಿಮ್ । ನೀತಿ । ನಯತಿ । **ಮಾಂದಾಃ** । ವಾಶಾಃ । ಇತಿ । ಸಮಿತಿ । ಯೌತಿ ।

---

| | |
|---|---|
| ಅದ್ಭಃ ಏವ ಓಷಧೀಭ್ಯಃ ವರ್ಷತಿ | (ಮಧುಮಿಶ್ರಣ ಮಾಡುವುದರಿಂದ) ನೀರಿನಿಂದಲೂ ಓಷಧಿಗಳಿಂದಲೂ ಮಳೆಯನ್ನು ಪಡೆದಂತಾಗುತ್ತದೆ. |
| ಅಥೋ ಅದ್ಭಃ ಓಷಧೀಭ್ಯಃ ಏವ ವೃಷ್ಟಿಮ್ ನಿನಯತಿ | ಮತ್ತು ನೀರು ಮತ್ತು ಓಷಧಿಗಳಿಂದ ಉಂಟಾದ ಜೇನಿನಿಂದ ಮಳೆಯನ್ನು ಯಜಮಾನನು ಹೊಂದುವನು. |

**ಮಿಶ್ರಣವನ್ನು ಮಾಡಲು ಮಂತ್ರವಿಧಿ; ಅದರ ಪ್ರಶಂಸೆ**

| | |
|---|---|
| ಮಾಂದಾಃ ವಾಶಾಃ ಇತಿ ಸಂಯೌತಿ | **'ಮಾಂದಾಃ ವಾಶಾಃ'** ಮುಂತಾದ ಮಂತ್ರಗಳಿಂದ ಕರೀರಪಿಷ್ಟವನ್ನು ಕಟ್ಟಬೇಕು. |

---

ಅವುಗಳ ಹಣ್ಣುಗಳ ರಸವು ಮೇಲಕ್ಕೆ ಹಾರಿ ಕೆಳಗೆ ಬಿದ್ದಿತು. ಅವು * ಕರೀರಗಳಾದವು. ಅವು ರಸಜನ್ಯಗಳಾದುದರಿಂದ / ಸೋಮಲತಾಸದೃಶವಾದುದರಿಂದ ಸೋಮನಿಗೆ ಸಂಬಂಧಿಸಿದವು. ಕರೀರಪಿಷ್ಟಗಳು ಹೋಮಸಾಧನವಾಗಿ ಅವು ಸೌಮ್ಯಗಳಾದುದರಿಂದ ದೇವಲೋಕದಿಂದ ಮಳೆಯು ಬೀಳುವಂತೆ ಮಾಡುತ್ತದೆ.

ಜೇನುತುಪ್ಪದಿಂದ ಕರೀರಪಿಷ್ಟವನ್ನು ಕಲಸಬೇಕು. ಜೇನುತುಪ್ಪವು ಹೂಗಳ ರಸದ ಪರಿಣಾಮವಾಗಿರುವುದರಿಂದ ಅದರಿಂದ ಕರೀರಪಿಷ್ಟವನ್ನು ಕಲಸಿ ಉಂಡೆ ಮಾಡಿ

---

★ **ಕರೀರ = ಸೋಮಲತೆಯಂತಿರುವ ಲತೆ; ಖರ್ಜೂರ ಫಲ. ಹೀಗೆ ಎರಡೂ ವಿವರಣೆ ಇದೆ.**

ನಾಮಧೇಯ್ಯೈರೇವೈನಾ ಅಚ್ಛೈತ್ಯಥೋ ಯಥಾ ಬ್ರೂಯಾದ

ಸಾವೇಹೀತ್ಯೇವಮೇವೈನಾ ನಾಮಧೇಯ್ಯೈರಾ

[ನಾಮಧೇಯ್ಯೈರಾ (೩) ಚ್ಯಾವಯತಿ] ಚ್ಯಾವಯತಿ

---

ನಾಮಧೇಯ್ಯೈರಿತಿ ನಾಮ – ಧೇಯ್ಯೈಃ । ಏವ । ಏನಾಃ । ಅಚ್ಛ । ಏತಿ । ಅಥೋ ಇತಿ । ಯಥಾ । ಬ್ರೂಯಾತ್ । ಅಸೌ । ಏತಿ । ಇಹಿ । ಇತಿ । ಏವಮ್ । ಏವ । ಏನಾಃ । ನಾಮಧೇಯ್ಯೈರಿತಿ ನಾಮ–ಧೇಯ್ಯೈಃ । ಏತಿ । ಚ್ಯಾವಯತಿ ।

---

| | |
|---|---|
| ನಾಮಧೇಯ್ಯೈಃ ಏವ ಏನಾಃ ಅಚ್ಛೈತಿ | ಇದರಿಂದ ನೀರುಗಳ ಹೆಸರಿನಿಂದಲೇ ಮಳೆಯನ್ನು ಕರೆದು ಎದುರುಗೊಂಡಂತೆ ಆಗುತ್ತದೆ. |
| ಅಥೋ ಯಥಾ ಅಸೌ ಏಹಿ ಇತಿ ಬ್ರೂಯಾತ್ ಏದಮ್ ಏವ ಏನಾಃ ನಾಮಧೇಯ್ಯೈಃ ಆಚ್ಯಾವಯತಿ | ಲೋಕದಲ್ಲಿ ಯಾವ ರೀತಿ **'ಕೃಷ್ಣ'** ಮೊದಲಾದ ಹೆಸರು ಹಿಡಿದು ಕರೆಯುವರೋ ಹಾಗೆಯೇ ನೀರುಗಳ ಹೆಸರನ್ನು ಹಿಡಿದು ಕರೆದು ತನ್ನೆಡೆಗೆ ಬರುವಂತೆ/ಮಳೆಯನ್ನು ಸುರಿಸುವಂತೆ ಮಾಡುತ್ತಾನೆ. |

---

ಹೋಮವನ್ನು ಮಾಡುವುದರಿಂದ ನೀರಿನಿಂದ ಮತ್ತು ಓಷಧಿಗಳಿಂದಲೇ ಮಳೆಯನ್ನು ಸುರಿಸಿದಂತಾಗುತ್ತದೆ.

ಮಾಂದಾ; ವಾಶಾ; ಮುಂತಾದ ಮಂತ್ರಗಳಿಂದ ಕೃಷ್ಣಾಜಿನದಲ್ಲಿ ಕುದುರೆಯನ್ನು ಕಟ್ಟುವ ಕರಿಯ ಬಣ್ಣದ ಹಗ್ಗದಿಂದ ಆ ಕರೀರಪಿಷ್ಟದ ಉಂಡೆಗಳನ್ನು ಕಟ್ಟಬೇಕು. ಇದರಿಂದ ನೀರುಗಳ ಹೆಸರಿನಿಂದಲೇ ಮಳೆಯನ್ನು ಎದುರುಗೊಳ್ಳುವಂತಾಗುತ್ತದೆ. ಲೋಕದಲ್ಲಿ ಹೇಗೆ **'ಕೃಷ್ಣ'** ಮುಂತಾಗಿ ಹೆಸರು ಹಿಡಿದು ಕರೆದು ತಮ್ಮೆಡೆಗೆ ಬರುವಂತೆ

ವೃಷ್ಣೋ ಅಶ್ವಸ್ಯ ಸಂದಾನಮಸಿ ವೃಷ್ಟ್ಯೈ ತ್ವೋಪನ
ಹ್ಯಾಮೀತ್ಯಾಹ ವೃಷಾ ವಾ ಅಶ್ವೋ ವೃಷಾ ಪರ್ಜನ್ಯಃ
ಕೃಷ್ಣ ಇವ ಖಲು ವೈ ಭೂತ್ವಾ ವರ್ಷತಿ

---

ವೃಷ್ಣಃ । ಅಶ್ವಸ್ಯ । ಸಂದಾನಮಿತಿ ಸಮ್-ದಾನಮ್ । ಅಸಿ । ವೃಷ್ಟ್ಯೈ । ತ್ವಾ । ಉಪೇತಿ । ನಹ್ಯಾಮಿ । ಇತಿ । ಆಹ । ವೃಷಾ । ವೈ । ಅಶ್ವಃ । ವೃಷಾ । ಪರ್ಜನ್ಯಃ । ಕೃಷ್ಣಃ । ಇವ । ಖಲು । ವೈ । ಭೂತ್ವಾ । ವರ್ಷತಿ ।

---

**'ವೃಷ್ಣೋ ಅಶ್ವಸ್ಯ...' ಎಂಬ ಬಂಧನಮಂತ್ರದ ವ್ಯಾಖ್ಯಾನ; ಫಲ**

| | |
|---|---|
| ವೃಷ್ಣಃ ಅಶ್ವಸ್ಯ ಸಂದಾನಮ್ ಅಸಿ ವೃಷ್ಟ್ಯೈ ತ್ವಾ ಉಪನಹ್ಯಾಮಿ ಇತಿ ಆಹ | (ಕರಿಯ ಹಗ್ಗವೇ !) ನೀನು ಕುದುರೆಯನ್ನು ಕಟ್ಟತಕ್ಕವನು. ಮಳೆಗಾಗಿ ನಿನ್ನಿಂದ ಕೃಷ್ಣಾಜಿನವನ್ನು ಕಟ್ಟುವೆನು' ಎಂದು ಶ್ರುತಿಯು ಹೇಳುತ್ತದೆ. |
| ವೃಷಾ ವೈ ಅಶ್ವಃ ಪರ್ಜನ್ಯಃ ವೃಷಾ ಕೃಷ್ಣಃ ಇವ ಖಲು ವೈ ಭೂತ್ವಾ ವರ್ಷತಿ | ಕುದುರೆಯು ವರ್ಷಣಸಮರ್ಥವಾಗಿದೆ. ಮೇಘವೂ ಸೇಚನಸಮರ್ಥವಾಗಿದೆ. ಮೋಡವು ನೀರಿನಿಂದ ತುಂಬಿ ಕಪ್ಪಾಗಿಯೇ ಮಳೆಯನ್ನು ಸುರಿಸುತ್ತದೆ. |

---

ಮಾಡುತ್ತಾರೆಯೋ, ಅಂತೆಯೇ ನೀರಿನ ಹೆಸರುಗಳನ್ನು ಹಿಡಿದು ಕರೆದು ಮಳೆಯನ್ನು ಸುರಿಸುವಂತೆ ಯಜಮಾನನು ಮಾಡುತ್ತಾನೆ.

ಎಲೈ ಕರಿಯ ಹಗ್ಗವೇ ! ನೀನು ಸೇಚನಸಮರ್ಥವಾದ ಕುದುರೆಯನ್ನು ಕಟ್ಟಬಲ್ಲವನು. ಈಗ ನಿನ್ನಿಂದ ಈ ಕೃಷ್ಣಾಜಿನವನ್ನು ಕಟ್ಟುತ್ತೇನೆ ಎಂದು ಮಂತ್ರವು ಹೇಳುತ್ತದೆ.

ರೂಪೇಣೈವೈನಗ್ಂ ಸಮರ್ಧಯತಿ

ವರ್ಷಸ್ಯಾವರುದ್ಧ್ಯೈ ॥೨೬ - 9॥

[ಅಷ್ಟೌ ಭವಂತಿ ನಾಮಧೇಯ್ಯೈರೇಕಾನ್ನತ್ರಿಗ್ಂಶಚ್ಚ]

---

ರೂಪೇಣ । ಏವ । ಏನಮ್ । ಸಮಿತಿ । ಅರ್ಧಯತಿ । ವರ್ಷಸ್ಯ । ಅವರುದ್ಧ್ಯಾ ಇತ್ಯವ-ರುದ್ಧ್ಯೈ ॥9॥

---

| | |
|---|---|
| ರೂಪೇಣ ಏವ ಏನಮ್ ಸಮರ್ಧಯತಿ | *ರಜ್ಜುವಿನ ಕಪ್ಪು ಬಣ್ಣದಿಂದ ಈ ಮೋಡವನ್ನು ನೀರಿನಿಂದ ಸಮೃದ್ಧವಾಗುವಂತೆ ಮಾಡುತ್ತಾನೆ. |
| ವರ್ಷಸ್ಯ ಅವರುಧ್ಯೈ | ಇದು ಮಳೆಯ ಸಮೃದ್ಧಿಗೆ ಕಾರಣವಾಗುತ್ತದೆ. |

---

ಕುದುರೆಯೂ ಸೇಚನಸಮರ್ಥ. ಮೇಘವೂ ಸೇಚನಸಮರ್ಥ. ಆದುದರಿಂದ ಈ ಮಂತ್ರಪಾಠದಿಂದ ಜಲಸೇಚನವಾಗುತ್ತದೆ. ರಜ್ಜುವಿನ ಮತ್ತು ಕೃಷ್ಣಾಜಿನದ ಕೃಷ್ಣವರ್ಣದಿಂದ ಮೋಡವೂ ಕಪ್ಪಾಗಿ ಮಳೆಯು ಸಮೃದ್ಧಿಯಾಗಿ ಸುರಿಯುವಂತೆ ಆಗುತ್ತದೆ.

★ ★ ★

---

★ ಹಗ್ಗವೂ ಕಪ್ಪು, ಕೃಷ್ಣಾಜಿನವೂ ಕಪ್ಪು, ಈ ರೂಪಸಾದೃಶ್ಯವು ಮಳೆಗೆ ಕಾರಣ.

## ॥ ದಶಮೋಽನುವಾಕಃ ॥

ದೇವಾ ವಸವ್ಯಾ ದೇವಾಃ ಶರ್ಮಣ್ಯಾ ದೇವಾಃ

ಸಪೀತಯ ಇತ್ಯಾಬಧ್ನಾತಿ

---

**ದೇವಾಃ** । ವಸವ್ಯಾಃ । ದೇವಾಃ । ಶರ್ಮಣ್ಯಾಃ । ದೇವಾಃ । ಸಪೀತಯ ಇತಿ ಸ-ಪೀತಯಃ ।
ಇತಿ । ಏತಿ । ಬಧ್ನಾತಿ ।

---

ಒಂಬತ್ತನೆಯ ಅನುವಾಕದಲ್ಲಿ **'ಮಾರುತಮಸಿ'** ಎಂಬ ಅನುವಾಕದ ಮಂತ್ರಗಳ ವ್ಯಾಖ್ಯಾನವಾಯಿತು. ಈ ಹತ್ತನೆಯ ಅನುವಾಕದಲ್ಲಿ **'ದೇವಾ ವಸವ್ಯಾ'** ಎಂಬ ಅನುವಾಕದ ಮಂತ್ರಗಳ ವಿನಿಯೋಗ - ವಿವರಣೆಗಳಿವೆ.

---

| | |
|---|---|
| ದೇವಾ ವಸವ್ಯಾಃ ದೇವಾಃ<br>ಶರ್ಮಣ್ಯಾಃ, ದೇವಾಃ<br>ಸಪೀತಯಃ ಇತಿ ಆ ಬಧ್ನಾತಿ | 'ಉದ್ನೋ ದತ್ತ' ಎಂಬ ಅನುಷಂಗದಿಂದ ಕೂಡಿದ 'ದೇವಾ ವಸವ್ಯಾಃ' ಮುಂತಾದ ಮೂರು ಮಂತ್ರಗಳಿಂದ ಕೃಷ್ಣಾಜಿನದಲ್ಲಿ ಕಟ್ಟಿದ ಮೂರು ಉಂಡೆಗಳನ್ನು ಚಾವಣಿಯಲ್ಲಿ ಕಟ್ಟಲು |

---

ಕಾರೀರೇಷ್ಟಿಯ ಅನುಷ್ಠಾನದಲ್ಲಿ **'ದೇವಾ ವಸವ್ಯಾಃ' 'ದೇವಾಃ ಶರ್ಮಣ್ಯಾಃ' 'ದೇವಾಃ ಸಪೀತಯಃ'** ಎಂಬ ಮಂತ್ರಗಳಿಂದ **'ಉದ್ನೋ ದತ್ತ... ಅವತ'** ಎಂಬ ಅನುಷಂಗಾಂಶವನ್ನು ಸೇರಿಸಿಕೊಂಡು ಪ್ರತಿದಿನವೂ ಒಂದೊಂದರಂತೆ ಬಂಡಿಯ ಮೂರು ಚಾವಣಿಗಳಲ್ಲಿ ಕೃಷ್ಣಾಜಿನದಲ್ಲಿ ಕಟ್ಟಿರುವ ಉಂಡೆಗಳನ್ನು ಕಟ್ಟಬೇಕು.

ದೇವತಾಭಿರೇವಾನ್ವಹಂ ವೃಷ್ಟಿಮಿಚ್ಛತಿ ಯದಿ

ವರ್ಷೇತ್ತಾವತ್ಯೇವ ಹೋತವ್ಯಂ ಯದಿ

ನ ವರ್ಷೇಚ್ಛ್ವೋಭೂತೇ

---

ದೇವತಾಭಿಃ । ಏವ । ಅನ್ವಹಮಿತ್ಯನು-ಅಹಮ್ । ವೃಷ್ಟಿಮ್ । ಇಚ್ಛತಿ । **ಯದಿ** ।
ವರ್ಷೇತ್ । ತಾವತಿ । ಏವ । ಹೋತವ್ಯಮ್ । ಯದಿ । ನ । ವರ್ಷೇತ್ । ಶ್ವಃ । ಭೂತೇ ।

---

| | |
|---|---|
| ದೇವತಾಭಿಃ ಏವ ಅನ್ವಹಮ್ ವೃಷ್ಟಿಮ್ ಇಚ್ಛತಿ | [ಇದರಿಂದ] ವಸವ್ಯಾದಿದೇವತೆಗಳಿಂದಲೇ ಪ್ರತಿನಿತ್ಯವೂ ಮಳೆಯನ್ನು ಯಜಮಾನನು ಇಚ್ಛಿಸಿದವನಾಗುತ್ತಾನೆ. |

**ಪಿಂಡೀಹೋಮವ್ಯವಸ್ಥಾ**

| | |
|---|---|
| ಯದಿ ವರ್ಷೇತ್ | [ಮೂರು ದಿನಗಳಲ್ಲಿ] ಮಳೆಯು ಬೀಳುವುದಾದರೆ |
| ತಾವತಿ ಏವ ಹೋತವ್ಯಮ್ | ಅಷ್ಟರಲ್ಲಿಯೇ ಪಿಂಡೀಹೋಮಗಳನ್ನು ಮಾಡಿ ಮುಗಿಸಬೇಕು. |
| ಯದಿ ನ ವರ್ಷೇತ್ | [ಮೂರು ದಿನಗಳಲ್ಲಿ] ಮಳೆಯು ಬೀಳದಿದ್ದಲ್ಲಿ |
| ಶ್ವಃ ಭೂತೇ | ಮೂರನೆಯ ದಿನ/ನಾಲ್ಕನೆಯ ದಿನ |

---

ಇದರಿಂದ ಯಜಮಾನನು ಪ್ರತಿದಿನವೂ ದೇವತೆಗಳ ಅನುಗ್ರಹದಿಂದ ಪ್ರತಿನಿತ್ಯವೂ ಮಳೆಯನ್ನು ಬಯಸಿದವನಾಗುತ್ತಾನೆ.

ಕಾರೀರೇಷ್ಟಿಯ ಒಂದು, ಎರಡು ಮತ್ತು ಮೂರನೆಯ ದಿನಗಳಲ್ಲಿ ಮಳೆಯು ಬಂದರೆ ಅಷ್ಟರಲ್ಲಿಯೇ ಉಂಡೆಗಳ ಹೋಮವನ್ನು ಮಾಡಿ ಮುಗಿಸಬೇಕು. ಮೂರು ದಿನವೂ ಮಳೆಯು ಬೀಳದಿದ್ದ ಪಕ್ಷದಲ್ಲಿ ನಾಲ್ಕನೆಯ ದಿನದಂದು ಅಗ್ನಿಧಾಮಚ್ಛದಾದಿ

ಹವಿರ್ನಿರ್ವಪೇದಹೋರಾತ್ರೇ ವೈ ಮಿತ್ರಾವರುಣಾ

ವಹೋರಾತ್ರಾಭ್ಯಾಂ ಖಲು ವೈ ಪರ್ಜನ್ಯೋ

ವರ್ಷತಿ ನಕ್ತಂ ವಾ ಹಿ ದಿವಾ ವಾ ವರ್ಷತಿ

---

ಹವಿಃ। ನಿರಿತಿ। ವಪೇತ್। **ಅಹೋರಾತ್ರೇ ಇತ್ಯಹಃ - ರಾತ್ರೇ**। ವೈ। ಮಿತ್ರಾವರುಣಾವಿತಿ ಮಿತ್ರಾ-ವರುಣೌ। ಅಹೋರಾತ್ರಾಭ್ಯಾಮಿತ್ಯಹಃ - ರಾತ್ರಾಭ್ಯಾಮ್। ಖಲು। ವೈ। ಪರ್ಜನ್ಯಃ। ವರ್ಷತಿ। ನಕ್ತಮ್। ವಾ। ಹಿ। ದಿವಾ। ವಾ। ವರ್ಷತಿ।

---

| | |
|---|---|
| ಹವಿಃ ನಿರ್ವಪೇತ್ | ಆಗ್ನ್ಯಾದಿದೇವತೆಗಳಿಗಾಗಿ ಪುರೋಡಾಶ ಯಾಗಗಳನ್ನು ಮಾಡಬೇಕು. |

**ಪಿಂಡೀಹೋಮಗಳ ಪ್ರಶಂಸೆ**

| | |
|---|---|
| ಅಹೋರಾತ್ರೇ ವೈ ಮಿತ್ರಾವರುಣೌ | ಮಿತ್ರಾವರುಣರು ಅಹೋರಾತ್ರಸ್ವರೂಪರಷ್ಟೆ |
| ಅಹೋರಾತ್ರಾಭ್ಯಾಮ್ ಖಲು ವೈ ಪರ್ಜನ್ಯಃ ವರ್ಷತಿ | ಹಗಲು-ರಾತ್ರಿಗಳಲ್ಲಿಯೇ ಮಳೆಯೂ ಸುರಿಯುತ್ತದೆ. |
| ನಕ್ತಮ್ ವಾ ಹಿ ದಿವಾ ವಾ ವರ್ಷತಿ | ರಾತ್ರಿಯಲ್ಲಾದರೂ ಮಳೆ ಬೀಳಬಹುದು. ಹಗಲಿನಲ್ಲಿಯಾದರೂ ಮಳೆ ಸುರಿಯ ಬಹುದು. |

---

ದೇವತೆಗಳಿಗಾಗಿ ಮೂರು ಹವಿರ್ಯಾಗಗಳನ್ನು ಅನುಷ್ಠಿಸಬೇಕು.

ಹಗಲು ಮಿತ್ರ (ಸೂರ್ಯ)ನಿಗೆ ಸಂಬಂಧಿಸಿದುದು. ರಾತ್ರಿಯು ಆಚ್ಛಾದಕನಾದ ವರುಣನಿಗೆ ಸಂಬಂಧಿಸಿದುದು. ಹೀಗಾಗಿ ಮಿತ್ರಾವರುಣರು ಹಗಲು-ರಾತ್ರಿಗಳ ದೇವತೆಗಳು. ಮಳೆಯು ರಾತ್ರಿಯಲ್ಲಿಯೂ ಬೀಳುತ್ತದೆ. ಹಗಲಿನಲ್ಲಿಯೂ ಸುರಿಯುತ್ತದೆ.

ಮಿತ್ರಾವರುಣಾವೇವ ಸ್ವೇನ ಭಾಗಧೇಯೇನೋಪಧಾವತಿ ತಾವೇವಾಸ್ಮಾ [ತಾವೇವಾಸ್ಮೈ (೧) ಅಹೋ...] ಅಹೋ ರಾತ್ರಾಭ್ಯಾಂ ಪರ್ಜನ್ಯಂ ವರ್ಷಯತೋಽಗ್ನಯೇ ಧಾಮಚ್ಛದೇ

---

ಮಿತ್ರಾವರುಣಾವಿತಿ ಮಿತ್ರಾ - ವರುಣೌ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ತೌ । ಏವ । ಅಸ್ಮೈ । ಅಹೋರಾತ್ರಾಭ್ಯಾಮಿತ್ಯಹಃ-ರಾತ್ರಾಭ್ಯಾಮ್ । ಪರ್ಜನ್ಯಮ್ । ವರ್ಷಯತಃ । **ಅಗ್ನಯೇ । ಧಾಮಚ್ಛದ ಇತಿ ಧಾಮ-ಛದೇ ।**

---

| | |
|---|---|
| ಮಿತ್ರಾವರುಣೌ ಏವ ಸ್ವೇನ ಭಾಗಧೇಯೇನ ಉಪಧಾವತಿ | ಈ ಪಿಂಡೀಹೋಮಗಳ ಅನುಷ್ಠಾನದಿಂದ ಯಜಮಾನನು ಮಿತ್ರಾವರುಣರ ಭಾಗಗಳನ್ನು ಸಮರ್ಪಿಸಿ ಸೇವಿಸಿದವನಾಗುತ್ತಾನೆ. |
| ತೌ ಏವ ಅಸ್ಮೈ ಅಹೋರಾತ್ರಾಭ್ಯಾಮ್ ಪರ್ಜನ್ಯಮ್ ವರ್ಷಯತಃ | ಆ ಮಿತ್ರಾವರುಣರೇ ಈ ಯಜಮಾನನಿಗಾಗಿ ಹಗಲು-ರಾತ್ರಿಗಳಲ್ಲಿ ಮಳೆಯನ್ನು ಸುರಿಸುತ್ತಾರೆ. |

**ಮೂರು ಯಾಗಗಳ ವಿಧಾನ-ಫಲದ ವಿವರಣೆ**

| | |
|---|---|
| ಅಗ್ನಯೇ ಧಾಮಚ್ಛದೇ | *ಧಾಮಚ್ಛದನಾದ ಅಗ್ನಿದೇವನಿಗಾಗಿ |

---

ಈ ಸಕ್ತು ಪಿಂಡತ್ರಯದ ಹೋಮದಿಂದ ಯಜಮಾನನು ಮಿತ್ರಾವರುಣರಿಗೆ ಸಲ್ಲಬೇಕಾದ ಹವಿರ್ಭಾಗವನ್ನು ಸಮರ್ಪಿಸಿ, ತೃಪ್ತಿಪಡಿಸುತ್ತಾನೆ. ಅವರು ಪ್ರಸನ್ನರಾಗಿ ಹಗಲು-ರಾತ್ರಿಗಳಲ್ಲಿ ಒಂದೇ ಸಮನಾಗಿ ಮಳೆಯನ್ನು ಸುರಿಸುತ್ತಾರೆ.

---

* ಮೋಡಗಳ ಉತ್ಪತ್ತಿಗೆ ಕಾರಣನಾಗಿ ಮೋಡಗಳಿಂದ ಮನೆ ಮೊದಲಾದವುಗಳಲ್ಲಿ ಕತ್ತಲಾಗುವಂತೆ ಮಾಡುವವನು.

ಪುರೋಡಾಶಮಷ್ಟಾಕಪಾಲಂ ನಿರ್ವಪೇನ್ಮಾರುತಗ್ಂ

ಸಪ್ತಕಪಾಲಗ್ಂ ಸೌರ್ಯಮೇಕಕಪಾಲಮಗ್ನಿರ್ವಾ

ಇತೋ ವೃಷ್ಟಿಮುದೀರಯತಿ ಮರುತಃ ಸೃಷ್ಟಾಂ ನಯಂತಿ

---

ಪುರೋಡಾಶಮ್ । ಅಷ್ಟಾಕಪಾಲಮಿತ್ಯಷ್ಟಾ-ಕಪಾಲಮ್ । ನಿರಿತಿ । ವಪೇತ್ । ಮಾರುತಮ್ ।
ಸಪ್ತಕಪಾಲಮಿತಿ ಸಪ್ತ-ಕಪಾಲಮ್ । ಸೌರ್ಯಮ್ । ಏಕಕಪಾಲಮಿತ್ಯೇಕ-ಕಪಾಲಮ್ ।
ಅಗ್ನಿಃ । ವೈ । ಇತಃ । ವೃಷ್ಟಿಮ್ । ಉದಿತಿ । ಈರಯತಿ । ಮರುತಃ । ಸೃಷ್ಟಾಮ್ । ನಯಂತಿ ।

---

| | |
|---|---|
| ಪುರೋಡಾಶಮ್ ಅಷ್ಟಾಕಪಾಲಮ್ ನಿರ್ವಪೇತ್ | ಅಷ್ಟಾಕಪಾಲಪುರೋಡಾಶದ್ರವ್ಯದ ಯಾಗವನ್ನು ಅನುಷ್ಠಿಸಬೇಕು. |
| ಮಾರುತಮ್ ಸಪ್ತಕಪಾಲಮ್ ನಿರ್ವಪೇತ್ | ಮರುದ್ದೇವತೆಗಳಿಗಾಗಿ ಸಪ್ತಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. |
| ಸೌರ್ಯಮ್ ಏಕಕಪಾಲಮ್ ನಿರ್ವಪೇತ್ | ಸೂರ್ಯದೇವನಿಗಾಗಿ ಏಕಕಪಾಲ ಪುರೋಡಾಶಯಾಗವನ್ನು ಅನುಷ್ಠಿಸಬೇಕು. |
| ಅಗ್ನಿಃ ವೈ ಇತಃ ವೃಷ್ಟಿಮ್ ಉದೀರಯತಿ | ಅಗ್ನಿಯು ಈ ಭೂಲೋಕದಿಂದ ಮೋಡಗಳನ್ನು ಮೇಲೆ ಹೋಗುವಂತೆ ಮಾಡುತ್ತಾನೆ. |
| ಸೃಷ್ಟಾಮ್ ಮರುತಃ ನಯಂತಿ | ಮರುತ್ತುಗಳು ಈ ಮೋಡಗಳನ್ನು ಎಲ್ಲೆಡೆಗೆ ಒಯ್ಯುತ್ತವೆ. |

---

ಕಾರೀರೇಷ್ಟಿಯ ಮೂರು ದಿನಗಳಲ್ಲಿಯೂ ಮಳೆಯು ಬೀಳದಿದ್ದರೆ ನಾಲ್ಕನೆಯ ದಿನ ಧಾಮಚ್ಛದಗ್ನಿ ದೇವನಿಗಾಗಿ ಅಷ್ಟಾಕಪಾಲಪುರೋಡಾಶಯಾಗವನ್ನೂ, ಮರುದ್ದೇವತೆಗಳಿಗಾಗಿ ಸಪ್ತಕಪಾಲಪುರೋಡಾಶಯಾಗವನ್ನೂ, ಸೋಮದೇವನಿಗಾಗಿ ಏಕಕಪಾಲ ಪುರೋಡಾಶ ಯಾಗವನ್ನೂ ಅನುಷ್ಠಿಸಬೇಕು.

**'ಅಗ್ನೌ ಪ್ರಾಸ್ತಾಹುತಿಃ ಸಮ್ಯಕ್ ಆದಿತ್ಯಮುಪತಿಷ್ಠತೇ'** ಎಂಬಂತೆ ಅಗ್ನಿದೇವನು

ಯದಾ ಖಲು ವಾ ಅಸಾವಾದಿತ್ಯೋ ನ್ಯಙ್ರಶ್ಮಿಭಿಃ -
ಪರ್ಯಾವರ್ತತೇಽಥ ವರ್ಷತಿ ಧಾಮಚ್ಛದಿವ ಖಲು
ವೈ ಭೂತ್ವಾ ವರ್ಷತ್ಯೇತಾ ವೈ ದೇವತಾ ವೃಷ್ಟ್ಯಾ ಈಶತೇ

---

ಯದಾ । ಖಲು । ವೈ । ಅಸೌ । ಆದಿತ್ಯಃ । ನ್ಯಙ್ । ರಶ್ಮಿಭಿರಿತಿ ರಶ್ಮಿ-ಭಿಃ । ಪರ್ಯಾವರ್ತತ
ಇತಿ ಪರಿ-ಆವರ್ತತೇ । ಅಥ । ವರ್ಷತಿ । ಧಾಮಚ್ಛದಿತಿ ಧಾಮ-ಛತ್ । ಇವ । ಖಲು ।
ವೈ । ಭೂತ್ವಾ । ವರ್ಷತಿ । **ಏತಾಃ** । ವೈಃ । ದೇವತಾಃ । ವೃಷ್ಟ್ಯಾಃ । ಈಶತೇ ।

---

| | |
|---|---|
| ಯದಾ ಖಲು ವೈ ಅಸೌ ಆದಿತ್ಯಃ ನ್ಯಙ್ ರಶ್ಮಿಭಿಃ ಪರ್ಯಾವರ್ತತೇ ಅಥ ವರ್ಷತಿ | ಯಾವಾಗ ಈ ಸೂರ್ಯದೇವನು ತನ್ನ ಕಿರಣಗಳಿಂದ ಕೆಳಮುಖವಾಗಿ ಪ್ರಕಾಶಿಸುತ್ತಾನೆಯೋ ಅನಂತರ ಮೋಡವು ಮಳೆಗರೆಯುತ್ತದೆ. |
| ಧಾಮಚ್ಛತ್ ಇವ ಖಲು ವೈ ಭೂತ್ವಾ ವರ್ಷತಿ | ಮೋಡಗಳಿಂದ ಮನೆ ಮೊದಲಾದವುಗಳೆಲ್ಲವನ್ನೂ ಮುಚ್ಚಿಹೋಗುವಂತೆ ಮಾಡಿ ಮಳೆ ಸುರಿಯುತ್ತದೆ. |

**ದೇವತೆಗಳ ಅನುಗ್ರಹದಿಂದ ಮಳೆಯು ಬರುವ ರೀತಿ**

| | |
|---|---|
| ಏತಾಃ ವೈಃ ದೇವತಾಃ ವೃಷ್ಟ್ಯಾಃ ಈಶತೇ | ಈ ಅಗ್ನಿ, ಮರುತರು, ಆದಿತ್ಯದೇವತೆಗಳು ಮಳೆಗೆ ಪ್ರಭುಗಳಾಗಿರುತ್ತಾರೆ. |

---

ಆಹುತಿಗಳ ಮೂಲಕ ಮೋಡಗಳನ್ನುಂಟುಮಾಡುತ್ತಾನೆ. ಮೋಡಗಳನ್ನು ವಾಯುದೇವನು ಒಯ್ಯುತ್ತಾನೆ. ಅದರ ಫಲವಾಗಿ ಸೂರ್ಯನು ತನ್ನ ಕಿರಣಗಳಿಂದ ನೀರನ್ನು ಹೀರಿಕೊಂಡು ಮೋಡಗಳುಂಟಾಗುವಂತೆ ಮಾಡುತ್ತಾನೆ. ಹೀಗೆ ಸೂರ್ಯನು ತನ್ನ ಕಿರಣಗಳಿಂದ ಮೋಡಗಳನ್ನು ಭೂಮಿಗೆ ಅಭಿಮುಖವಾಗುವಂತೆ ಮಾಡಿದಾಗ ಮಳೆಯಾಗುತ್ತದೆ. ಮಳೆಯು ಜೋರಾಗಿ ಸುರಿಯುವಾಗ ಕತ್ತಲೆಯು ಕವಿದು ಮನೆ ಮೊದಲಾದವುಗಳೆಲ್ಲವೂ

ತಾ ಏವ ಸ್ವೇನ ಭಾಗಧೇಯೇನೋಪಧಾವತಿ

ತಾ [ತಾಃ (೨)] ಏವಾಸ್ಮೈ ಪರ್ಜನ್ಯಂ ವರ್ಷಯನ್ತ್ಯು

ತಾವರ್ಷಿಷ್ಯನ್ವರ್ಷತ್ಯೇವ

---

ತಾಃ । ಏವ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಉಪೇತಿ । ಧಾವತಿ । ತಾಃ । ಏವ । ಅಸ್ಮೈ । ಪರ್ಜನ್ಯಮ್ । ವರ್ಷಯಂತಿ । ಉತ । ಅವರ್ಷಿಷ್ಯನ್ । ವರ್ಷತಿ । ಏವ ।

---

| | |
|---|---|
| ತಾಃ ಏವ ಸ್ವೇನ ಭಾಗಧೇಯೇನ ಉಪಧಾವತಿ | ಅವರಿಗೆ ಸಲ್ಲುವ ಹವಿಃಪ್ರದಾನದಿಂದ ಯಜಮಾನನು ಆ ದೇವತೆಗಳನ್ನೇ ಸೇವಿಸುತ್ತಾನೆ. |
| ತಾಃ ಏವ ಅಸ್ಮೈ ಪರ್ಜನ್ಯಮ್ ವರ್ಷಯಂತಿ | ಆ ದೇವತೆಗಳೇ ಈ ಯಜಮಾನನಿಗಾಗಿ ಮಳೆಯನ್ನು ಸುರಿಸುತ್ತಾರೆ. |
| ಉತ ಅವರ್ಷಿಷ್ಯನ್ ವರ್ಷತಿ ಏವ | ಪರ್ಜನ್ಯನು ಮೊದಲು ತಾನಾಗಿಯೇ ಮಳೆಯನ್ನು ಸುರಿಸದಿದ್ದರೂ ದೇವತೆಗಳ ಅನುಗ್ರಹದಿಂದ ಮಳೆಯನ್ನು ಸುರಿಸಿಯೇ ಸುರಿಸುತ್ತಾನೆ. |

---

ಕತ್ತಲೆಯಲ್ಲಿ ಮುಳುಗಿದಂತಾಗುತ್ತದೆ. ಹೀಗೆ ಅಗ್ನಿ, ಮರುತರು ಹಾಗೂ ಸೂರ್ಯ ಇವರು ಮಳೆಗೆ ಕಾರಣರಾಗಿದ್ದಾರೆ.

ಮೇಲೆ ಹೇಳಿರುವ ರೀತಿಯಲ್ಲಿ ಅಗ್ನಿ, ಮರುತರು ಸೂರ್ಯ - ಈ ದೇವತೆಗಳು ಮಳೆಯನ್ನು ಕೊಡುವ ಪ್ರಭುಗಳಾಗಿದ್ದಾರೆ. ಈ ಮೂರು ಹವಿಸ್ಸುಗಳನ್ನು ಕೊಡುವುದರಿಂದ ಯಜಮಾನನು ಆ ದೇವತೆಗಳನ್ನು ಸಂತೋಷಪಡಿಸುತ್ತಾನೆ.

ಸೃಜಾ ವೃಷ್ಟಿಂ ದಿವ ಆಽದ್ಭಿಃ

ಸಮುದ್ರಂ ಪೃಣೇತ್ಯಾಹೇಮಾಶ್ಚೈವಾಮೂಶ್ಚಾಪಃ

ಸಮರ್ಧಯತ್ಯಥೋ ಆಭಿರೇವಾಮೂರಚ್ಛೈತ್ಯಬ್ಜಾ ಅಸಿ

---

**ಸೃಜ** । ವೃಷ್ಟಿಮ್ । ದಿವಃ । ಏತಿ । ಅದ್ಭಿರಿತ್ಯತ್-ಭಿಃ । ಸಮುದ್ರಮ್ । ಪೃಣ । ಇತಿ । ಆಹ । ಇಮಾಃ । ಚ । ಏವ । ಅಮೂಃ । ಚ । ಅಪಃ । ಸಮಿತಿ । ಅರ್ಧಯತಿ । ಅಥೋ ಇತಿ । ಆಭಿಃ । ಏವ । ಅಮೂಃ । ಅಚ್ಛ । ಏತಿ । **ಅಬ್ಜಾ ಇತ್ಯಪ್-ಜಾಃ । ಅಸಿ ।**

---

**ಉತ್ಕರಪ್ರದೇಶದಲ್ಲಿರುವ ಹಸಿಮಡಿಕೆಯಲ್ಲಿ ನೀರನ್ನು ತುಂಬುವ ವಿಧಿ;**

| | |
|---|---|
| ಸೃಜ ವೃಷ್ಟಿಮ್ ದಿವಃ ಅದ್ಭಿಃ ಸಮುದ್ರಮ್ ಆ ಪೃಣ ಇತಿ ಆಹ | **'ಸೃಜ ವೃಷ್ಟಿವ್ ...... ಪೃಣ'** ಎಂದು ಶ್ರುತಿಯು ಹೇಳುತ್ತದೆ. |
| ಇಮಾಃ ಚ ಏವ ಅಮೂಃ ಚ ಅಪಃ | [ವಾಯುವು] ಈ ಲೋಕದ ನೀರನ್ನೂ, ಸ್ವರ್ಗಲೋಕದ / ಅಂತರಿಕ್ಷದ ನೀರನ್ನೂ |
| ಸಮರ್ಧಯತಿ | ಗಡಿಗೆಯಲ್ಲಿ ತುಂಬಿ ವೃದ್ಧಿಗೊಳಿಸಿ ದಂತಾಗುತ್ತದೆ. |
| ಅಥೋ ಆಭಿಃ ಏವ ಅಮೂಃ ಅಚ್ಛ ಏತಿ | ಮತ್ತು ಈ ಲೋಕದ ನೀರುಗಳಿಂದಲೇ ಮೇಲಿನ ಲೋಕದ ನೀರನ್ನೂ ತರಲು ವಾಯುವು ಹೋದಂತಾಗುತ್ತದೆ. |

**ಕರಿ ಹೆಣ್ಣು ಕುರಿಯನ್ನು ಪ್ರೋಕ್ಷಿಸುವ/ಹೋಮ ಮಾಡುವ ವಿಧಿ.**

| | |
|---|---|
| ಅಬ್ಜಾಃ ಅಸಿ | **'ಅಬ್ಜಾ ಅಸಿ..... ಸಮುದ್ರಿಯಮ್'** |

---

ಸಂತುಷ್ಟರಾದ ಆ ದೇವತೆಗಳು ಯಜಮಾನನಿಗಾಗಿ ಮಳೆಯನ್ನು ಸುರಿಸುತ್ತಾರೆ. ಪರ್ಜನ್ಯನು ಮೊದಲು ತಾನಾಗಿಯೇ ಮಳೆಯನ್ನು ಸುರಿಸದಿರಬಹುದು. ಈ ಯಾಗಾನಂತರ ಅಗ್ನ್ಯಾದಿ

ಪ್ರಥಮಜಾ ಬಲಮಸಿ ಸಮುದ್ರಿಯಮಿತ್ಯಾಹ

ಯಥಾಯಜುರೇವೈತದುನ್ನಂಭಯ ಪೃಥಿವೀಮಿತಿ

ವರ್ಷಾಹ್ವಾಂ ಜುಹೋತ್ಯೇಷಾ ವಾ ಓಷಧೀನಾಂ

---

ಪ್ರಥಮಜಾ ಇತಿ ಪ್ರಥಮ-ಜಾಃ । ಬಲಮ್ । ಅಸಿ । ಸಮುದ್ರಿಯಮ್ । ಇತಿ । ಆಹ । ಯಥಾಯಜುರಿತಿ ಯಥಾ-ಯಜುಃ । ಏವ । ಏತತ್ । **ಉದಿತಿ । ನಂಭಯ ।** ಪೃಥಿವೀಮ್ । ಇತಿ । ವರ್ಷಾಹ್ವಾಮಿತಿ ವರ್ಷ-ಹ್ವಾಮ್ । ಜುಹೋತಿ । ಏಷಾ । ವೈ । ಓಷಧೀನಾಮ್ ।

---

| | |
|---|---|
| ಪ್ರಥಮಜಾಃ ಬಲಮ್ ಅಸಿ<br>ಸಮುದ್ರಿಯಮ್ ಇತಿ ಆಹ | ಎಂದು ಶ್ರುತಿಯು ಹೇಳುತ್ತದೆ. |
| ಏತತ್ ಯಥಾಯಜುಃ ಏವ | ಇದು ಯಜುರ್ಮಂತ್ರದಲ್ಲಿಯೇ ಸ್ಪಷ್ಟವಾಗಿದೆ. |

**ವರ್ಷಾಹೂಸ್ತಂಬ/ಕೊಮ್ಮೆಗಿಡದಲ್ಲಿ ಹೋಮವಿಧಿ; ಪ್ರಶಂಸೆ**

| | |
|---|---|
| ಉನ್ನಂಭಯ ಪೃಥಿವೀಮ್<br>ಇತಿ ವರ್ಷಾಹ್ವಾಮ್<br>ಜುಹೋತಿ | **'ಉನ್ನಂಭಯ...'** ಎಂಬ ಮಂತ್ರದಿಂದ ಕೊಮ್ಮೆಗಿಡದಲ್ಲಿ ಹೋಮವನ್ನು ಅನುಷ್ಠಿಸಬೇಕು. |
| ಏಷಾ ವೈ ಓಷಧೀನಾಮ್ | ಈ ಗಿಡವೇ ಓಷಧಿಗಳಲ್ಲಿ |

---

ದೇವತೆಗಳ ಅನುಗ್ರಹದ ಫಲವಾಗಿ, ಅವರ ಪ್ರೇರಣೆಯಿಂದ ಮಳೆಯನ್ನು ಸುರಿಸಿಯೇ ಸುರಿಸುತ್ತಾನೆ.

'ಸಮುದ್ರದಂತಿರುವ/ಮೋಡದಂತಿರುವ ಈ ಕುಂಭವನ್ನು ಈ ಲೋಕದ ನದೀ ಸಮುದ್ರಾದಿಗಳ ನೀರುಗಳಿಂದ ಮತ್ತು ಸ್ವರ್ಗಲೋಕದ ನೀರುಗಳಿಂದ ತುಂಬಿಸುವುದಕ್ಕಾಗಿ ವಾಯುದೇವನು ಮಳೆಯನ್ನು ಸುರಿಸಲಿ' ಎಂದು ಶ್ರುತಿಯು ಹೇಳುತ್ತದೆ. ಇದರಿಂದ

ವೃಷ್ಟಿವನಿಸ್ತಯೈವ ವೃಷ್ಟಿಮಾಚ್ಯಾವಯತಿ

ಯೇ ದೇವಾ ದಿವಿಭಾಗಾ ಇತಿ

---

ವೃಷ್ಟಿವನಿರಿತಿ ವೃಷ್ಟಿ-ವನಿಃ। ತಯಾ। ಏವ। ವೃಷ್ಟಿಮ್। ಐತಿ। ಚ್ಯಾವಯತಿ। **ಯೇ**। ದೇವಾಃ। ದಿವಿಭಾಗಾ ಇತಿ ದಿವಿ-ಭಾಗಾಃ। ಇತಿ।

---

| | |
|---|---|
| ವೃಷ್ಟಿವನಿಃ | ಮಳೆಯನ್ನು ಹೊಂದುವುದು/ಮಳೆಗಾಲದಲ್ಲಿ ಚೆನ್ನಾಗಿ ಬೆಳೆಯುವುದು. |
| ತಯಾ ಏವ ವೃಷ್ಟಿಮ್ ಆಚ್ಯಾವಯತಿ | ಆ ವರ್ಷಾಹೂಗಿಡದಿಂದಲೇ ಮಳೆಯು ಎಲ್ಲ ಕಡೆ ಬೀಳುವಂತೆ ಆಗುತ್ತದೆ. |

**ವೇದಿಯ ಒಳಗಡೆ ಕೃಷ್ಣಾಜಿನವನ್ನು ಕೊಡಹುವ ವಿಧಿ; ಫಲ**

| | |
|---|---|
| ಯೇ ದೇವಾಃ ದಿವಿಭಾಗಾಃ ಇತಿ | **'ಯೇ ದೇವಾಃ ದಿವಿಭಾಗಾಃ'** ಎಂಬ ಮಂತ್ರ ದಿಂದ |

---

ಮಳೆಗಾಗಿ ವಾಯುವನ್ನು ಪ್ರೇರಿಸಿದಂತಾಗುತ್ತದೆ.

ಇಷ್ಟಿಗಾಗಿ ಕರಿಯ ಹೆಣ್ಣು ಕುರಿಯನ್ನು ಪ್ರೋಕ್ಷಿಸಬೇಕು. ಶ್ರುತಿಯ ಈ ಮಂತ್ರದ ತಾತ್ಪರ್ಯವು ಹೀಗಿದೆ; ಎಲೈ ! ಕುರಿಯೇ ! ನೀನು ನೀರಿನಿಂದ ಜನಿಸಿದವಳು. ಮೊದಲನೆಯವನಾಗಿ ಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟವಳೂ ಆಗಿರುವೆ. ಅಥವಾ ನೀನು ಕತ್ತಲೆಯಿಂದ ಜನಿಸಿರುವೆ.* ಮೇಘದ ಬಲವೂ ಆಗಿರುವೆ. ಇದು ಯಜುರ್ಮಂತ್ರ ದಲ್ಲಿಯೇ ಸ್ಪಷ್ಟವಾಗಿದೆ.

**'ಉನ್ನಂಭಯ'** ಎಂಬ ಮಂತ್ರದಿಂದ ವರ್ಷಾಹೂಗಿಡದಲ್ಲಿ / ಕೊಮ್ಮೆಗಿಡದಲ್ಲಿ / ಗಣಜಿಲೆಗಿಡದಲ್ಲಿ ಹೋಮವನ್ನು ಅನುಷ್ಠಿಸಬೇಕು. ಈ ಗಿಡವು ಮಳೆಗಾಲದಲ್ಲಿ ಚೆನ್ನಾಗಿ ಬೆಳೆಯುತ್ತದೆ. ಮಳೆಗಾಲದಲ್ಲಿ ವಿಶೇಷವಾಗಿ ಇರುವುದರಿಂದ ಓಷಧಿಗಳಲ್ಲಿ ಅಧಿಕ ಮಳೆಯನ್ನು ಹೊಂದುವುದಾಗಿದೆ. ಈ ಗಿಡದಲ್ಲಿ ಹವನವನ್ನು ಮಾಡುವುದರಿಂದ ಮಳೆಯು ಎಲ್ಲ ಕಡೆಯಲ್ಲಿಯೂ ಬೀಳುವಂತಾಗುತ್ತದೆ.

---

★ 'ತಸ್ಯ ಯತ್ಪ್ರಥಮಂ ತಮೋಽಪಾಘ್ನನ್, ಸಾ ಕೃಷ್ಣಾವಿರಭವತ್'। ತೈ.ಸಂ. 2.1.2.

ಕೃಷ್ಣಾಜಿನಮವ ಧೂನೋತೀಮ ಏವಾಸ್ಮೈ ಲೋಕಾಃ

ಪ್ರೀತಾ ಅಭೀಷ್ಟಾ ಭವಂತಿ ॥೨೯-10॥

**[ಅಸ್ಮೈ ಧಾವತಿ ತಾ ವಾ ಏಕವಿಗ್ಂಶತಿಶ್ಚ ॥]**

---

ಕೃಷ್ಣಾಜಿನಮಿತಿ ಕೃಷ್ಣ-ಅಜಿನಮ್ । ಅವೇತಿ । ಧೂನೋತಿ । ಇಮೇ । ಏವ । ಅಸ್ಮೈ ।

ಲೋಕಾಃ । ಪ್ರೀತಾಃ । ಅಭೀಷ್ಟಾ ಇತ್ಯಭಿ-ಇಷ್ಟಾಃ । ಭವಂತಿ ॥೧೦॥

---

| | |
|---|---|
| ಕೃಷ್ಣಾಜಿನಮ್ ಅವಧೂನೋತಿ | ಕೃಷ್ಣಾಜಿನವನ್ನು ಕೊಡಹಬೇಕು. |
| ಅಸ್ಮೈ ಇಮೇ ಏವ ಲೋಕಾಃ ಪ್ರೀತಾಃ ಅಭೀಷ್ಟಾಃ ಭವಂತಿ | ಈ ಮಂತ್ರದಲ್ಲಿ ಹೇಳಿರುವ ಮೂರು ಲೋಕಗಳೂ/ಮೂರು ಲೋಕದ ದೇವತೆಗಳೂ ಯಜಮಾನನ ವಿಷಯದಲ್ಲಿ ಸುಪ್ರೀತರಾಗಿ ಅಭೀಷ್ಟವನ್ನು ನೀಡುತ್ತಾರೆ. |

---

ಇಷ್ಟಿಯ ಅನುಷ್ಠಾನದಲ್ಲಿ ಕೃಷ್ಣಾಜಿನವನ್ನು ವೇದಿಯ ಒಳಭಾಗದಲ್ಲಿ ಕೊಡವಬೇಕು. ಇದರಿಂದ ಮಂತ್ರದಲ್ಲಿ ಹೇಳಿರುವಂತೆ '**ದಿವಿಭಾಗಾಃ, ಅಂತರಿಕ್ಷಭಾಗಾಃ, ಪೃಥಿವಿಭಾಗಾಃ**' ಎಂಬ ಮೂರು ಲೋಕದ ದೇವತೆಗಳೂ ಸುಪ್ರೀತರಾಗುತ್ತಾರೆ. ಯಜಮಾನನ ಇಷ್ಟಾರ್ಥಗಳನ್ನು ನೆರವೇರಿಸಿಕೊಡುತ್ತಾರೆ.

★ ★ ★

## ॥ ಏಕಾದಶೋಽನುವಾಕಃ ॥

ಸರ್ವಾ॑ಣಿ ಛಂದಾಗ್ಂಸ್ಯೇತಸ್ಯಾ॑ಮಿಷ್ಟ್ಯಾ॒ಮನೂ॒ಚ್ಯಾ॒
ನೀತ್ಯಾ॑ಹುಸ್ತ್ರಿ॒ಷ್ಟುಭೋ॒ ವಾ ಏ॒ತದ್ವೀ॒ರ್ಯಂ॑
ಯತ್ಕ॒ಕುದು॒ಷ್ಣಿಹಾ॒ ಜಗ॒ತ್ಯೈ॑

ಸರ್ವಾ॑ಣಿ । ಛಂದಾಗ್ಂಸಿ । ಏ॒ತಸ್ಯಾಮ್ । ಇ॒ಷ್ಟ್ಯಾಮ್ । ಅ॒ನೂ॒ಚ್ಯಾನೀತ್ಯನು – ಉಚ್ಯಾನಿ ।
ಇತಿ । ಆ॒ಹುಃ । ತ್ರಿ॒ಷ್ಟುಭಃ । ವೈ । ಏ॒ತತ್ । ವೀ॒ರ್ಯಮ್ । ಯತ್ । ಕ॒ಕುತ್ । ಉ॒ಷ್ಣಿಹಾ । ಜಗತ್ಯೈ ।

ಏಳನೆಯ ಅನುವಾಕದಿಂದ ಹತ್ತನೆಯ ಅನುವಾಕ ಪೂರ್ಣ ಕಾರೀರಿಷ್ಟಿಯನ್ನು ಹೇಳಲಾಯಿತು. ಈ ಹನ್ನೊಂದನೆಯ ಅನುವಾಕದಲ್ಲಿ ತ್ರೈಧಾತವೀಯೇಷ್ಟಿಯನ್ನು ಹೇಳಲಾಗಿದೆ.

### ಸಾಮಿಧೇನಿಗೆ ಸಂಬಂಧಿಸಿದಂತೆ ವಿಶೇಷವಿಧಾ-ವಿವರಣೆ

| | |
|---|---|
| ಏತಸ್ಯಾಮ್ ಇಷ್ಟ್ಯಾಮ್ ಸರ್ವಾಣಿ ಛಂದಾಗ್ಂಸಿ ಅನೂಚ್ಯಾನಿ ಇತಿ ಆಹುಃ | ಯಜ್ಞವನ್ನು ತಿಳಿದವರು 'ಈ ತ್ರೈಧಾತ ವೀಯೇಷ್ಟಿಯ ಸಾಮಿಧೇನಿಯಲ್ಲಿ ಎಲ್ಲ ಛಂದಸ್ಸುಗಳೂ ಹೇಳಲ್ಪಡಬೇಕು' ಎಂದು ಹೇಳುತ್ತಾರೆ. |
| ಯತ್ ಕಕುತ್ ಏತತ್ ತ್ರಿಷ್ಟುಭಃ ವೀರ್ಯಮ್ ವೈ | ಕಕುಪ್ ಛಂದಸ್ಸು ಯಾವುದಿದೆಯೋ ಅದು ತ್ರಿಷ್ಟುಪ್ ಛಂದಸ್ಸಿನ ಸಾರವಷ್ಟೆ. |
| ಉಷ್ಣಿಹಾ ಜಗತ್ಯೈ | ಉಷ್ಣಿಕ್ ಛಂದಸ್ಸು ಜಗತೀ ಛಂದಸ್ಸಿನ ಸಾರವಷ್ಟೆ. |

ತ್ರೈಧಾತವೀಯೇಷ್ಟಿಯಲ್ಲಿ ಸಾಮಿಧೇನಿಗಳನ್ನು ಹೇಳುವಾಗ ಎಲ್ಲ ಛಂದಸ್ಸುಗಳನ್ನೂ ಹೇಳಬೇಕೆಂದು ಬಲ್ಲವರು ಹೇಳುತ್ತಾರೆ. ತ್ರಿಷ್ಟುಪ್ ಛಂದಸ್ಸಿನ ಸಾರವೇ ಕಕುಪ್; ಜಗತೀ ಛಂದಸ್ಸಿನ ಸಾರವೇ ಉಷ್ಣಿಕ್.

ಯದುಷ್ಣಿಹಕಕುಭಾವನ್ವಾಹ ತೇನೈವ ಸರ್ವಾಣಿ ಛಂದಾಗ್ಂ

ಸ್ಯವರುಂಧೇ ಗಾಯತ್ರೀ ವಾ ಏಷಾ ಯದುಷ್ಣಿಹಾ ಯಾನಿ

ಚತ್ವಾರ್ಯಧ್ಯಕ್ಷರಾಣಿ ಚತುಷ್ಪಾದ ಏವ ತೇ ಪಶವೋ

---

ಯತ್ । ಉಷ್ಣಿಹಕಕುಭಾವಿತ್ಯುಷ್ಣಿಹ-ಕಕುಭೌ । ಅನ್ವಾಹೇತ್ಯನು–ಆಹ । ತೇನ । ಏವ । ಸರ್ವಾಣಿ । ಛಂದಾಗ್ಂಸಿ । ಅವೇತಿ । ರುಂಧೇ । ಗಾಯತ್ರೀ । ವೈ । ಏಷಾ । ಯತ್ । ಉಷ್ಣಿಹಾ । ಯಾನಿ । ಚತ್ವಾರಿ । ಅಧೀತಿ । ಅಕ್ಷರಾಣಿ । ಚತುಷ್ಪಾದ ಇತಿ ಚತುಃ-ಪಾದಃ। ಏವ । ತೇ । ಪಶವಃ ।

---

| | |
|---|---|
| ಯತ್ ಉಷ್ಣಿಹಕಕುಭೌ ಅನ್ವಾಹ | *ಉಷ್ಣಿಕ್ ಮತ್ತು ಕಕುಪ್ *ಛಂದಸ್ಸುಗಳನ್ನು ಹೇಳುವುದು ಯಾವುದುಂಟೋ |
| ತೇನ ಏವ ಸರ್ವಾಣಿ ಛಂದಾಗ್ಂಸಿ ಅವರುಂಧೇ | ಅದರಿಂದಲೇ ಯಜಮಾನನು ಎಲ್ಲ ಛಂದಸ್ಸುಗಳನ್ನೂ ಹೊಂದಿದಂತಾಗುತ್ತದೆ. |

**ಗಾಯತ್ರೀಛಂದಸ್ಸಿನ ಪ್ರಾಪ್ತಿ; ವಿವರಣೆ**

| | |
|---|---|
| ಯತ್ ಉಷ್ಣಿಹಾ ಏಷಾ ಗಾಯತ್ರೀ ವೈ | ಉಷ್ಣಿಹಾ ಛಂದಸ್ಸು ಯಾವುದುಂಟೋ ಇದು ಗಾಯತ್ರೀಛಂದಸ್ಸಷ್ಟೆ. |
| ಯಾನಿ ಚತ್ವಾರಿ ಅಧಿ ಅಕ್ಷರಾಣಿ | ಗಾಯತ್ರೀ ಛಂದಸ್ಸಿಗಿಂತ ಉಷ್ಣಿಹಾಛಂದಸ್ಸಿನಲ್ಲಿ ಯಾವ ನಾಲ್ಕು ಅಕ್ಷರಗಳು ಹೆಚ್ಚಾಗಿ ಉಂಟೋ |

---

* ಈ ಇಷ್ಟಿಯ ಸಾಮಿಧೇನಿಗಳಾಗಿರುವ 'ಪ್ರ ಸೋ ಅಗ್ನೇ' ಎಂಬ ಋಕ್ಕಿನಲ್ಲಿ ಮಧ್ಯಮಪಾದದಲ್ಲಿ ಹನ್ನೆರಡು ಅಕ್ಷರಗಳಿರುವುದರಿಂದ ಅದು ಕಕುಪ್.

'ಪ್ರ ಹೋತ್ರೇ' ಎಂಬ ಋಕ್ಕಿನಲ್ಲಿ ಕೊನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳು ಇರುವುದರಿಂದ ಅದು ಉಷ್ಣಿಕ್ ಛಂದಸ್ಸಾಗಿದೆ.

ಯಥಾ ಪುರೋಡಾಶೇ ಪುರೋಡಾಶೋಽಧ್ಯೇವಮೇವ ತದ್ಯದೃಚ್ಯಧ್ಯಕ್ಷರಾಣಿ ಯಜ್ಜಗತ್ಯಾ [(೧)ಪರಿದಧ್ಯಾದಂತಂ] ಪರಿದಧ್ಯಾದಂತಂ ಯಜ್ಞಂ

---

ಯಥಾ । ಪುರೋಡಾಶೇ । ಪುರೋಡಾಶಃ । ಅಧೀತಿ । ಏವಮ್ । ಏವ । ತತ್ । ಯತ್ । ಋಚಿ । ಅಧೀತಿ । ಅಕ್ಷರಾಣಿ । **ಯತ್** । ಜಗತ್ಯಾ । ಪರಿದಧ್ಯಾದಿತಿ ಪರಿ – ದಧ್ಯಾತ್ । ಅಂತಮ್ । ಯಜ್ಞಮ್ ।

---

| | |
|---|---|
| ಯಥಾ ಪುರೋಡಾಶೇ ಪುರೋಡಾಶಃ ಅಧಿ ಏವಮ್ ಏವ ತತ್ ಋಚಿ ಅಧಿ ಅಕ್ಷರಾಣಿ | ಮುಂದು ಮುಂದಿನ ಪುರೋಡಾಶವು ದೊಡ್ಡದಾಗಿರಬೇಕು ಎಂದು ಹೇಗೆ ಹೇಳಿದೆಯೋ ಹಾಗೆಯೇ ಇಲ್ಲಿ ಉಷ್ಣಿಹಾಛಂದಸ್ಸಿನಲ್ಲಿ ಹೆಚ್ಚಾಗಿ ನಾಲ್ಕು ಅಕ್ಷರಗಳಿವೆಯೆಂದು ತಿಳಿಯಬೇಕು. |

**ಸಾಮಿಧೇನಿಯಲ್ಲಿ ಕೊನೆಯದಾಗಿ ತ್ರಿಷ್ಟುಪ್ ಛಂದಸ್ಸನ್ನು ಪ್ರಯೋಗಿಸಬೇಕೆಂಬ ವಿಧಿ; ಅದರ ಪ್ರಶಂಸೆ**

| | |
|---|---|
| ಯತ್ ಜಗತ್ಯಾ ಪರಿದಧ್ಯಾತ್ | ಜಗತೀ ಛಂದಸ್ಸಿನಿಂದ ಸಾಮಿಧೇನಿಗಳನ್ನು ಮುಗಿಸಿದರೆ |
| ಅಂತಮ್ ಯಜ್ಞಮ್ ಗಮಯೇತ್ | ಯಜ್ಞವನ್ನು ಮುಗಿಸಿದಂತೆ /ನಾಶಪಡಿಸಿದಂತೆ ಆಗುತ್ತದೆ. |

---

ಈ ಛಂದಸ್ಸುಗಳ **'ಪ್ರ ಸೋ ಅಗ್ನೇ, ಪ್ರಹೋತ್ರೇ'** ಎಂಬ ಋಕ್ಕುಗಳನ್ನು ಹೇಳುವುದರಿಂದ ಯಜಮಾನನು ಎಲ್ಲ ಛಂದಸ್ಸುಗಳನ್ನೂ ಹೊಂದಿದಂತಾಗುತ್ತದೆ. **'ಪ್ರ ಸೋ ಅಗ್ನೇ'** ಎಂಬ ಋಕ್ಕು ಮಧ್ಯಮಪಾದದಲ್ಲಿ ಹನ್ನೆರಡು ಅಕ್ಷರಗಳನ್ನು ಹೊಂದಿರುವುದರಿಂದ ಕಕುಪ್. **'ಪ್ರ ಹೋತ್ರೇ'** ಎಂಬ ಋಕ್ಕು ಕೊನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳನ್ನು ಹೊಂದಿರುವುದರಿಂದ ಉಷ್ಣಿಕ್ ಛಂದಸ್ಸಾಗಿದೆ.

ಗಮಯೇತ್ತ್ರಿಷ್ಟುಭಾ ಪರಿದಧಾತೀಂದ್ರಿಯಂ ವೈ ವೀರ್ಯಂ
ತ್ರಿಷ್ಟುಗಿಂದ್ರಿಯ ಏವ ವೀರ್ಯೇ ಯಜ್ಞಂ ಪ್ರತಿಷ್ಠಾಪಯತಿ
ನಾಂತಂ ಗಮಯತ್ಯಗ್ನೇ ತ್ರೀ ತೇ ವಾಜಿನಾ ತ್ರೀ ಷಧಸ್ಥೇತಿ

---

ಗಮಯೇತ್ । ತ್ರಿಷ್ಟುಭಾ । ಪರೀತಿ । ದಧಾತಿ । ಇಂದ್ರಿಯಮ್ । ವೈ । ವೀರ್ಯಮ್ ।
ತ್ರಿಷ್ಟುಕ್ । ಇಂದ್ರಿಯೇ । ಏವ । ವೀರ್ಯೇ । ಯಜ್ಞಮ್ । ಪ್ರತೀತಿ । ಸ್ಥಾಪಯತಿ । ನ ।
ಅಂತಮ್ । ಗಮಯತಿ । ಅಗ್ನೇ । ತ್ರೀ । ತೇ । ವಾಜಿನಾ । ತ್ರೀ । ಸಧಸ್ಥೇತಿ ಸಧ–ಸ್ಥಾ । ಇತಿ ।

---

| | |
|---|---|
| ತ್ರಿಷ್ಟುಭಾ ಪರಿದಧಾತಿ | (ಈ ದೋಷಪರಿಹಾರಾರ್ಥವಾಗಿ) ತ್ರಿಷ್ಟುಪ್‌ಛಂದಸ್ಸಿನಿಂದ ಮುಗಿಸಬೇಕು. |
| ಇಂದ್ರಿಯಮ್ ವೈ ವೀರ್ಯಮ್ ತ್ರಿಷ್ಟುಕ್ | ತ್ರಿಷ್ಟುಪ್ ಛಂದಸ್ಸು ಇಂದ್ರಿಯಶಕ್ತಿ ಮತ್ತು ವೀರ್ಯಶಕ್ತಿಗಳ ಸ್ವರೂಪವಾಗಿದೆ. |
| ಇಂದ್ರಿಯೇ ಏವ ವೀರ್ಯೇ ಯಜ್ಞಮ್ ಪ್ರತಿಷ್ಠಾಪಯತಿ | ಇಂದ್ರಿಯ–ವೀರ್ಯಗಳಲ್ಲಿಯೇ ಯಜ್ಞವನ್ನು ನೆಲೆಗೊಳಿಸಿದಂತಾಗುತ್ತದೆ. |
| ಅಂತಮ್ ನ ಗಮಯತಿ | ಇದರಿಂದ ಯಜ್ಞವನ್ನು ಮುಗಿಸಿದ /ನಾಶ ಪಡಿಸಿದ ದೋಷವೂ ಬರುವುದಿಲ್ಲ. |

**ಆ ತ್ರಿಷ್ಟುಪ್ ಛಂದಸ್ಸಿನ ಮಂತ್ರವಿಧಿ; ಪ್ರಶಂಸೆ**

| | |
|---|---|
| ಅಗ್ನೇ ತ್ರೀ ತೇ ವಾಜಿನಾ ತ್ರೀ ಷದಸ್ಥಾ ಇತಿ | 'ಅಗ್ನೇ ತ್ರೀ ತೇ ' ಎಂಬ ತ್ರಿಶಬ್ದಗಳಿಂದ ಕೂಡಿದ |

---

ಉಷ್ಣಿಹಾ ಛಂದಸ್ಸು ಗಾಯತ್ರಿಯೇ. ಇದರಲ್ಲಿ ಇಪ್ಪತ್ತೆಂಟು ಅಕ್ಷರಗಳಿವೆ. ಗಾಯತ್ರೀ ಛಂದಸ್ಸಿನಲ್ಲಿ ಇಪ್ಪತ್ತನಾಲ್ಕು ಅಕ್ಷರಗಳಿವೆ. ಈ ಅಧಿಕವಾಗಿರುವ ನಾಲ್ಕು ಅಕ್ಷರಗಳು ಚತುಷ್ಪಾತ್ಪಶುಗಳಂತೆ. ಅದು ಪಶುಸಮೃದ್ಧಿಗೆ ಕಾರಣವಾಗುತ್ತದೆ.

ತ್ರಿವತ್ಯಾ ಪರಿದಧಾತಿ ಸರೂಪತ್ವಾಯ ಸರ್ವೋ ವಾ

ಏಷ ಯಜ್ಞೋ ಯತ್ತ್ರೈಧಾತವೀಯಂ ಕಾಮಾಯ

ಕಾಮಾಯ ಪ್ರಯುಜ್ಯತೇ

---

ತ್ರಿವತ್ಯೇತಿ ತ್ರಿ–ವತ್ಯಾ । ಪರೀತಿ । ದಧಾತಿ । ಸರೂಪತ್ವಾಯೇತಿ ಸರೂಪ–ತ್ವಾಯ । **ಸರ್ವಃ** ।
ವೈ । ಏಷಃ । ಯಜ್ಞಃ । ಯತ್ । ತ್ರೈಧಾತವೀಯವ್ । ಕಾಮಾಯಕಾಮಾಯೇತಿ
ಕಾಮಾಯ – ಕಾಮಾಯ । ಪ್ರೇತಿ । ಯುಜ್ಯತೇ ।

---

| | |
|---|---|
| ತ್ರಿವತ್ಯಾ ಪರಿದಧಾತಿ | ತ್ರಿಷ್ಟುಪ್ ಛಂದಸ್ಸಿನ ಮಂತ್ರದಿಂದ ಸಾಮಿಧೇನಿಗಳನ್ನು ಮುಗಿಸಬೇಕು. |
| ಸರೂಪತ್ವಾಯ | ಇದು ತ್ರಿಶಬ್ದವನ್ನು ಒಳಗೆ ಹೊಂದಿರುವ ತ್ರೈಧಾತವೀಯವೆಂಬ ಹೆಸರಿಗೆ ಸಮಾನರೂಪವಾಗಿ ಬೇಗನೆ ಫಲಸಮೃದ್ಧಿಗೆ ಕಾರಣವಾಗುತ್ತದೆ. |

**ಸರ್ವಕಾಮಗಳಿಗಾಗಿ ತ್ರೈಧಾತವೀಯವಿಧಾನ; ಪ್ರಶಂಸೆ**

| | |
|---|---|
| ಯತ್ ತ್ರೈಧಾತವೀಯಮ್ | ತ್ರೈಧಾತವೀಯವೆಂಬ ಯಾವ ಯಾಗವುಂಟೋ |
| ಏಷಃ ಸರ್ವಃ ಯಜ್ಞಃ ವೈ | ಈ ಯಜ್ಞವು ಸರ್ವಯಾಗಸ್ವರೂಪವಾಗಿದೆಯಷ್ಟೆ |
| ಕಾಮಾಯಕಾಮಾಯ ಪ್ರಯುಜ್ಯತೇ | ಎಲ್ಲ ಕಾಮನೆಗಳಿಗಾಗಿಯೂ ಅನುಷ್ಠಿಸಲ್ಪಡುತ್ತದೆ. |

---

ತ್ರಿಧಾತುಯಾಗದಲ್ಲಿ **'ಉತ್ತರ ಉತ್ತರೋ ಜ್ಯಾಯಾನ್ ಭವತಿ'** ಎಂಬ ವಚನದಂತೆ ಮುಂದುಮುಂದಿನ ಪುರೋಡಾಶವು ಹಿಂದಿನ ಪುರೋಡಾಶಕ್ಕಿಂತ ದೊಡ್ಡದಾಗಿರಬೇಕು. ಆ ಯಾಗದಲ್ಲಿ ಪೂರ್ವ ಪುರೋಡಾಶದ ಮೇಲೆ ಉತ್ತರೋತ್ತರ ಪುರೋಡಾಶವನ್ನು ಸ್ಥಾಪಿಸುವಂತೆಯೇ ಇಲ್ಲಿ ಅಧಿಕವಾಗಿ ನಾಲ್ಕು ಅಕ್ಷರಗಳನ್ನು ಪ್ರಯೋಗಿಸಿದಂತಾಯಿತು.

ಸರ್ವೇ᳚ಭ್ಯೋ ಹಿ ಕಾಮೇ᳚ಭ್ಯೋ ಯ॒ಜ್ಞಃ ಪ್ರ॒ಯು॒ಜ್ಯತೇ᳚
ತ್ರೈಧಾ॒ತ॒ವೀಯೇ॑ನ ಯಜೇತಾ॒ಭಿ॒ ಚರ॒ನ್ತ್ಸರ್ವೋ॒ ವಾ ಏ॒ಷ
[ವೈ (೨) ಏ॒ಷ] ಯ॒ಜ್ಞೋ ಯತ್ತ್ರೈ॑ಧಾ॒ತ॒ವೀಯ॒ಗ್॒ಂ

ಸರ್ವೇ᳚ಭ್ಯಃ । ಹಿ । ಕಾಮೇ᳚ಭ್ಯಃ । ಯ॒ಜ್ಞಃ । ಪ್ರ॒ಯು॒ಜ್ಯತ॒ ಇತಿ ಪ್ರ–ಯು॒ಜ್ಯತೇ᳚ । **ತ್ರೈ॒ಧಾ॒ತ॒ವೀಯೇ॑ನ** । ಯ॒ಜೇ॒ತ॒ । ಅ॒ಭಿ॒ಚರ॒ನ್ನಿತ್ಯ॑ಭಿ–ಚರ॑ನ್ । ಸರ್ವಃ॑ । ವೈ । ಏ॒ಷಃ । ಯ॒ಜ್ಞಃ । ಯತ್ । ತ್ರೈ॒ಧಾ॒ತ॒ವೀಯ᳚ಮ್ ।

| | |
|---|---|
| ಸರ್ವೇಭ್ಯಃ ಹಿ ಕಾಮೇಭ್ಯಃ ಯಜ್ಞಃ ಪ್ರಯುಜ್ಯತೇ | ಜ್ಯೋತಿಷ್ಟೋಮಾದಿಯಾಗಗಳು ಸರ್ವ ಕಾಮನೆಗಳಿಗಾಗಿ ಹೇಳಲ್ಪಟ್ಟಿವೆಯಲ್ಲವೆ? |

**ಅಭಿಚಾರಾರ್ಥವಾಗಿ ತ್ರೈಧಾತವೀಯೇಷ್ಟಿವಿಧಿ; ಪ್ರಶಂಸೆ**

| | |
|---|---|
| ಅಭಿಚರನ್ ತ್ರೈಧಾತವೀಯೇನ ಯಜೇತ | ಶತ್ರುಮಾರಣವನ್ನು ಮಾಡಲು ಇಚ್ಛಿಸುವವನು ತ್ರೈಧಾತವೀಯಯಾಗವನ್ನು ಅನುಷ್ಠಿಸಬೇಕು. |
| ಯತ್ ತ್ರೈಧಾತವೀಯಮ್ ಏಷಃ ಸರ್ವಃ ಯಜ್ಞಃ ವೈ | ಈ ತ್ರೈಧಾತವೀಯವು ಸರ್ವಯಜ್ಞ ಸ್ವರೂಪವಾಗಿದೆಯಲ್ಲವೆ? |

ಹೀಗೆ ಗಾಯತ್ರೀ, ತ್ರಿಷ್ಟುಪ್, ಜಗತೀಛಂದಸ್ಸುಗಳನ್ನು ತ್ರೈಧಾತವೀಯದಲ್ಲಿ ಬಳಸಿದಂತಾಯಿತು.

ಪ್ರಕೃತಿಯಾಗದಲ್ಲಿ **'ಆ ಜುಹೋತ'** ಎಂಬ ಋಕ್ ಸಾಮಧೇನಿಗಳಲ್ಲಿ ಕೊನೆಯದು. ಗಾಯತ್ರಿಯು ಉಷ್ಣಿಹಾಸ್ವರೂಪವೆಂದೂ ಉಷ್ಣಿಹಾಛಂದಸ್ಸು ಜಗತಿಯ ಸಾರವೆಂದು ಹೇಳಿರುವುದರಿಂದ ಅದು ಜಗತೀಸ್ವರೂಪವನ್ನು ಹೊಂದಿರುವ ಗಾಯತ್ರೀಛಂದಸ್ಸಿನ ಮಂತ್ರ. ಅಥವಾ ಶಾಖಾಂತರದಲ್ಲಿ ಪಠಿತವಾದ ಮುಖ್ಯ ಜಗತೀಛಂದಸ್ಸಿನಿಂದ ಕೂಡಿದ ಮಂತ್ರದಿಂದ ಸಾಮಧೇನಿಯನ್ನು ಮುಗಿಸಿದರೆ ಜಗತೀಛಂದಸ್ಸಿನಿಂದ ಸಾಮಿಧೇನಿಗಳನ್ನು

ಸರ್ವೇಣೈವೈನಂ ಯಜ್ಞೇನಾಭಿ ಚರತಿ ಸ್ತೃಣುತ ಏವೈನ
ಮೇತಯೈವ ಯಜೇತಾಭಿಚರ್ಯಮಾಣಸ್ಸರ್ವೋ ವಾ ಏಷ
ಯಜ್ಞೋ ಯತ್ತ್ರೈಧಾತವೀಯಗ್ಂ ಸರ್ವೇಣೈವ ಯಜ್ಞೇನ
ಯಜತೇ

---

ಸರ್ವೇಣ । ಏವ । ಏನಮ್ । ಯಜ್ಞೇನ । ಅಭೀತಿ । ಚರತಿ । ಸ್ತೃಣುತ । ಏವ । ಏನಮ್ ।
**ಏತಯಾ** । ಏವ । ಯಜೇತ । ಅಭಿಚರ್ಯಮಾಣ ಇತ್ಯಭಿ–ಚರ್ಯಮಾಣಃ । ಸರ್ವಃ । ವೈ ।
ಏಷಃ । ಯಜ್ಞಃ । ಯತ್ । ತ್ರೈಧಾತವೀಯಮ್ । ಸರ್ವೇಣ । ಏವ । ಯಜ್ಞೇನ । ಯಜತೇ ।

---

| | |
|---|---|
| ಏನಮ್ ಸರ್ವೇಣ ಯಜ್ಞೇನ ಏವ ಅಭಿಚರತಿ | ಎಲ್ಲ ಆಭಿಚಾರಿಕಯಾಗಗಳಿಂದಲೂ ಈ ವೈರಿಗೆ ಅಭಿಚಾರವನ್ನು ಮಾಡಿದಂತಾಗುತ್ತದೆ. |
| ಏನಮ್ ಸ್ತೃಣುತೇ ಏವ | ಈ ಯಜಮಾನನು ತನ್ನ ಈ ಶತ್ರುವನ್ನು ಹಿಂಸಿಸಿಯೇ ಹಿಂಸಿಸುತ್ತಾನೆ. |

**ಶತ್ರುಗಳ ಅಭಿಚಾರನಿವಾರಕವಾಗಿ ಈ ಯಾಗ; ಪ್ರಶಂಸೆ.**

| | |
|---|---|
| ಅಭಿಚರ್ಯಮಾಣಃ ಏತಯಾ ಏವ ಯಜೇತ | ಶತ್ರುಗಳ ಅಭಿಚಾರಕ್ಕೆ ಗುರಿಯಾದವನು ಈ ಯಾಗವನ್ನು ಅನುಷ್ಠಿಸಬೇಕು. |
| ಯತ್ ತ್ರೈಧಾತವೀಯಮ್ ಏಷಃ ಸರ್ವಃ ಯಜ್ಞಃ ವೈ | ತ್ರೈಧಾತವೀಯವೆಂಬುದು ಯಾವುದುಂಟೋ ಅದು ಸರ್ವಯಜ್ಞಸ್ವರೂಪವಾಗಿದೆ. |
| ಸರ್ವೇಣ ಯಜ್ಞೇನ ಯಜತೇ ಏವ | ಈ ಯಾಗದಿಂದ ಅಭಿಚಾರಪ್ರತಿಬಂಧಕವಾದ ಸಮಸ್ತಯಾಗಗಳನ್ನೂ ಯಜಮಾನನು ಅನುಷ್ಠಿಸಿದವನಾಗುತ್ತಾನೆ. |

ನೈನಮಭಿಚರನ್ತ್ಸ್ಣುತ ಏತಯೈವ ಯಜೇತ

ಸಹಸ್ರೇಣ ಯಕ್ಷ್ಯಮಾಣಃ

---

ನ । ಏನಮ್ । ಅಭಿಚರನ್ನಿತ್ಯಭಿ–ಚರನ್ । ಸ್ತೃಣುತೇ । **ಏತಯಾ** । ಏವ । ಯಜೇತ ।

ಸಹಸ್ರೇಣ । ಯಕ್ಷ್ಯಮಾಣಃ ।

---

| | |
|---|---|
| ಅಭಿಚರನ್ ಏನಮ್ ನ ಸ್ತೃಣುತೇ | ಈ ಯಜಮಾನನನ್ನು ಉದ್ದೇಶಿಸಿ ಅಭಿಚಾರ ಮಾಡಿದವನು ಹಿಂಸಿಸಲು ಸಮರ್ಥನಾಗುವುದಿಲ್ಲ |

**ಸಹಸ್ರದಕ್ಷಿಣಾಕವಾದ ಯಾಗದ ಸಾಮರ್ಥ್ಯಸಂಪಾದನೆಗಾಗಿ ಈ ಯಾಗದ ವಿಧಾನ; ಪ್ರಶಂಸೆ**

| | |
|---|---|
| ಸಹಸ್ರೇಣ ಯಕ್ಷ್ಯಮಾಣಃ | ಸಹಸ್ರದಕ್ಷಿಣಾಕವಾದ ಜ್ಯೋತಿರಾದಿಯಾಗಗಳನ್ನು ಮಾಡಲು ಬಯಸುವವನು |
| ಏತಯಾ ಏವ ಯಜೇತ | ಆ ಸಾಮರ್ಥ್ಯಸಂಪಾದನೆಗಾಗಿ ಈ ಯಾಗವನ್ನು ಅನುಷ್ಠಿಸಬೇಕು. |

---

ಮುಗಿಸಿದಂತಾಗುತ್ತದೆ. ಯಾಗವನ್ನು ಕೊನೆಗೊಳಿಸಿದಂತಾಗುತ್ತದೆ. ಹೀಗಾಗಿ ಪ್ರಕೃತಿ ಯಾಗದಂತೆ ಸಾಮಿಧೇನಿಯನ್ನು ಮುಗಿಸದೇ, ಅಥವಾ ಶಾಖಾಂತರದಂತೆ ಮುಖ್ಯ ಜಗತಿಯಂತೆ ಸಾಮಿಧೇನಿಯನ್ನು ಮುಗಿಸದೆ ಇಂದ್ರಿಯವೀರ್ಯಸಾಧಕವಾದ ತ್ರಿಷ್ಟುಪ್ ಛಂದಸ್ಸಿನಿಂದ ಮುಗಿಸಬೇಕು. ಇದರಿಂದ ಇಂದ್ರಿಯ- ವೀರ್ಯಗಳಲ್ಲಿಯೇ ಯಜ್ಞವನ್ನು ನೆಲೆಗೊಳಿಸಿದಂತಾಗುತ್ತದೆ. ಜಗತೀಯಿಂದ ಮುಗಿಸಿದ ದೋಷವೂ ಬರುವುದಿಲ್ಲ

ಸಾಮಿಧೇನಿಗಳನ್ನು **'ಅಗ್ನೇ ತ್ರೀ ತೇ'** ಎಂಬ ತ್ರಿಶಬ್ದಗಳಿಂದ ಕೂಡಿದ ತ್ರಿಷ್ಟುಪ್ ಛಂದಸ್ಸಿನ ಸಾಮಿಧೇನೀಮಂತ್ರದಿಂದ ಮುಗಿಸುವುದರಿಂದ ತ್ರಿಶಬ್ದವನ್ನೊಳಗೊಂಡ ತ್ರೈಧಾತ ವೀಯೇಷ್ಟಿಯ ಸಾರೂಪ್ಯ ಬಂದು ಶೀಘ್ರ ಫಲಪ್ರಾಪ್ತಿಯಾಗುತ್ತದೆ.

ಎಲ್ಲ ಮುಖ್ಯ ಛಂದಸ್ಸುಗಳಾದ ಗಾಯತ್ರೀ, ತ್ರಿಷ್ಟುಪ್, ಜಗತೀ ಛಂದಸ್ಸುಗಳಿಂದ ಕೂಡಿರುವುದರಿಂದ ಈ ತ್ರೈಧಾತವೀಯೇಷ್ಟಿಯು ಸರ್ವಯಾಗಸ್ವರೂಪವಾಗಿದೆ.

ಪ್ರಜಾತಮೇವೈನದ್ದದಾತ್ಯೇತಯೈವ ಯಜೇತ ಸಹ

ಸ್ರೇಣೇಜಾನೋಽಂತಂ ವಾ ಏಷ ಪಶೂನಾಂ ಗಚ್ಛತಿ

[ಗಚ್ಛತಿ (೩)] ಯಃ ಸಹಸ್ರೇಣ ಯಜತೇ

---

ಪ್ರಜಾತಮಿತಿ ಪ್ರ-ಜಾತಮ್ । ಏವ । ಏನತ್ । ದದಾತಿ । **ಏತಯಾ** । ಏವ । ಯಜೇತ । ಸಹಸ್ರೇಣ । ಈಜಾನಃ । ಅಂತಮ್ । ವೈ । ಏಷಃ । ಪಶೂನಾಮ್ । ಗಚ್ಛತಿ । ಯಃ । ಸಹಸ್ರೇಣ । ಯಜತೇ ।

---

| | |
|---|---|
| ಪ್ರಜಾತಮ್ ಏನತ್ ಏವ ದದಾತಿ | (ಯಾಗಪ್ರಭಾವದಿಂದ) ಆ ಯಾಗಗಳ ಸಹಸ್ರ ದಕ್ಷಿಣೆಗಳನ್ನು ಕೊಡಲು ಶಕ್ತನಾಗುವನು. |

**ಅನ್ಯಯಾಗಗಳನ್ನು ಅನುಷ್ಠಿಸಲು ಈ ಯಾಗವಿಧಿ; ಪ್ರಶಂಸೆ**

| | |
|---|---|
| ಸಹಸ್ರೇಣ ಈಜಾನಃ | ಗೋಸಹಸ್ರದಕ್ಷಿಣೆಯುಳ್ಳ ಯಾಗಗಳನ್ನು ಮಾಡಿ ಧನಹೀನನಾದವನು |
| ಏತಯಾ ಏವ ಯಜೇತ | ಈ ಯಾಗವನ್ನು ಅನುಷ್ಠಿಸಬೇಕು. |
| ಯಃ ಸಹಸ್ರೇಣ ಯಜತೇ | ಯಾವನು ಧೇನುಗಳ ಸಹಸ್ರ ಸಂಖ್ಯೆಯೇ ದಕ್ಷಿಣೆ ಯಾಗಿರುವ ಯಾಗವನ್ನು ಅನುಷ್ಠಿಸುತ್ತಾನೆಯೋ |
| ಏಷಃ ಪಶೂನಾಮ್ ಅಂತಮ್ ಗಚ್ಛತಿ | ಈ ಯಜಮಾನನು ಗೋವುಗಳ ಕೊನೆಯನ್ನು ಮುಟ್ಟುತ್ತಾನೆ. |

---

ಜ್ಯೋತಿಷ್ಟೋಮಾದಿಗಳು ಸರ್ವಕಾಮಾರ್ಥಗಳೆಂದು ಹೇಳಲ್ಪಟ್ಟಿವೆ. ಅದರಂತೆಯೇ ಸರ್ವಯಜ್ಞಸ್ವರೂಪವಾದ ಈ ತ್ರೈಧಾತವೀಯವು ಸರ್ವಫಲಪ್ರದವಾಗಿದೆ. ಈ ಯಾಗವು ಸರ್ವಕಾಮಸಾಧಕವೆಂದು ಹೇಳಿ ವಿಶೇಷವಿಧಿಗಳನ್ನು ಹೇಳಲಾಗಿದೆ.

ಶತ್ರುವಧಕಾಮನು ಈ ಯಾಗವನ್ನು ಅನುಷ್ಠಿಸಬೇಕು. ಇದರಿಂದ ಎಲ್ಲ ಆಭಿಚಾರಿಕ

ಪ್ರಜಾಪತಿಃ ಖಲು ವೈ ಪಶೂನಸೃಜತ ತಾಗ್ಂಸ್ತ್ರೈಧಾತ

ವೀಯೇನೈವಾಸೃಜತ ಯ ಏವಂ ವಿದ್ವಾಗ್ಂಸ್ತ್ರೈಧಾತ

ವೀಯೇನ ಪಶುಕಾಮೋ ಯಜತೇ

---

**ಪ್ರಜಾಪತಿರಿತಿ ಪ್ರಜಾ-ಪತಿಃ** । ಖಲು । ವೈ । ಪಶೂನ್ । ಅಸೃಜತ । ತಾನ್ । ತ್ರೈಧಾತ ವೀಯೇನ । ಏವ । ಅಸೃಜತ । ಯಃ । ಏವಮ್ । ವಿದ್ವಾನ್ । ತ್ರೈಧಾತವೀಯೇನ । ಪಶುಕಾಮ ಇತಿ ಪಶು–ಕಾಮಃ । ಯಜತೇ ।

---

**ಪಶುಪ್ರಾಪ್ತಿಯ ಪ್ರಕಾರದ ವರ್ಣನೆ**

| | |
|---|---|
| ಪ್ರಜಾಪತಿಃ ಖಲು<br>ವೈ ಪಶೂನ್ ಅಸೃಜತ | ಪ್ರಜಾಪತಿಬ್ರಹ್ಮನು ಪಶುಗಳನ್ನು<br>ಸೃಷ್ಟಿಸಿದನಷ್ಟೆ |
| ತಾನ್ ತ್ರೈಧಾತವೀಯೇನ<br>ಏವ ಅಸೃಜತ | ಆ ಪಶುಗಳನ್ನು ತ್ರೈಧಾತವೀಯಯಾಗ<br>ದಿಂದಲೇ ಸೃಷ್ಟಿಸಿದನು. |
| ಯಃ ಏವಮ್ ವಿದ್ವಾನ್<br>ಪಶುಕಾಮಃ ತ್ರೈಧಾತವೀಯೇನ<br>ಯಜತೇ | ಹೀಗೆ ತಿಳಿದ ಯಾವನು ಪಶುಕಾಮನಾಗಿ<br>ತ್ರೈಧಾತವೀಯಯಾಗವನ್ನು ಅನುಷ್ಠಿಸು<br>ತ್ತಾನೆಯೋ [ಅವನು] |

---

ಯಾಗಗಳನ್ನು ಅನುಷ್ಠಿಸಿದಂತೆಯೇ ಆಗುತ್ತದೆ. ಇದರಿಂದ ಶತ್ರುಮಾರಣವಾಗುತ್ತದೆ.

ಶತ್ರುಗಳು ಮಾಡುವ ಅಭಿಚಾರವನ್ನು ನಿವಾರಿಸಿಕೊಳ್ಳಲು ಈ ಯಾಗವನ್ನು ಅನುಷ್ಠಿಸಬೇಕು. ಈ ಯಜ್ಞವನ್ನು ಮಾಡುವುದರಿಂದ ಎಲ್ಲ ಯಾಗಗಳನ್ನು ಮಾಡಿ ದಂತಾಗುತ್ತದೆ. ಯಜಮಾನನು ಅಭಿಚಾರಗಳಿಂದ ಹಿಂಸೆಗೆ ಗುರಿಯಾಗುವುದಿಲ್ಲ.

ಸಹಸ್ರದಕ್ಷಿಣಾಕವಾದ ಜ್ಯೋತಿರಾದಿಯಾಗಗಳನ್ನು ಮಾಡಬಯಸುವವನು ಈ ತ್ರೈಧಾತವೀಯವನ್ನು ಅನುಷ್ಠಿಸಿದರೆ ಯಾಗದ ಪ್ರಭಾವದಿಂದ ಉಂಟಾಗುವ ಧನದಿಂದ ಆ ಯಾಗಗಳ ಸಹಸ್ರದಕ್ಷಿಣೆಯನ್ನೂ ನೀಡಬಲ್ಲವನಾಗುತ್ತಾನೆ.

ಯಸ್ಮಾದೇವ ಯೋನೇಃ ಪ್ರಜಾಪತಿಃ ಪಶೂನಸೃಜತ
ತಸ್ಮಾದೇವೈನಾನ್ತ್ಸೃಜತ ಉಪೈನಮುತ್ತರಗ್‌ಂ ಸಹಸ್ರಂ
ನಮತಿ

---

ಯಸ್ಮಾತ್ । ಏವ । ಯೋನೇಃ । ಪ್ರಜಾಪತಿರಿತಿ ಪ್ರಜಾ–ಪತಿಃ । ಪಶೂನ್ । ಅಸೃಜತ । ತಸ್ಮಾತ್ । ಏವ । ಏನಾನ್ । ಸೃಜತೇ । ಉಪೇತಿ । ಏನಮ್ । ಉತ್ತರಮಿತ್ಯುತ್-ತರಮ್ । ಸಹಸ್ರಮ್ । ನಮತಿ ।

---

| | |
|---|---|
| ಯಸ್ಮಾತ್ ಏವ ಯೋನೇಃ ಪ್ರಜಾಪತಿಃ ಪಶೂನ್ ಅಸೃಜತ | ಪಶುಕಾರಣವಾದ ಯಾವ ಯಾಗದಿಂದ ಪ್ರಜಾಪತಿಯು ಪಶುಗಳನ್ನು ಸೃಷ್ಟಿಸಿದನೋ |
| ತಸ್ಮಾತ್ ಏವ ಏನಾನ್ ಸೃಜತೇ | ಆ ಕಾರಣಭೂತಯಾಗದಿಂದಲೇ ಈ ಪಶುಗಳನ್ನುಂಟುಮಾಡುತ್ತಾನೆ. |
| ಏನಮ್ ಉತ್ತರಮ್ ಸಹಸ್ರಮ್ ಉಪ ನಮತಿ | ಮುಂದಿನ ಯಾಗಗಳಲ್ಲಿ ಕೊಡಬೇಕಾದ ಗೋಸಹಸ್ರವು ಈ ಯಜಮಾನನನ್ನು ಹೊಂದುತ್ತದೆ. |

---

ಸಹಸ್ರದಕ್ಷಿಣಾಕವಾದ ಯಾಗವನ್ನು ಮಾಡಿ ಅನಂತರ ಬೇರೆ ಯಾಗಗಳನ್ನು ಅನುಷ್ಠಿಸಲು ಅಶಕ್ತನಾದವನು ಈ ಯಾಗವನ್ನು ಮಾಡಬೇಕು. ಸಹಸ್ರಧೇನುಗಳ ದಕ್ಷಿಣೆಯುಳ್ಳ ಯಾಗವನ್ನು ಅನುಷ್ಠಿಸಿದರೆ ಯಜಮಾನನಲ್ಲಿ ಹಸುಗಳೇ ಉಳಿಯುವುದಿಲ್ಲ. ಹೀಗಾಗಿ ಪುನಃ ಪ್ರಾಪ್ತಿಗಾಗಿ ಈ ಯಾಗವನ್ನು ಅನುಷ್ಠಿಸಬೇಕು.

ಪ್ರಜಾಪತಿಯು ಪಶುಗಳನ್ನು ಸೃಷ್ಟಿಸಿದನು. ಅವನು ತ್ರೈಧಾತವೀಯಯಾಗದಿಂದಲೇ ಆ ಪಶುಗಳನ್ನು ಉತ್ಪತ್ತಿ ಮಾಡಿದನು. ಹೀಗೆ ತಿಳಿದು ಯಾಗಮಾಡುವ ಪಶುಕಾಮನಾದ ಯಜಮಾನನು ಪ್ರಜಾಪತಿಯಂತೆಯೇ ಪಶುಕಾರಣವಾದ ತ್ರೈಧಾತವೀಯಯಾಗದ

ದೇವತಾಭ್ಯೋ ವಾ ಏಷ ಆವೃಶ್ಚ್ಯತೇ ಯೋ ಯಕ್ಷ್ಯ

ಇತ್ಯುಕ್ತ್ವಾ ನ ಯಜತೇ ತ್ರೈಧಾತವೀಯೇನ ಯಜೇತ

ಸರ್ವೋ ವಾ ಏಷ ಯಜ್ಞೋ [ಯಜ್ಞಃ (೪)] ಯತ್ತ್ರೈಧಾತ

ವೀಯಗ್ಂ ಸರ್ವೇಣೈವ ಯಜ್ಞೇನ ಯಜತೇ

---

**ದೇವತಾಭ್ಯಃ** । ವೈ । ಏಷಃ । ಏತಿ । ವೃಶ್ಚ್ಯತೇ । ಯಃ । ಯಕ್ಷ್ಯೇ । ಇತಿ । ಉಕ್ತ್ವಾ । ನ । ಯಜತೇ । ತ್ರೈಧಾತವೀಯೇನ । ಯಜೇತ । ಸರ್ವಃ । ವೈ । ಏಷಃ । ಯಜ್ಞಃ । ಯತ್ । ತ್ರೈಧಾತ ವೀಯಮ್ । ಸರ್ವೇಣ । ಏವ । ಯಜ್ಞೇನ । ಯಜತೇ ।

---

**ಯಾಗವನ್ನು ಮಾಡಲು ಸಂಕಲ್ಪಿಸಿ ಅನುಷ್ಠಿಸದವನಿಗೆ**
**ತ್ರೈಧಾತವೀಯೇಷ್ಟಿವಿಧಿ; ಪ್ರಶಂಸೆ**

| | |
|---|---|
| ಯಃ ಯಕ್ಷ್ಯೇ ಇತಿ | ಯಾವನು ಯಾಗಮಾಡುತ್ತೇನೆಂದು ಸಂಕಲ್ಪಿಸಿ |
| ಉಕ್ತ್ವಾ ನ ಯಜತೇ | ಯಾಗ ಮಾಡುವುದಿಲ್ಲವೋ |
| ಏಷಃ ದೇವತಾಭ್ಯಃ | ದೇವತೆಗಳಿಂದ ಈತನು ದೂರ ಮಾಡ |
| ಆವೃಶ್ಚ್ಯತೇ ವೈ | ಲ್ಪಡುತ್ತಾನೆ. |
| ತ್ರೈಧಾತವೀಯೇನ | ಅಂತಹವನು ಈ ತ್ರೈಧಾತವೀಯಯಾಗವನ್ನು |
| ಯಜೇತ | ಅನುಷ್ಠಿಸಬೇಕು. |
| ಯತ್ ತ್ರೈಧಾತವೀಯಮ್ | ತ್ರೈಧಾತವೀಯವೆಂಬ ಯಾವ ಯಾಗ |
| ಏಷಃ ಸರ್ವಃ ಯಜ್ಞಃ ವೈ | ವುಂಟೋ ಇದು ಸರ್ವಯಜ್ಞಸ್ವರೂಪವಷ್ಟೆ |
| ಸರ್ವೇಣ ಏವ ಯಜ್ಞೇನ ಯಜತೇ | ಈ ಯಾಗದಿಂದ ಯಜಮಾನನು ಸರ್ವ ಯಜ್ಞಗಳನ್ನೂ ಅನುಷ್ಠಿಸಿದವನಾಗುತ್ತಾನೆ. |

---

ಪ್ರಭಾವದಿಂದಲೇ ಉತ್ತರ ಯಾಗಗಳ ದಕ್ಷಿಣೆಗೆ ಬೇಕಾದ ಸಹಸ್ರಸಂಖ್ಯೆಯ ಪಶುಗಳನ್ನು ಪಡೆಯುತ್ತಾನೆ. ಆತನಿಗೆ ಪಶುಸಹಸ್ರಪ್ರಾಪ್ತಿಯಾಗುವುದು. ಯಾವುದಾದರೂ ಯಾಗವನ್ನು

ನ ದೇವತಾಭ್ಯ ಆವೃಶ್ಚ್ಯತೇ ದ್ವಾದಶಕಪಾಲಃ
ಪುರೋಡಾಶೋ ಭವತಿ ತೇ ತ್ರಯಶ್ಚತುಷ್ಕಪಾಲಾ
ಸ್ತ್ರಿಷ್ಷಮೃದ್ಧತ್ವಾಯ ತ್ರಯಃ ಪುರೋಡಾಶಾ ಭವಂತಿ

---

ನ। ದೇವತಾಭ್ಯಃ। ಏತಿ। ವೃಶ್ಚ್ಯತೇ। **ದ್ವಾದಶಕಪಾಲ ಇತಿ ದ್ವಾದಶ-ಕಪಾಲಃ।**
ಪುರೋಡಾಶಃ। ಭವತಿ। ತೇ। ತ್ರಯಃ। ಚತುಷ್ಕಪಾಲಾ ಇತಿ ಚತುಃ-ಕಪಾಲಾಃ।
ತ್ರಿಷ್ಷಮೃದ್ಧತ್ವಾಯೇತಿ ತ್ರಿಷ್ಷಮೃದ್ಧ-ತ್ವಾಯ। ತ್ರಯಃ। ಪುರೋಡಾಶಾಃ। ಭವಂತಿ।

---

| | |
|---|---|
| ದೇವತಾಭ್ಯಃ ನ ಆವೃಶ್ಚ್ಯತೇ | ದೇವತೆಗಳಿಂದ ದೂರನಾಗುವುದಿಲ್ಲ, ದೇವತಾದ್ರೋಹವನ್ನೆಸಗಿದವನಾಗುವುದಿಲ್ಲ |

**ತ್ರೈಧಾತವೀಯಕ್ಕೆ ಸಂಬಂಧಿಸಿದ ಕೆಲವು ವಿಧಿಗಳು; ಪ್ರಶಂಸೆ**

| | |
|---|---|
| ದ್ವಾದಶಕಪಾಲಃ ಪುರೋಡಾಶಃ ಭವತಿ | ಈ ತ್ರೈಧಾತವೀಯಯಾಗದಲ್ಲಿ ದ್ವಾದಶ ಕಪಾಲಪುರೋಡಾಶವು ಹವಿಸ್ಸಾಗಿದೆ. |
| ತೇ ತ್ರಯಃ ಚತುಷ್ಕಪಾಲಾಃ ತ್ರಿಷ್ಷಮೃದ್ಧತ್ವಾಯ | ಅವು ಮೂರು ಚತುಷ್ಕಪಾಲವಾಗಿರುತ್ತವೆ. ಇದರಿಂದ ತ್ರೈಧಾತವೀಯಕ್ಕೆ ಅನುರೂಪ ವಾದ ತ್ರಿತ್ವಸಂಖ್ಯೆಯ ಸಮೃದ್ಧಿಯಾಗುತ್ತದೆ. |
| ತೇ ತ್ರಯಃ ಪುರೋಡಾಶಾಃ ಭವಂತಿ | ಹೀಗೆ ಮೂರು ಚತುಷ್ಕಪಾಲಪುರೋಡಾಶ ಗಳಿರುತ್ತವೆ. |

---

ಮಾಡುವೆನೆಂದು ಸಂಕಲ್ಪಿಸಿ ಆ ಯಾಗವನ್ನು ಅನುಷ್ಠಿಸದಿರುವವನು ಆ ದೇವತೆಗಳಿಗೆ ದ್ರೋಹ ವನ್ನು ಮಾಡಿದಂತಾಗುತ್ತದೆ. ಆ ದೋಷನಿವೃತ್ತಿಗಾಗಿ ಈ ತ್ರೈಧಾತವೀಯಯಾಗವನ್ನು ಮಾಡ ಬೇಕು. ಈ ತ್ರೈಧಾತವೀಯವು ಸರ್ವಯಜ್ಞಸ್ವರೂಪವಾದುದರಿಂದ ಸರ್ವದೇವತೆಗಳನ್ನೂ ತೃಪ್ತಿಪಡಿಸುತ್ತದೆ. ಆದುದರಿಂದ ಯಜಮಾನನು ಅವರ ಆಗ್ರಹಕ್ಕೆ ಗುರಿಯಾಗುವುದಿಲ್ಲ.

ತ್ರಯ ಇಮೇ ಲೋಕಾ ಏಷಾಂ ಲೋಕಾನಾಮಾಪ್ತ್ಯಾ
ಉತ್ತರಉತ್ತರೋ ಜ್ಯಾಯಾನ್ಭವತ್ಯೇವಮಿವ ಹೀ ಮೇ
ಲೋಕಾ ಯವಮಯೋ ಮಧ್ಯ

---

ತ್ರಯಃ। ಇಮೇ। ಲೋಕಾಃ। ಏಷಾಮ್। ಲೋಕಾನಾಮ್। ಆಪ್ತ್ಯೈ। ಉತ್ತರಉತ್ತರ ಇತ್ಯುತ್ತರಃ-ಉತ್ತರಃ। ಜ್ಯಾಯಾನ್। ಭವತಿ। ಏವಮ್। ಹಿ। ಇಮೇ। ಲೋಕಾಃ। ಯವಮಯ ಇತಿ ಯವ–ಮಯಃ। ಮಧ್ಯೇ।

---

| | |
|---|---|
| ಇಮೇ ಲೋಕಾಃ ತ್ರಯಃ | ಲೋಕಗಳೂ ಭೂಮಿ, ಅಂತರಿಕ್ಷ ಮತ್ತು ದ್ಯುಲೋಕವೆಂದು ಮೂರಾಗಿವೆ. |
| ಏಷಾಮ್ ಲೋಕಾನಾಮ್ ಆಪ್ತ್ಯೈ | ಈ ಮೂರು ಸಂಖ್ಯೆಯು ಮೂರು ಲೋಕಗಳ ಪ್ರಾಪ್ತಿಗೆ ಸಾಧನವಾಗಿದೆ. |
| ಉತ್ತರಉತ್ತರಃ ಜ್ಯಾಯಾನ್ ಭವತಿ | ಮೇಲು ಮೇಲಿನ ಪುರೋಡಾಶವು ಪರಿಮಾಣದಲ್ಲಿ ಕೆಳಗಿನ ಪುರೋಡಾಶಕ್ಕಿಂತ ದೊಡ್ಡದಾಗಿರುತ್ತದೆ. |
| ಇಮೇ ಲೋಕಾಃ ಏವಮ್ ಇವ ಹಿ | ಲೋಕಗಳೂ ಹೀಗೆಯೇ [ಕೆಳಗಿನ ಲೋಕಕ್ಕಿಂತ ಮೇಲು ಮೇಲಿನದು ದೊಡ್ಡದು]. |
| ಮಧ್ಯೇ ಯವಮಯಃ | ಮಧ್ಯದಲ್ಲಿ ಯವಮಯಪುರೋಡಾಶವಿರಬೇಕು. |

---

ಆತನಿಗೆ ದೇವತಾದ್ರೋಹದೋಷವೂ ಬರುವುದಿಲ್ಲ.

ದ್ರವ್ಯ–ದಕ್ಷಿಣಾದಿಗಳೂ ಅವುಗಳ ಪ್ರಶಂಸೆಯೂ ಇಲ್ಲಿ ಹೀಗೆ ಹೇಳಲ್ಪಟ್ಟಿದೆ. ಮೊದಲು ನಾಲ್ಕು ಮುಷ್ಟಿ ವ್ರೀಹಿಯನ್ನು ಇಂದ್ರಾವಿಷ್ಣು ದೇವತೆಗಳಿಗೆ ನಿರ್ವಾಪ ಮಾಡಬೇಕು. ಇದು ವ್ರೀಹಿಮಯವಾದ ಚತುಷ್ಕಪಾಲಪುರೋಡಾಶ. ನಂತರ ನಾಲ್ಕು ಮುಷ್ಟಿ ಯವಗಳನ್ನು

ಏತದ್ವಾ ಅಂತರಿಕ್ಷಸ್ಯ ರೂಪಗ್ಂ ಸಮೃದ್ಧ್ಯೈ ಸರ್ವೇಷಾ

ಮಭಿಗಮಯನ್ನವದ್ಯತ್ಯಛಂಬಟ್ಕಾರಗ್ಂ ಹಿರಣ್ಯಂ

ದದಾತಿ ತೇಜ ಏವಾವರುಂಧೇ [ಏವ (೫) ಅವರುಂಧೇ]

ಏತತ್ । ವೈ । ಅಂತರಿಕ್ಷಸ್ಯ । ರೂಪಮ್ । ಸಮೃದ್ಧ್ಯಾ ಇತಿ ಸಮ್–ಋದ್ಧ್ಯೈ । ಸರ್ವೇಷಾಮ್ । ಅಭಿಗಮಯನ್ನಿತ್ಯಭಿ–ಗಮಯನ್ । ಅವೇತಿ । ದ್ಯತಿ । ಅಛಂಬಟ್ಕಾರಮಿತ್ಯಛಂಬಟ್–ಕಾರಮ್ । **ಹಿರಣ್ಯಮ್** । ದದಾತಿ । ತೇಜಃ । ಏವ । ಅವೇತಿ । ರುಂಧೇ ।

| | |
|---|---|
| ಏತತ್ ವೈ ಅಂತರಿಕ್ಷಸ್ಯ ರೂಪಮ್ ಸಮೃದ್ಧ್ಯೈ | ಹೀಗೆಯೇ ಅಂತರಿಕ್ಷಲೋಕವೂ ಮಧ್ಯದಲ್ಲಿಯೇ ಇದೆ. ಇದು ಸಮೃದ್ಧಿಗೆ ಕಾರಣವಾಗುತ್ತದೆ. |
| ಸರ್ವೇಷಾಮ್ ಅಭಿಗಮಯನ್ ಅಛಂಬಟ್ಕಾರಮ್ ಅವದ್ಯತಿ | ಎಲ್ಲ ಪುರೋಡಾಶಗಳಿಂದಲೂ ಯಾವುದೂ ವ್ಯರ್ಥವಾಗದಂತೆ ಅವದಾನವನ್ನು ಮಾಡಬೇಕು. |

**ದಕ್ಷಿಣಾವಿಧಾನ; ಪ್ರಶಂಸೆ**

| | |
|---|---|
| ಹಿರಣ್ಯಮ್ ದದಾತಿ | ಸುವರ್ಣವನ್ನು ದಕ್ಷಿಣೆಯನ್ನಾಗಿ ನೀಡಬೇಕು. |
| ತೇಜಃ ಏವ ಅವರುಂಧೇ | ತೈಜಸವಾದ ಹಿರಣ್ಯದ ದಾನದಿಂದ ಯಜಮಾನನು ತೇಜಸ್ಸನ್ನು ಪಡೆಯುತ್ತಾನೆ. |

ನಿರ್ವಾಪ ಮಾಡಬೇಕು. ಇದು ಯವಮಯವಾದ ಚತುಷ್ಕಪಾಲವಾದ ಪುರೋಡಾಶ. ಮತ್ತೆ ನಾಲ್ಕು ಮುಷ್ಟಿ ವ್ರೀಹಿಧಾನ್ಯವನ್ನು ನಿರ್ವಾಪ ಮಾಡಬೇಕು. ಇದು ವ್ರೀಹಿಮಯವಾದ ಚತುಷ್ಕಪಾಲ ಪುರೋಡಾಶ. ಹೀಗೆ ದ್ವಾದಶಕಪಾಲಪುರೋಡಾಶವಿರುತ್ತದೆ. ಮುಂದಿನ ಪ್ರೋಕ್ಷಣಾದಿಸಂಸ್ಕಾರಗಳನ್ನು ಇದೇ ಕ್ರಮದಲ್ಲಿ ಮಾಡಬೇಕು. ಬಳಿಕ ಗಾರ್ಹಪತ್ಯದಲ್ಲಿ ಕಪಾಲೋಪಧಾನಾದಿಗಳು.

ತಾರ್ಪ್ಯಂ ದದಾತಿ ಪಶೂನೇವಾವರುಂಧೇ ಧೇನುಂ ದದಾತ್ಯಾಶಿಷ ಏವಾವರುಂಧೇ ಸಾಮ್ನೋ ವಾ ಏಷ ವರ್ಣೋ ಯದ್ಧಿರಣ್ಯಂ

---

ತಾರ್ಪ್ಯಮ್ । ದದಾತಿ । ಪಶೂನ್ । ಏವ । ಅವೇತಿ । ರುಂಧೇ । ಧೇನುಮ್ । ದದಾತಿ । ಆಶಿಷ ಇತ್ಯಾ-ಶಿಷಃ । ಏವ । ಅವೇತಿ । ರುಂಧೇ । ಸಾಮ್ನಃ । ವೈ । ಏಷಃ । ವರ್ಣಃ । ಯತ್ । ಹಿರಣ್ಯಮ್ ।

---

| | |
|---|---|
| ತಾರ್ಪ್ಯಮ್ ದದಾತಿ | ಘೃತಾಕ್ತ ವಸ್ತ್ರವನ್ನು ಕೊಡಬೇಕು. |
| ಪಶೂನ್ ಏವ ಅವರುಂಧೇ | ಪಶುಗಳನ್ನು ಯಜಮಾನನು ಪಡೆಯುತ್ತಾನೆ. |
| ಧೇನುಮ್ ದದಾತಿ | ಹೊಸದಾಗಿ ಕರುವನ್ನು ಹಾಕಿರುವ ಧೇನುವನ್ನು ಕೊಡಬೇಕು [ಆದರಿಂದ] |
| ಆಶಿಷಃ ಏವ ಅವರುಂಧೇ | ಇಷ್ಟಾರ್ಥವೆಲ್ಲವನ್ನೂ ಪಡೆಯುತ್ತಾನೆ. |
| ಯತ್ ಹಿರಣ್ಯಮ್ ಏಷಃ ವರ್ಣಃ ಸಾಮ್ನಃ | ಚಿನ್ನವೆಂಬುದು ಯಾವುದುಂಟೋ ಅದು ಸಾಮವೇದದ ರೂಪವಾಗಿದೆ. |

---

ಈ ಯಾಗದಲ್ಲಿ ಮೂರು ಚತುಷ್ಕಪಾಲಗಳಿರುವುದರಿಂದ ತ್ರೈಧಾತವೀಯಕ್ಕೆ ಅನುರೂಪವಾದ ತ್ರಿತ್ವಸಂಖ್ಯೆಯು ಪ್ರಾಪ್ತವಾಗುತ್ತದೆ. ಇದು ಫಲಸಮೃದ್ಧಿಗೆ ಕಾರಣವಾಗುತ್ತದೆ. ಮೂರು ಪುರೋಡಾಶಗಳಿರುವುದು ಮೂರು ಲೋಕಗಳ ಪ್ರಾಪ್ತಿಗೆ ಕಾರಣವಾಗುತ್ತದೆ. ಮೇಲು ಮೇಲಿನ ಪುರೋಡಾಶಗಳು ಕೆಳಕೆಳಗಿನ ಪುರೋಡಾಶಗಳಿಗಿಂತ ದೊಡ್ಡದಾಗಿರುತ್ತವೆ. ಲೋಕಗಳೂ ಹೀಗೆಯೇ ಇರುತ್ತವೆ. ಮಧ್ಯದಲ್ಲಿ ಯವಮಯವಾದ ಪುರೋಡಾಶವಿದೆ. ಇದು ಮಧ್ಯಲೋಕವಾದ

ಯಜುಷಾಂ ತಾರ್ಪ್ಯಮುಕ್ಥಾಮದಾನಾಂ ಧೇನುರೇತಾನೇವ ಸರ್ವಾನ್ ವರ್ಣಾನವರುಂಧೇ ॥೩೫-11॥

[ಜಗತ್ಯಾಽಭಿಚರನ್ಥ್ಸರ್ವೋ ವೈ ಗಚ್ಛತಿ ಯಜ್ಞಸ್ತೇಜ ಏವ ತ್ರಿಗ್ಂಶಚ್ಚ]

---

ಯಜುಷಾಮ್ । ತಾರ್ಪ್ಯಮ್ । ಉಕ್ಥಾಮದಾನಾಮಿತ್ಯುಕ್ಥ - ಮದಾನಾಮ್ । ಧೇನುಃ । ಏತಾನ್ । ಏವ । ಸರ್ವಾನ್ । ವರ್ಣಾನ್ । ಅವೇತಿ । ರುಂಧೇ ॥11॥

---

| | |
|---|---|
| ಯತ್ ತಾರ್ಪ್ಯಮ್ ಏಷಃ ಯಜುಷಾಮ್ ವರ್ಣಃ | ಘೃತಾಕ್ತವಸ್ತ್ರವೆಂಬುದು ಯಜುರ್ವೇದದ ರೂಪವಾಗಿದೆ. |
| ಯತ್ ಧೇನುಃ ಏಷಃ ಉಕ್ಥಾಮದಾನಾಂ ವರ್ಣಃ | ಧೇನುವು ಸ್ತೋತ್ರ-ಮಂತ್ರಗಳಿಂದ ದೇವತೆಗಳನ್ನು ಸಂತೋಷಗೊಳಿಸುವ ಋಗ್ವೇದದ ರೂಪವಾಗಿದೆ. |
| ಏತಾನ್ ಸರ್ವಾನ್ ಏವ ವರ್ಣಾನ್ ಅವರುಂಧೇ | [ಈ ಹಿರಣ್ಯಾದಿದಕ್ಷಿಣಾತ್ರಯದಾನದಿಂದ] ವೇದತ್ರಯದ ವರ್ಣಗಳನ್ನು ಹೊಂದಿದವನಾಗುತ್ತಾನೆ. |

---

ಅಂತರಿಕ್ಷಲೋಕದ ರೂಪವಾಗಿದೆ★. ಇದು ಸಮಾನರೂಪವಾದುದರಿಂದ ಫಲಸಮೃದ್ಧಿಯ ಸಂಕೇತವಾಗಿದೆ. ಮೂರು ಚತುಷ್ಕಪಾಲಗಳಿಂದಲೂ ಯಾವುದೂ ವ್ಯರ್ಥವಾಗದಂತೆ ಅವದಾನವನ್ನು ಮಾಡಬೇಕು.

---

★ ಕೆಳಗಿನ ಲೋಕವಾದ ಭೂಮಿ, ಮೇಲಿನ ಲೋಕವಾದ ಸ್ವರ್ಗ ಈ ಎರಡೂ ಒಂದೇ ರೀತಿಯದು. ಏಕೆಂದರೆ ಭೂಮಿಯಲ್ಲಿರುವ ಮನುಷ್ಯರೂ, ಸ್ವರ್ಗಲೋಕದಲ್ಲಿರುವ ಸೂರ್ಯ, ನಕ್ಷತ್ರಾದಿಗಳೂ ಕಾಣುತ್ತಾರೆ. ಮಧ್ಯಲೋಕವಾದ ಅಂತರಿಕ್ಷವು ಭಿನ್ನ ರೀತಿಯದು. ಏಕೆಂದರೆ ಅದರಲ್ಲಿರುವ ಯಕ್ಷ-ಗಂಧರ್ವಾದಿಗಳು ಕಾಣುವುದಿಲ್ಲ. ಪುರೋಡಾಶಗಳಲ್ಲಿಯೂ ವ್ರೀಹಿಮಯವು ಮೇಲೆ ಮತ್ತು ಅತಿ ಕೆಳಗೆ ಇರುತ್ತದೆ. ಯವಮಯವು ಮಧ್ಯದಲ್ಲಿರುವುದರಿಂದ ಅಂತರಿಕ್ಷಲೋಕದ ಸಾಮ್ಯ ಎಂದು ಸಾಯಣಾಚಾರ್ಯರ ವಿವರಣೆ.

ಈ ತ್ರೈಧಾತವೀಯೇಷ್ಟಿಯಲ್ಲಿ ಸುವರ್ಣವನ್ನು ದಕ್ಷಿಣೆಯನ್ನಾಗಿ ನೀಡಬೇಕು. ಇದರಿಂದ ಯಜಮಾನನು ತೇಜೋವಂತನಾಗುವನು. ತುಪ್ಪದಿಂದ ನೆನೆಯಿಸಿದ ವಸ್ತ್ರವನ್ನು ದಾನ ಮಾಡಬೇಕು. ಪಶುಸಂಬಂಧಿಯಾದ ತುಪ್ಪದಿಂದ ತೋಯಿಸಿದ ವಸ್ತ್ರದಾನದಿಂದ ಯಜಮಾನನು ಪಶುಗಳನ್ನು ಹೊಂದುವನು. ಬಳಿಕ ಧೇನುವನ್ನು ದಾನ ಮಾಡಬೇಕು. ಕಾಮಧೇನುವಿನಂತಿರುವ ಗೋದಾನದಿಂದ ಇಷ್ಟಾರ್ಥಗಳೆಲ್ಲವನ್ನೂ ಪಡೆಯುವನು. ಚಿನ್ನವೂ, ಘೃತಾಕ್ತ ವಸ್ತ್ರವೂ ಹಾಗೂ ಧೇನುವೂ ಋಗ್ಯಜುಃಸಾಮವರ್ಣದವುಗಳಾಗಿದ್ದು ಅವುಗಳ ದಾನದಿಂದ ವೇದತ್ರಯದ ವರ್ಣಗಳನ್ನೂ ಯಜಮಾನನು ಪಡೆಯುವನು.

ಹೀಗೆ ತ್ರೈಧಾತವೀಯೇಷ್ಟಿಯು ವೇದತ್ರಯಸ್ವರೂಪವಾಗಿದೆ.

* * *

# ಅನುವಾಕದ ವಿಶೇಷ ವಿಷಯಗಳು

## ಅ) ಮೀಮಾಂಸಾ

**೧. ಕಾಮ್ಯೇಷ್ಟಿಗಳ ಅನುಷ್ಠಾನದಲ್ಲಿ ಮಧ್ಯದಲ್ಲಿ ಫಲಪ್ರಾಪ್ತಿಯಾದರೆ ಇಷ್ಟಿಯನ್ನು ಅನುಷ್ಠಿಸಬೇಕೇ? ಬೇಡವೇ?**

**'ಚಿತ್ರಯಾ ಯಜೇತ ಪಶುಕಾಮಃ, ಕಾರೀರ್ಯಾ ವೃಷ್ಟಿಕಾಮೋ ಯಜೇತ'** ಎಂಬುದಾಗಿ ಆಯಾ ಕಾಮನೆಗಳ ಪ್ರಾಪ್ತಿಗಾಗಿ ಯಾಗಗಳು ವಿಹಿತವಾಗಿವೆ. ಕರ್ಮಾರಂಭ ವಾದ ಮೇಲೆ ಕರ್ಮಸಮಾಪ್ತಿಗೆ ಮೊದಲೇ ಫಲವು ಒದಗಿ ಕಾಮನೆಯು ಪೂರ್ಣವಾದರೆ ಕರ್ಮಾನುಷ್ಠಾನವನ್ನು ಅಷ್ಟಕ್ಕೇ ನಿಲ್ಲಿಸಬೇಕೇ ? ಅಥವಾ ಮುಗಿಸಬೇಕೇ ? ಇದು ಇಲ್ಲಿನ **ಸಂಶಯ.**

ಯಾವ ಉದ್ದೇಶಕ್ಕಾಗಿ ಅನುಷ್ಠಾನವು ಇದೆಯೋ ಆ ಫಲವೇ ದೊರಕಿದ ಬಳಿಕ ಪುನಃ ಅನುಷ್ಠಾನವನ್ನು ಮುಂದುವರೆಸುವುದರಿಂದ ಪ್ರಯೋಜನವಿಲ್ಲ. ಆದುದರಿಂದ ಕರ್ಮಾನುಷ್ಠಾನವನ್ನು ಅಲ್ಲಿಗೇ ನಿಲ್ಲಿಸಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಕರ್ಮವನ್ನು ಅನುಷ್ಠಿಸುವೆನೆಂದು ಸಂಕಲ್ಪಿಸಿ, ಅನುಷ್ಠಿಸದಿದ್ದರೆ ಅದು ನಿಂದ್ಯವೆನಿಸು ವುದು. ಆ ನಿಂದ್ಯಕರ್ಮಕ್ಕಾಗಿ ಪ್ರಾಯಶ್ಚಿತ್ತವನ್ನು ವಿಧಿಸಲಾಗಿದೆ. ಆದುದರಿಂದ ಮಧ್ಯದಲ್ಲಿ ಫಲಪ್ರಾಪ್ತಿಯಾದರೂ ಕರ್ಮಾನುಷ್ಠಾನವನ್ನು ನಿಲ್ಲಿಸದೆ ಪೂರ್ಣಮಾಡಲೇಬೇಕು. ಇದು ಇಲ್ಲಿನ **ಸಿದ್ಧಾಂತ.**

* * *

## ॥ ದ್ವಾದಶೋಽನುವಾಕಃ ॥

ತ್ವಷ್ಟಾ ಹತಪುತ್ರೋ ವೀಂದ್ರಗ್‍ಂ ಸೋಮಮಾಹರ

ತ್ತಸ್ಮಿನ್ನಿಂದ್ರ ಉಪಹವಮೈಚ್ಛತ ತಂ ನೋಪಾಹ್ವಯತ

ಪುತ್ರಂ ಮೇಽವಧೀರಿತಿ

---

ತ್ವಷ್ಟಾ । ಹತಪುತ್ರ ಇತಿ ಹತ-ಪುತ್ರಃ । ವೀಂದ್ರಮಿತಿ ವಿ-ಇಂದ್ರಮ್ । ಸೋಮಮ್ । ಆ । ಅಹರತ್ । ತಸ್ಮಿನ್ನ್ । ಇಂದ್ರಃ । ಉಪಹವಮಿತ್ಯುಪ-ಹವಮ್ । ಐಚ್ಛತ । ತಮ್ । ನ । ಉಪೇತಿ । ಅಹ್ವಯತ । ಪುತ್ರಮ್ । ಮೇ । ಅವಧೀಃ । ಇತಿ ।

---

ಈ ಹನ್ನೆರಡನೆಯ ಅನುವಾಕದಲ್ಲಿ ತ್ರೈಧಾತವೀಯಪದದ ನಿರ್ವಚನ, ದೇವತಾವಿಧಿ, ದಕ್ಷಿಣಾವಿಧಿಗಳು ಹೇಳಲ್ಪಟ್ಟಿವೆ. ಅದರ ವಿಷಯದಲ್ಲಿ ಉಪಾಖ್ಯಾನವೂ ಇದೆ.

| | |
|---|---|
| ಹತಪುತ್ರಃ ತ್ವಷ್ಟಾ ವೀಂದ್ರಮ್ ಸೋಮಮ್ ಆಹರತ್ | ಪುತ್ರನಾದ ವಿಶ್ವರೂಪನನ್ನು ಇಂದ್ರನು ಸಂಹರಿಸಲಾಗಿ ಮಗನನ್ನು ಕಳೆದುಕೊಂಡ ತ್ವಷ್ಟನು ಇಂದ್ರನಿಲ್ಲದ ಸೋಮಯಾಗವನ್ನು ಅನುಷ್ಠಿಸಿದನು. |
| ತಸ್ಮಿನ್ ಇಂದ್ರಃ ಉಪ ಹವಮ್ ಐಚ್ಛತ | ಇಂದ್ರನೂ ಆ ಯಾಗದಲ್ಲಿ ಆಹ್ವಾನವನ್ನು ಬಯಸಿದನು. |
| ಮೇ ಪುತ್ರಮ್ ಅವಧೀಃ ಇತಿ ತಮ್ ನ ಉಪಾಹ್ವಯತ | 'ನೀನು ನನ್ನ ಮಗನನ್ನು ಕೊಂದಿರುವೆ' ಎಂದು ಹೇಳಿ ತ್ವಷ್ಟನು ಯಾಗಕ್ಕೆ ಇಂದ್ರನನ್ನು ಆಹ್ವಾನಿಸಲಿಲ್ಲ |

---

*ವಿಶ್ವರೂಪನನ್ನು ಇಂದ್ರನು ಸಂಹರಿಸಿದ ಬಳಿಕ ತ್ವಷ್ಟನು ಸೋಮಯಾಗವನ್ನು ಅನುಷ್ಠಿಸಿದನು. ಆ ಯಾಗವನ್ನು ಇಂದ್ರನಿಲ್ಲದೆಯೇ ಅನುಷ್ಠಿಸಬಯಸಿದನು. ಇಂದ್ರನು ತನ್ನನ್ನು ಆಹ್ವಾನಿಸುವಂತೆ ಅಪೇಕ್ಷಿಸಿದರೂ ಅವನು ತನ್ನ ಮಗನನ್ನು ಸಂಹರಿಸಿರುವನೆಂದು ತ್ವಷ್ಟನು ಇಂದ್ರನನ್ನು ಆಮಂತ್ರಿಸಲಿಲ್ಲ.

---

★ ಈ ಉಪಾಖ್ಯಾನವು ಈ ಕಾಂಡದಲ್ಲಿ ಐದನೆಯ ಪ್ರಪಾಠಕದಲ್ಲಿ ಇದೆ.

ಸ ಯಜ್ಞವೇಶಸಂ ಕೃತ್ವಾ ಪ್ರಾಸಹಾ ಸೋಮಮಪಿಬತ್ತಸ್ಯ

ಯದತ್ಯಶಿಷ್ಯತ ತತ್ತ್ವಷ್ಟಾಽಽಹವನೀಯಮುಪ

ಪ್ರಾವರ್ತಯತ್ಸ್ವಾಹೇಂದ್ರಶತ್ರುರ್ವರ್ಧಸ್ವೇತಿ

---

ಸಃ । ಯಜ್ಞವೇಶಸಮಿತಿ ಯಜ್ಞ-ವೇಶಸಮ್ । ಕೃತ್ವಾ । ಪ್ರಾಸಹೇತಿ ಪ್ರ-ಸಹಾ । ಸೋಮಮ್ । ಅಪಿಬತ್ । ತಸ್ಯ । ಯತ್ । ಅತ್ಯಶಿಷ್ಯತೇತ್ಯತಿ - ಅಶಿಷ್ಯತ । ತತ್ । ತ್ವಷ್ಟಾ । ಆಹವನೀಯಮಿತ್ಯಾ- ಹವನೀಯಮ್ । ಪ್ರೇತಿ । ಅವರ್ತಯತ್ । **ಸ್ವಾಹಾ** । **ಇಂದ್ರಶತ್ರುರಿತೀಂದ್ರ-ಶತ್ರುಃ** । **ವರ್ಧಸ್ವ** । ಇತಿ ।

---

| | |
|---|---|
| ಸಃ ಯಜ್ಞವೇಶಸಮ್ ಕೃತ್ವಾ ಪ್ರಾಸಹಾ ಸೋಮಮ್ ಅಪಿಬತ್ | ಆ ಇಂದ್ರನು ಯಜ್ಞವಿಘಾತವನ್ನುಂಟು ಮಾಡಿ ಬಲಾತ್ಕಾರದಿಂದ ಸೋಮರಸವನ್ನು ಕುಡಿದು ಬಿಟ್ಟನು. |
| ತಸ್ಯ ಯತ್ ಅತ್ಯಶಿಷ್ಯತ | ಆ ಸೋಮರಸದ ಉಳಿದ ಭಾಗವು ಯಾವುದುಂಟೋ |
| ತತ್ ತ್ವಷ್ಟಾ ಆಹವನೀಯಮ್ ಉಪ ಪ್ರಾವರ್ತಯತ್ | ಆ ಸೋಮರಸವನ್ನು ತ್ವಷ್ಟನು ಆಹವನೀಯಾಗ್ನಿಯನ್ನು ಪ್ರಜ್ವಲಗೊಳಿಸಿ, ಹೋಮ ಮಾಡಿದನು. |
| ಸ್ವಾಹಾ | ಅಗ್ನಿಯೇ ! ಇದು ನಿನಗೆ ಹುತವಾಗಲಿ. |
| ಇಂದ್ರಶತ್ರುಃ ವರ್ಧಸ್ವ | 'ನೀನು ಇಂದ್ರಶತ್ರುವಾಗಿ ವೃದ್ಧಿಹೊಂದು/ ನಿನ್ನ ಅನುಗ್ರಹದಿಂದ ಜನಿಸಿದವನು ಇಂದ್ರಶತ್ರುವಾಗಿ ವೃದ್ಧಿ ಹೊಂದಲಿ' [ಎಂದು ಪ್ರಾರ್ಥಿಸಿ ಹೋಮವನ್ನು ಮಾಡಿದನು]. |

---

ಆಗ ಇಂದ್ರನು ಯಜ್ಞವಿಘಾತವನ್ನು ಮಾಡಿ ಬಲಾತ್ಕಾರದಿಂದ ಸೋಮರಸವನ್ನು ಕುಡಿದುಬಿಟ್ಟನು. ಆಗ ತ್ವಷ್ಟನು ಇಂದ್ರನು ಕುಡಿದು ಉಳಿದ ಸೋಮರಸದೊಡನೆ

ಸ ಯಾವದೂರ್ಧ್ವಃ ಪರಾವಿಧ್ಯತಿ ತಾವತಿ ಸ್ವಯಮೇವ

ವ್ಯರಮತ ಯದಿ ವಾ [ತಾವತ್ಪ್ರವಣಮ್ (೧) ಆಸೀದ್ಯದಿ]

ತಾವತ್ಪ್ರವಣಮಾಸೀದ್ಯದಿ ವಾ ತಾವದಧ್ಯಗ್ನೇರಾಸೀತ್ಸ

---

**ಸಃ ।** ಯಾವತ್ । ಊರ್ಧ್ವಃ । ಪರಾವಿಧ್ಯತೀತಿ ಪರಾ-ವಿಧ್ಯತಿ । ತಾವತಿ । ಸ್ವಯಮ್ । ಏವ । ವೀತಿ । ಅರಮತ । ಯದಿ । ವಾ । ತಾವತ್ । ಪ್ರವಣಮಿತಿ ಪ್ರ-ವನಮ್ । ಆಸೀತ್ । ಯದಿ । ವಾ । ತಾವತ್ । ಅಧೀತಿ । ಅಗ್ನೇಃ । ಆಸೀತ್ । ಸಃ ।

---

### *ವೃತ್ರನ ಹುಟ್ಟಿನ ವರ್ಣನೆ; ವೃತ್ರಶಬ್ದನಿರ್ವಚನ

| | |
|---|---|
| ಸಃ ಯಾವತ್ ಊರ್ಧ್ವಃ ಪರಾವಿಧ್ಯತಿ ತಾವತಿ ಸ್ವಯಮ್ ಏವ ವ್ಯರಮತ | ಆ ಅಗ್ನಿಯು ಊರ್ಧ್ವಜ್ವಾಲೆಯುಳ್ಳವನಾಗಿ ಯಜಮಾನನ ಕಾರ್ಯಸಿದ್ಧಿಯನ್ನು ಸೂಚಿಸುವಷ್ಟರಲ್ಲಿಯೇ [ಮಂತ್ರದ ಸ್ವರದ ತಪ್ಪಿನಿಂದ*] ಯಜಮಾನನ ಕಾರ್ಯಸಿದ್ಧಿಯಾಗುವುದಿಲ್ಲವೆಂದು ಸೂಚಿಸುವಂತೆ ತಾನಾಗಿಯೇ ಶಾಂತನಾದನು. |
| ಯದಿ ವಾ ತಾವತ್ ಪ್ರವಣಮ್ ಆಸೀತ್ | ಒಂದು ವೇಳೆ ಅಗ್ನಿಯು ಕೆಳಮುಖವಾದ ಜ್ವಾಲೆಯುಳ್ಳವನೋ, |
| ಯದಿ ವಾ ತಾವತ್ ಅಗ್ನೇಃ ಅಧಿ ಆಸೀತ್ | ಅಗ್ನಿಯು ಮೇಲ್ಮುಖವಾಗಿ ಜ್ವಲಿಸಿತೋ [ಇದು ಹೇಗಾದರೂ ಇರಲಿ]. |
| ಸಃ | ಯಜ್ಞದ ಪ್ರಭಾವದಿಂದ ಜನಿಸಿದ ಪುರುಷನು |

---

* ತ್ವಷ್ಟನು ಇಂದ್ರನನ್ನು ಕೊಲ್ಲುವ ಮಗನನ್ನು ಬಯಸಿದ್ದನಷ್ಟೆ. ಅವನು 'ಇಂದ್ರಶತ್ರುಃ' ಎಂಬುದಾಗಿ ಅಂತೋದಾತ್ತ ಶಬ್ದವನ್ನು ಪ್ರಯೋಗಿಸಬೇಕಾಗಿತ್ತು. 'ಇಂದ್ರಸ್ಯ ಶತ್ರುಃ' ಎಂಬುದು ವಿಗ್ರಹವಾಕ್ಯ. ಇಲ್ಲಿ ಶತ್ರು ಶಬ್ದವು ಕ್ರಿಯಾಶಬ್ದ. ಅಂದರೆ ನಾಶ ಮಾಡುವವನು ಎಂದು ಅರ್ಥ. ಇಂದ್ರನನ್ನು ಕೊಲ್ಲುವವನು ಎಂಬ ಅರ್ಥವು ಈ ತತ್ಪುರುಷ ಸಮಾಸಕ್ಕೆ ಹೇಳಬೇಕಾದ ಅಂತೋದಾತ್ತ ಶಬ್ದದಿಂದ ದೊರೆಯುತ್ತಿತ್ತು.

ತ್ವಷ್ಟನು '**ಇಂದ್ರಶತ್ರುಃ**' ಎಂದು ಅದ್ಯುದಾತ್ತ ಶಬ್ದವನ್ನು ಪ್ರಯೋಗಿಸಿದನು. ಇದು ಬಹುವ್ರೀಹಿಸಮಾಸ ಸ್ವರವನ್ನೊಳಗೊಂಡಿದೆ. '**ಇಂದ್ರಃ ಶತ್ರುಃ = ಶಾತಯಿತಾ (ಕೊಲ್ಲುವವನು) ಯಸ್ಯ ಸಃ**' ಎಂಬುದು ವಿಗ್ರಹವಾಕ್ಯ. ಯಾರನ್ನು ಇಂದ್ರನು ಸಂಹರಿಸುವನೋ ಅವನು ಎಂದರ್ಥ ಆಗಿ ವೃತ್ರನು ಜನಿಸಿದರೂ ಬಳಿಕ ಅವನನ್ನು ಇಂದ್ರನನ್ನು ಸಂಹರಿಸಿಬಿಟ್ಟನು. ಇದು ಸ್ವರದೋಷದಿಂದ ಆದ ಅನರ್ಥ.

ಸಂಭವನ್ನಗ್ನೀಷೋಮಾವಭಿ ಸಮಭವತ್ಸ ಇಷುಮಾತ್ರ

ಮಿಷುಮಾತ್ರಂ ವಿಷ್ವಙ್ಙವರ್ಧತ ಸ ಇಮಾನ್ಲೋಕಾನ

ವೃಣೋದ್ಯದಿಮಾನ್ಲೋಕಾನವೃಣೋತ್ತದ್ವೃತ್ರಸ್ಯ ವೃತ್ರತ್ವಂ

---

ಸಂಭವನ್ನಿತಿ ಸಮ್-ಭವನ್ । ಅಗ್ನೀಷೋಮಾವಿತ್ಯಗ್ನೀ - ಸೋಮೌ । ಅಭಿ । ಸಮಿತಿ ।

ಅಭವತ್ । ಸಃ । ಇಷುಮಾತ್ರಮಿಷುಮಾತ್ರಮಿತೀಷುಮಾತ್ರಮ್ - ಇಷುಮಾತ್ರಮ್ ।

ವಿಷ್ವಙ್ । ಅವರ್ಧತ । ಸಃ । ಇಮಾನ್ । ಲೋಕಾನ್ । ಅವೃಣೋತ್ । ಯತ್ ।

ಇಮಾನ್ । ಲೋಕಾನ್ । ಅವೃಣೋತ್ । ತತ್ । ವೃತ್ರಸ್ಯ । ವೃತ್ರತ್ವಮಿತಿ ವೃತ್ರ-ತ್ವಮ್ ।

---

| | |
|---|---|
| ಸಂಭವನ್ ಅಗ್ನೀಷೋಮೌ ಅಭಿ ಸಮ್ ಅಭವತ್ | ಅಗ್ನಿದೇವನನ್ನೂ, ಸೋಮದೇವನನ್ನೂ ನುಂಗಿಬಿಟ್ಟನು. |
| ಸಃ ಇಷುಮಾತ್ರಮ್ ಇಷುಮಾತ್ರಮ್ ವಿಷ್ವಙ್ ಅವರ್ಧತ | ಆ ಪುರುಷನು ಪ್ರತಿದಿನವೂ *ಇಷುಮಾತ್ರ ದಷ್ಟು ದೂರವನ್ನು ಆಕ್ರಮಿಸಿ ಸುತ್ತಲೂ ವೃದ್ಧಿ ಹೊಂದಿದನು. |
| ಸಃ ಇಮಾನ್ ಲೋಕಾನ್ ಅವೃಣೋತ್ | ಆ ಪುರುಷನು ಈ ಮೂರು ಲೋಕಗಳನ್ನೂ ವ್ಯಾಪಿಸಿ ಬೆಳೆದನು. |
| ಯತ್ ಇಮಾನ್ ಲೋಕಾನ್ ಅವೃಣೋತ್ ತತ್ ವೃತ್ರಸ್ಯ ವೃತ್ರತ್ವಮ್ | ಯಾವ ಕಾರಣದಿಂದ ಈ ಮೂರು ಲೋಕ ಗಳನ್ನು ವ್ಯಾಪಿಸಿದನೋ ಆ ಕಾರಣದಿಂದ ವೃತ್ರನೆಂಬ ಅನ್ವರ್ಥವಾದ ಹೆಸರು ಅವನಿಗೆ ಪ್ರಸಿದ್ಧವಾಯಿತು*. |

---

* ಒಂದು ಬಾಣ ಪ್ರಯೋಗ ಮಾಡಿದಾಗ ಎಷ್ಟು ದೂರವನ್ನು ಅದು ಅತಿಕ್ರಮಿಸುತ್ತದೆಯೋ ಅಷ್ಟು ದೂರ.

*ಇತಿಹಾಸ-ಪುರಾಣಗಳಲ್ಲಿ ಬರುವ ವೃತ್ರಾಸುರನ ಕಥೆಗಳಿಗೂ ಈ ಶ್ರುತಿಯೇ ಮೂಲವೆನ್ನಬಹುದು. ವೇದದಲ್ಲಿಯೂ ಬೇರೆಡೆ 'ಇಂದ್ರೋ ವೃತ್ರಮಹನ್' ಎಂದು ಹೇಳಿದೆ. ಅವುಗಳ ಕಥೆಯು ಬೇರೆ ಬೇರೆಯಾಗಿದೆ. ಕಲ್ಪಭೇದದಿಂದ ವ್ಯವಸ್ಥೆ ಎನ್ನಬಹುದು. ಅರ್ಥವಾದಗಳಿಗೆ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವೆನ್ನುವುದು ಪೂರ್ವಮೀಮಾಂಸಕರ ಮತ.

ತಸ್ಮಾದಿಂದ್ರೋಽಬಿಭೇದಪಿ ತ್ವಷ್ಟಾ ತಸ್ಮೈ ತ್ವಷ್ಟಾ ವಜ್ರಮ

ಸಿಂಚತ್ತಪೋ ವೈ ಸ ವಜ್ರ ಆಸೀತ್ತಮುದ್ಯಂತುಂ

ನಾಶಕ್ನೋದಥ ವೈ ತರ್ಹಿ ವಿಷ್ಣುರನ್ಯಾ [ವಿಷ್ಣುಃ (೨) ಅನ್ಯಾ]

---

ತಸ್ಮಾತ್ । ಇಂದ್ರಃ । ಅಬಿಭೇತ್ । ಅಪಿ । ತ್ವಷ್ಟಾ । ತಸ್ಮೈ । ತ್ವಷ್ಟಾ । ವಜ್ರಮ್ । ಅಸಿಂಚತ್ । ತಪಃ । ವೈ । ಸಃ । ವಜ್ರಃ । ಆಸೀತ್ । ತಮ್ । ಉದ್ಯಂತುಮಿತ್ಯುತ್-ಯಂತುಮ್ । ನ । ಅಶಕ್ನೋತ್ । ಅಥ । ವೈ । ತರ್ಹಿ । ವಿಷ್ಣುಃ । ಅನ್ಯಾ ।

---

**ವಜ್ರದ ಉತ್ಪತ್ತಿಯ ವರ್ಣನೆ**

| | |
|---|---|
| ತಸ್ಮಾತ್ ಇಂದ್ರಃ ಅಬಿಭೇತ್ | ನಿತ್ಯವೂ ವೃದ್ಧಿ ಹೊಂದುತ್ತಿರುವ ಈ ವೃತ್ರನಿಂದ ಇಂದ್ರನು ಭಯಪಟ್ಟನು. |
| ತ್ವಷ್ಟಾ ಅಪಿ **ಅಬಿಭೇತ್** | ವೃತ್ರನ ಉತ್ಪತ್ತಿಗೆ ಕಾರಣನಾದ ತ್ವಷ್ಟನೂ ಹೆದರಿದನು. |
| ತಸ್ಮೈ ತ್ವಷ್ಟಾ ವಜ್ರಮ್ ಅಸಿಂಚತ್ | ತ್ವಷ್ಟನು ಆ ಇಂದ್ರನಿಗಾಗಿ ವಜ್ರಾಯುಧವನ್ನು ನಿರ್ಮಿಸಿ, [ಅದಕ್ಕೆ ಅಸ್ತ್ರಶಕ್ತಿಯುಂಟಾಗುವಂತೆ] ನೀರಿನಿಂದ ಪ್ರೋಕ್ಷಿಸಿ ಕೊಟ್ಟನು. |
| ಸಃ ವಜ್ರಃ ತಪಃ ಆಸೀತ್ ವೈ | ಆ ವಜ್ರಾಯುಧವು ತಪೋರೂಪವೇ ಆಗಿದೆ. |
| ತಮ್ ಉದ್ಯಂತುಮ್ ನ ಅಶಕ್ನೋತ್ | ಇಂದ್ರನು ಆ ವಜ್ರಾಯುಧವನ್ನು ಮೇಲಕ್ಕೆ ಎತ್ತುವುದಕ್ಕೇ ಅಸಮರ್ಥನಾದನು. |

**ವಿಷ್ಣುವಿನ ಆವಿರ್ಭಾವ; ಇಂದ್ರನಿಗೆ ಅವನು ಸಾಹಾಯ್ಯವನ್ನೆಸಗಿದ ರೀತಿ**

| | |
|---|---|
| ಅಥ ವೈ ತರ್ಹಿ ವಿಷ್ಣುಃ ಅನ್ಯಾ | ಅನಂತರ ಇನ್ನೊಬ್ಬ ದೇವತೆಯಾದ ಸರ್ವವ್ಯಾಪಕನಾದ ವಿಷ್ಣುವು |

---

ಆಹವನೀಯದ ಬಳಿ ಬಂದು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿ 'ಅಗ್ನಿಯೇ ! ನಿನಗೆ ಇದು ಹುತವಾಗಲಿ, ನೀನು ಇಂದ್ರಶತ್ರುವಾಗಿ ವರ್ಧಿಸು/ನಿನ್ನ ಅನುಗ್ರಹದಿಂದ ಜನಿಸಿದವನು ಇಂದ್ರಶತ್ರುವಾಗಿ ವರ್ಧಿಸಲಿ' ಎಂದು ಪ್ರಾರ್ಥಿಸಿ, ಹೋಮವನ್ನು ಮಾಡಿದನು.

ದೇವತಾಽಽಸೀತ್ಸೋಽಬ್ರವೀದ್ವಿಷ್ಣವೇಹೀದಮಾಹರಿಷ್ಯಾವೋ
ಯೇನಾಯಮಿದಮಿತಿ ಸ ವಿಷ್ಣುಸ್ತ್ರೇಧಾಽಽತ್ಮಾನಂ ವಿನ್ಯಧತ್ತ

---

ದೇವತಾ । ಆಸೀತ್ । ಸಃ । ಅಬ್ರವೀತ್ । ವಿಷ್ಣೋ । ಏತಿ । ಇಹಿ । ಇದಮ್ । ಏತಿ ।
ಹರಿಷ್ಯಾವಃ । ಯೇನ । ಅಯಮ್ । ಇದಮ್ । ಇತಿ । ಸಃ । ವಿಷ್ಣುಃ । ತ್ರೇಧಾ । ಆತ್ಮಾನಮ್ ।
ವಿ । ನೀತಿ । ಅಧತ್ತ ।

---

| | |
|---|---|
| ದೇವತಾ ಆಸೀತ್ | ಇಂದ್ರನ ಎದುರಿನಲ್ಲಿ ಪ್ರತ್ಯಕ್ಷನಾದನು. |
| ಸಃ 'ವಿಷ್ಣೋ ಏಹಿ ಯೇನ ಅಯಮ್ ಇದಮ್, ಇದಮ್ ಆಹರಿಷ್ಯಾವಃ' ಇತಿ ಅಬ್ರವೀತ್ | ಇಂದ್ರನು ವಿಷ್ಣುವಿಗೆ 'ವಿಷ್ಣುವೇ ! ಬಾ ! ಯಾವ ಶಕ್ತಿಯಿಂದ ಈ ವೃತ್ರನು ಈ ವಿಶ್ವವನ್ನೇ (ಆವರಿಸುತ್ತಿದ್ದಾನೆಯೋ) ಆ ಸಾಮರ್ಥ್ಯವನ್ನೇ ಹೋಗಲಾಡಿಸೋಣ' ಎಂದು ಹೇಳಿದನು. |
| ಸಃ ವಿಷ್ಣುಃ ಆತ್ಮಾನಮ್ ತ್ರೇಧಾ ವಿನ್ಯಧತ್ತ | [ವೃತ್ರನ ವೃದ್ಧಿಯನ್ನು ತಡೆಯಲು] ಆ ವಿಷ್ಣುವು ತನ್ನ ಶರೀರವನ್ನು ಮೂರು ಭಾಗವನ್ನಾಗಿ ಮಾಡಿದನು. |

---

ಬಳಿಕ ಕಾರ್ಯಸಿದ್ಧಿಯನ್ನು ಸೂಚಿಸುವಂತೆ ಅಗ್ನಿಯು ಊರ್ಧ್ವಜ್ವಾಲೆಯಿಂದ ಕೂಡಿದವನಾಗಿರುವಷ್ಟರಲ್ಲಿಯೇ ಮಂತ್ರದ ಸ್ವರದೋಷದಿಂದ ಕಾರ್ಯಸಿದ್ಧಿಯಾಗದೆಂದು ಸೂಚಿಸುವಂತೆ ತಾನೇ ಶಾಂತವಾಯಿತು.

ಇದು ಹೇಗಾದರೂ ಇರಲಿ. ಅಗ್ನಿಯಿಂದ ಉತ್ಪನ್ನನಾದ ಪುರುಷನು ಹುಟ್ಟುತ್ತಲೇ ಅಗ್ನಿದೇವ-ಸೋಮದೇವರನ್ನು ನುಂಗಿಬಿಟ್ಟನು. ಆ ಪುರುಷನು ಒಂದು ಬಾಣವನ್ನು ಪ್ರಯೋಗಿಸಿದಾಗ ಅದು ಎಷ್ಟು ದೂರವನ್ನು ಕ್ರಮಿಸುವುದೋ, ಅಷ್ಟು ದೂರವನ್ನು ಪ್ರತಿದಿನವೂ ಆಕ್ರಮಿಸಿ ಬೆಳೆಯುತ್ತಾ ಬಂದನು. ಹೀಗೆ ಲೋಕಗಳನ್ನು ವ್ಯಾಪಿಸುತ್ತಾ ವೃದ್ಧಿ ಹೊಂದಿದ್ದರಿಂದ ಅವನಿಗೆ 'ವೃತ್ರ'ನೆಂದು ಹೆಸರು ಬಂದಿತು.

ಇಂದ್ರನು ಈ ವೃತ್ರಾಸುರನ ಬಳೆವಳಿಕೆಯಿಂದ ಹೆದರಿದನು. ವೃತ್ರನ ಜನನಕ್ಕೆ ಕಾರಣವಾದ ತ್ವಷ್ಟನೂ ಹೆದರಿದನು. ಆಗ ತ್ವಷ್ಟನು ಇಂದ್ರನೊಡನೆ ಮೈತ್ರಿಯನ್ನು ಮಾಡಿಕೊಂಡು

ಪೃಥಿವ್ಯಾಂ ತೃತೀಯಮಂತರಿಕ್ಷೇ ತೃತೀಯಂ ದಿವಿ

ತೃತೀಯಮಭಿಪರ್ಯಾವರ್ತಾದ್ಧ್ಯಬಿಭೇದ್ಯತ್ಪೃಥಿವ್ಯಾಂ

ತೃತೀಯಮಾಸೀತ್ತೇನೇಂದ್ರೋ

---

ಪೃಥಿವ್ಯಾಮ್ । ತೃತೀಯಮ್ । ಅಂತರಿಕ್ಷೇ । ತೃತೀಯಮ್ । ದಿವಿ । ತೃತೀಯಮ್ । ಅಭಿಪರ್ಯಾವರ್ತಾದಿತ್ಯಭಿ-ಪರ್ಯಾವರ್ತಾತ್ । ಹಿ । ಅಬಿಭೇತ್ । **ಯತ್** । ಪೃಥಿವ್ಯಾಮ್ । ತೃತೀಯಮ್ । ಆಸೀತ್ । ತೇನ । ಇಂದ್ರಃ ।

---

| | |
|---|---|
| ತೃತೀಯಮ್ ಪೃಥಿವ್ಯಾಮ್ **[ವಿನ್ಯಧತ್ತ]** | ಮೂರನೆಯ ಒಂದು ಭಾಗವನ್ನು ಭೂಮಿಯಲ್ಲಿ ಇಟ್ಟನು. |
| ತೃತೀಯಮ್ ಅಂತರಿಕ್ಷೇ **[ವಿನ್ಯಧತ್ತ]** | ಮೂರನೆಯ ಒಂದು ಭಾಗವನ್ನು ಅಂತರಿಕ್ಷದಲ್ಲಿ ಇಟ್ಟನು. |
| ತೃತೀಯಮ್ ದಿವಿ **[ವಿನ್ಯಧತ್ತ]** | ಮೂರನೆಯ ಒಂದು ಭಾಗವನ್ನು ದ್ಯುಲೋಕದಲ್ಲಿ ಇಟ್ಟನು. |
| ಅಭಿಪರ್ಯಾವರ್ತಾತ್ ಹಿ ಅಬಿಭೇತ್ | ವೃತ್ರನ ಸರ್ವತೋವೃದ್ಧಿಯಿಂದ ಇಂದ್ರನು ಭೀತನಾಗಿದ್ದನಷ್ಟೆ |

**ವಜ್ರಾಯುಧಪ್ರಹಾರ; ವೃತ್ರನ ಭೀತಿ; ಪ್ರಾರ್ಥನೆ; ಇಂದ್ರನ ಸಮ್ಮತಿ**

| | |
|---|---|
| ಯತ್ ಪೃಥಿವ್ಯಾಮ್ ತೃತೀಯಮ್ ಆಸೀತ್ ತೇನ ಇಂದ್ರಃ | ವಿಷ್ಣುವಿನ ಶರೀರದ ಮೂರನೆಯ ಯಾವ ಭಾಗವು ಭೂಮಿಯಲ್ಲಿ ಇಡಲ್ಪಟ್ಟಿತ್ತೋ ಅದರಿಂದ/ಅದರ ಬಲದಿಂದ ಇಂದ್ರನು |

---

ವಜ್ರಾಯುಧವನ್ನು ನಿರ್ಮಿಸಿ, ಅದಕ್ಕೆ ವಿಶೇಷಶಕ್ತಿಯನ್ನು ಒದಗಿಸಲು ತಪೋರೂಪವಾದ ಜಲದಿಂದ ಪ್ರೋಕ್ಷಿಸಿ, ಇಂದ್ರನಿಗೆ ಕೊಟ್ಟನು. ಹೀಗೆ ವಜ್ರಾಯುಧವು ತಪೋರೂಪವೇ ಆಯಿತು. ಆದರೆ ಇಂದ್ರನು ಆ ವಜ್ರಾಯುಧವನ್ನು ಮೇಲಕ್ಕೆ ಎತ್ತುವುದಕ್ಕೇ ಅಶಕ್ತನಾದನು.

ಬಳಿಕ ಇನ್ನೊಬ್ಬ ದೇವತೆಯಾದ ವಿಷ್ಣುವು ಪ್ರತ್ಯಕ್ಷನಾದನು. ಇಂದ್ರನು ವಿಷ್ಣುವಿಗೆ

ವಜ್ರಮುದಯಚ್ಛದ್ವಿಷ್ಣ್ವನುಸ್ಥಿತಸ್ಸೋಽಬ್ರವೀನ್ಮಾ ಮೇ

ಪ್ರ ಹಾರಸ್ತಿ ವಾ ಇದಮ್ [೨] ಮಯಿ ವೀರ್ಯಂ ತತ್ತೇ

ಪ್ರದಾಸ್ಯಾಮೀತಿ

---

ವಜ್ರಮ್ । ಉದಿತಿ । ಅಯಚ್ಛತ್ । ವಿಷ್ಣ್ವನುಸ್ಥಿತ ಇತಿ ವಿಷ್ಣು-ಅನುಸ್ಥಿತಃ । ಸಃ । ಅಬ್ರವೀತ್ । ಮಾ । ಮೇ । ಪ್ರೇತಿ । ಹಾಃ । ಅಸ್ತಿ । ವೈ । ಇದಮ್ । ಮಯಿ । ವೀರ್ಯಮ್ । ತತ್ । ತೇ । ಪ್ರೇತಿ । ದಾಸ್ಯಾಮಿ । ಇತಿ ।

---

| | |
|---|---|
| ವಿಷ್ಣ್ವನುಸ್ಥಿತಃ ವಜ್ರಮ್ ಉದಯಚ್ಛತ್ | ವಿಷ್ಣುವಿನ ಹಿಂದೆ ನಿಂತು/ವಿಷ್ಣು ಬಲದ ಬೆಂಬಲವನ್ನು ಹೊಂದಿ ವೃತ್ರನನ್ನು ಹೊಡೆಯಲು ವಜ್ರವನ್ನು ಮೇಲೆತ್ತಿದನು. |
| ಸಃ ಮೇ ಮಾ ಪ್ರಹಾಃ | [ಭೀತನಾದ] ಆ ವೃತ್ರನು 'ನನ್ನನ್ನು ವಜ್ರಾಯುಧದಿಂದ ಹೊಡೆಯಬೇಡ. |
| ಮಯಿ ಇದಮ್ ವೀರ್ಯಮ್ ಅಸ್ತಿ ವೈ ತತ್ ತೇ ಪ್ರದಾಸ್ಯಾಮಿ ಇತಿ ಅಬ್ರವೀತ್ | ನನ್ನಲ್ಲಿ ಭೂಮಿಯನ್ನು ಆಕ್ರಮಿಸಬಲ್ಲ ಯಾವ ಶಕ್ತಿಯುಂಟೋ ಅದನ್ನು ನಿನಗೆ ಕೊಡುವೆನು' ಎಂದನು. |

---

'ನೀನು ನನಗೆ ಈ ವೃತ್ರನ ಸಾಮರ್ಥ್ಯವನ್ನು ಹೋಗಲಾಡಿಸುವ ಕಾರ್ಯದಲ್ಲಿ ನೆರವಾಗು' ಎಂದನು. ವಿಷ್ಣುವು ಯಾವ ವೃತ್ರನ ಸರ್ವತೋವೃದ್ಧಿಯಿಂದ ಇಂದ್ರನು ಹೆದರಿದನೋ ಆ ವೃತ್ರನ ವೃದ್ಧಿಯನ್ನು ತಡೆಯಲು ತನ್ನ ಶರೀರವನ್ನು ಮೂರುಭಾಗ ಮಾಡಿ ಭೂಮಿ-ಅಂತರಿಕ್ಷ-ದ್ಯುಲೋಕಗಳಲ್ಲಿ ಇಟ್ಟನು.

ಇಂದ್ರನು ಭೂಮಿಯಲ್ಲಿದ್ದ ವಿಷ್ಣುವಿನ ಮೂರನೆಯ ಭಾಗದ ಬಲದಿಂದ ಕೂಡಿದವನಾಗಿ ವಿಷ್ಣುವಿನ ಹಿಂದೆ ನಿಂತು ವೃತ್ರನನ್ನು ಹೊಡೆಯಲು ವಜ್ರವನ್ನು ಮೇಲೆತ್ತಿದನು. ವೃತ್ರನು ಹೆದರಿ 'ನೀನು ನನ್ನನ್ನು ಹೊಡೆಯಬೇಡ. ಭೂಮಿಯನ್ನು ಆಕ್ರಮಿಸಬಲ್ಲ ನನ್ನ ಶಕ್ತಿಯನ್ನು ಕೊಡುತ್ತೇನೆ'' ಎಂದನು. ಇಂದ್ರನು ಒಪ್ಪಿ ಆ ಶಕ್ತಿಯನ್ನು ತೆಗೆದುಕೊಂಡನು.

ತದಸ್ಮೈ ಪ್ರಾಯಚ್ಛತ್ತತ್ಪ್ರತ್ಯಗೃಹ್ಣಾದಧಾಮೇತಿ ತದ್ವಿಷ್ಣ
ವೇಽತಿ ಪ್ರಾಯಚ್ಛತ್ತದ್ವಿಷ್ಣುಃ ಪ್ರತ್ಯಗೃಹ್ಣಾದಸ್ಮಾಸ್ವಿಂದ್ರ
ಇಂದ್ರಿಯಂ ದಧಾತ್ವಿತಿ

---

ತತ್ । ಅಸ್ಮೈ । ಪ್ರೇತಿ । ಅಯಚ್ಛತ್ । ತತ್ । ಪ್ರತೀತಿ । ಅಗೃಹ್ಣಾತ್ । ಅಧಾಃ । ಮಾ । ಇತಿ । ತತ್ । ವಿಷ್ಣವೇ । ಅತಿ । ಪ್ರೇತಿ । ಅಯಚ್ಛತ್ । ತತ್ । ವಿಷ್ಣುಃ । ಪ್ರತೀತಿ । ಅಗೃಹ್ಣಾತ್ । ಅಸ್ಮಾಸು । ಇಂದ್ರಃ । ಇಂದ್ರಿಯಮ್ । ದಧಾತು । ಇತಿ ।

---

| | |
|---|---|
| ತತ್ ಅಸ್ಮೈ ಪ್ರಾಯಚ್ಛತ್ | [ಹೀಗೆ ಹೇಳಿ] ಆ ಶಕ್ತಿಯನ್ನು ಇಂದ್ರನಿಗೆ ಕೊಟ್ಟನು. |
| ತತ್ ಪ್ರತ್ಯಗೃಹ್ಣಾತ್ | ಇಂದ್ರನು ಆ ಶಕ್ತಿಯನ್ನು ತೆಗೆದುಕೊಂಡನು. |
| ಮಾ ಅಧಾಃ ಇತಿ<br>ತತ್ ವಿಷ್ಣವೇ ಅತಿ<br>ಪ್ರಾಯಚ್ಛತ್ | 'ನೀನು ನನ್ನನ್ನು ಧರಿಸಿದೆ'/ನೀನು ಧರಿಸು ಎಂದು ವಿಷ್ಣುವಿಗೆ ಹೇಳಿ ಅತ್ಯಾದರದಿಂದ ಅವನಿಗೆ ಶಕ್ತಿಯನ್ನು ಅರ್ಪಿಸಿದನು. |
| ಅಸ್ಮಾಸು ಇಂದ್ರಃ<br>ಇಂದ್ರಿಯಂ ದಧಾತು ಇತಿ<br>ತತ್ ವಿಷ್ಣುಃ ಪ್ರತ್ಯಗೃಹ್ಣಾತ್ | 'ನಮ್ಮಲ್ಲಿ ಇಂದ್ರನು ಇಂದ್ರಿಯಶಕ್ತಿಯನ್ನು ತನಗಾಗಿ ಇಟ್ಟಿರಲಿ' ಎಂಬ ಅಭಿಪ್ರಾಯದಿಂದ ವಿಷ್ಣುವು ಅದನ್ನು ತೆಗೆದುಕೊಂಡನು. |

---

ಅನಂತರ 'ನೀನು ನನ್ನನ್ನು ಧರಿಸಿದೆ/ಧರಿಸು' ಎಂದು ಹೇಳಿ ಅತ್ಯಾದರದಿಂದ ವಿಷ್ಣುವಿಗೆ ಅದನ್ನಿತ್ತನು. ವಿಷ್ಣುವು 'ನಮ್ಮಲ್ಲಿ ಇಂದ್ರನು ಇಂದ್ರಿಯಶಕ್ತಿಯನ್ನು ಅವನಿಗಾಗಿಯೇ ಇಟ್ಟಿರಲಿ' ಎಂದುಕೊಂಡು ತೆಗೆದುಕೊಂಡನು.

ಯದಂತರಿಕ್ಷೇ ತೃತೀಯಮಾಸೀತ್ತೇನೇಂದ್ರೋ
ವಜ್ರಮುದಯಚ್ಛದ್ವಿಷ್ಣ್ವನುಸ್ಥಿತಃ ಸೋಽಬ್ರವೀನ್ಮಾ ಮೇ
ಪ್ರ ಹಾರಸ್ತಿ ಇದಂ [೪] ಮಯಿ ವೀರ್ಯಂ ತತ್ತೇ ಪ್ರದಾಸ್ಯಾಮಿತಿ

---

ಯತ್ । ಅಂತರಿಕ್ಷೇ । ತೃತೀಯಮ್ । ಆಸೀತ್ । ತೇನ । ಇಂದ್ರಃ । ವಜ್ರಮ್ । ಉದಿತಿ । ಅಯಚ್ಛತ್ । ವಿಷ್ಣ್ವನುಸ್ಥಿತ ಇತಿ ವಿಷ್ಣು - ಅನುಸ್ಥಿತಃ । ಸಃ । ಅಬ್ರವೀತ್ । ಮಾ । ಮೇ । ಪ್ರೇತಿ । ಹಾಃ । ಅಸ್ತಿ । ವೈ । ಇದಮ್ । ಮಯಿ । ವೀರ್ಯಮ್ । ತತ್ । ತೇ । ಪ್ರೇತಿ । ದಾಸ್ಯಾಮಿ । ಇತಿ

---

**ಎರಡನೆಯ ಬಾರಿ ವಜ್ರಪ್ರಹಾರದ ವೃತ್ತಾಂತ**

| | |
|---|---|
| ಯತ್ ಅಂತರಿಕ್ಷೇ ತೃತೀಯಮ್ ಆಸೀತ್ | ಅಂತರಿಕ್ಷದಲ್ಲಿ ವಿಷ್ಣುವಿಗೆ ಸಂಬಂಧಿಸಿದ ಯಾವ ಮೂರನೆಯ ಭಾಗವುಂಟೋ |
| ತೇನ ವಿಷ್ಣ್ವನುಸ್ಥಿತಃ | ಅದರಿಂದ ಕೂಡಿದವನಾಗಿ ಮತ್ತು ವಿಷ್ಣುವಿನ ಹಿಂದೆ ನಿಂತವನಾಗಿ/ಅವನ ರಕ್ಷಣೆಯನ್ನು ಪಡೆದು |
| ಇಂದ್ರಃ ವಜ್ರಮ್ ಉದಯಚ್ಛತ್ ಸಃ 'ಮಾ ಮೇ ಪ್ರಹಾಃ | ಇಂದ್ರನು ವೃತ್ರನನ್ನು ಹೊಡೆಯಲು ವಜ್ರವನ್ನು ಮೇಲಕ್ಕೆತ್ತಿದನು. ಆ ವೃತ್ರನು 'ನೀನು ನನ್ನನ್ನು ಹೊಡೆಯಬೇಡ. |
| ಇದಮ್ ವೀರ್ಯಮ್ ಮಯಿ ಅಸ್ತಿ ವೈ ತತ್ ತೇ ಪ್ರದಾಸ್ಯಾಮಿ' ಇತಿ ಅಬ್ರವೀತ್ | ನನ್ನಲ್ಲಿ ಅಂತರಿಕ್ಷವನ್ನು ವ್ಯಾಪಿಸಿ ಬೆಳೆಯುವ ಯಾವ ಶಕ್ತಿ ಇದೆಯೋ ಅದನ್ನು ನಿನಗೆ ಕೊಡುವೆನು' ಎಂದನು. |

ಇಂದ್ರನು ಅಂತರಿಕ್ಷದಲ್ಲಿದ್ದ ವಿಷ್ಣುವಿನ ಮೂರನೆಯ ಭಾಗದಿಂದ ಕೂಡಿದವನಾಗಿ ವಿಷ್ಣುವಿನ ಹಿಂದೆ ನಿಂತು ವೃತ್ರನಿಗೆ ಹೊಡೆಯಲು ಹೊರಟು ವೃತ್ರನಿಂದ ಶಕ್ತಿಯನ್ನು ಪಡೆದು

ತದಸ್ಮೈ ಪ್ರಾಯಚ್ಛತ್ತತ್ಪ್ರತ್ಯಗೃಹ್ಣಾದ್ದ್ವಿರ್ಮಾಽಧಾ ಇತಿ

ತದ್ವಿಷ್ಣವೇಽತಿ ಪ್ರಾಯಚ್ಛತ್ತದ್ವಿಷ್ಣುಃ ಪ್ರತ್ಯಗೃಹ್ಣಾದಸ್ಮಾಸ್ವಿಂದ್ರ

ಇಂದ್ರಿಯಂ ದಧಾತ್ವಿತಿ ಯದ್ದಿವಿ ತೃತೀಯ

ಮಾಸೀತ್ತೇನೇಂದ್ರೋ

---

ತತ್ । ಅಸ್ಮೈ । ಪ್ರೇತಿ । ಅಯಚ್ಛತ್ । ತತ್ । ಪ್ರತೀತಿ । ಅಗೃಹ್ಣಾತ್ । ದ್ವಿಃ । ಮಾ । ಅಧಾಃ । ಇತಿ । ತತ್ । ವಿಷ್ಣವೇ । ಅತಿ । ಪ್ರೇತಿ । ಅಯಚ್ಛತ್ । ತತ್ । ವಿಷ್ಣುಃ । ಪ್ರತೀತಿ । ಅಗೃಹ್ಣಾತ್ । ಅಸ್ಮಾಸು । ಇಂದ್ರಃ । ಇಂದ್ರಿಯಮ್ । ದಧಾತು । ಇತಿ । ಯತ್ । ದಿವಿ । ತೃತೀಯಮ್ । ಆಸೀತ್ । ತೇನ । ಇಂದ್ರಃ ।

---

| | |
|---|---|
| ತತ್ ಅಸ್ಮೈ ಪ್ರಾಯಚ್ಛತ್ | ಆ ಶಕ್ತಿಯನ್ನು ಇಂದ್ರನಿಗೆ ಕೊಟ್ಟನು. |
| ತತ್ ಪ್ರತಿ ಅಗೃಹ್ಣಾತ್ | ಇಂದ್ರನು ಅದನ್ನು ತೆಗೆದುಕೊಂಡನು. |
| ದ್ವಿಃ ಮಾ ಅಧಾಃ ಇತಿ<br>ತತ್ ವಿಷ್ಣವೇ ಅತಿ ಪ್ರಾಯಚ್ಛತ್ | ಮೊದಲು ಶಕ್ತಿಯನ್ನು ಕೊಟ್ಟು ನನ್ನನ್ನು ಧರಿಸಿದೆ. ಈಗ ಎರಡನೆಯ ಬಾರಿ ನನ್ನನ್ನು ಧರಿಸು/ನನ್ನನ್ನು ಧರಿಸಿದ್ದೀಯೆ. ಎಂದು ವೃತ್ರನು ಕೊಟ್ಟ ಶಕ್ತಿಯನ್ನು ವಿಷ್ಣುವಿಗೆ ಇತ್ತನು. |
| ತತ್ ವಿಷ್ಣುಃ ಅಸ್ಮಾಸು<br>ಇಂದ್ರಃ ಇಂದ್ರಿಯಮ್ ದಧಾತು<br>ಇತಿ ಪ್ರತಿ ಅಗೃಹ್ಣಾತ್ | ವಿಷ್ಣುವು 'ಇಂದ್ರನು ಈ ಇಂದ್ರಿಯಶಕ್ತಿಯನ್ನು ನಮ್ಮಲ್ಲಿ ತನಗಾಗಿ ಇಟ್ಟಿರಲಿ' ಎಂದು ತೆಗೆದು ಕೊಂಡನು. |

**ವಜ್ರದ ತೃತೀಯಪ್ರಹಾರದ ವಿವರಣೆ**

| | |
|---|---|
| ಯತ್ ದಿವಿ ತೃತೀಯಮ್<br>ಆಸೀತ್ ತೇನ ಇಂದ್ರಃ | ದ್ಯುಲೋಕದಲ್ಲಿ ವಿಷ್ಣುವಿಗೆ ಸಂಬಂಧಿಸಿದ ಯಾವ ಮೂರನೆಯ ಭಾಗವುಂಟೋ ಅದರಿಂದ ಕೂಡಿದ ಇಂದ್ರನು |

ವಜ್ರಮುದಯಚ್ಛದ್ವಿಷ್ಣ್ವನುಸ್ಥಿತಸ್ಸೋಽಬ್ರವೀನ್ಮಾ ಮೇ

ಪ್ರ ಹಾರ್ಯೇನಾಹಮಿದಮಸ್ಮಿ [ಯೇನಾಹಮ್ (೫)

ಇದಮಸ್ಮಿ] ತತ್ತೇ ಪ್ರದಾಸ್ಯಾಮೀತಿ ತ್ವೀ 3 ಇತ್ಯಬ್ರವೀತ್ಸಂಧಾಂ

ತು ಸಂದಧಾವಹೈ ತ್ವಾಮೇವ ಪ್ರವಿಶಾನೀತಿ

---

ವಜ್ರಮ್ । ಉದಿತಿ । ಆಯಚ್ಛತ್ । ವಿಷ್ಣ್ವನುಸ್ಥಿತ ಇತಿ ವಿಷ್ಣು-ಅನುಸ್ಥಿತಃ । ಸಃ । ಅಬ್ರವೀತ್ । ಮಾ । ಮೇ । ಪ್ರೇತಿ । ಹಾಃ । ಯೇನ । ಅಹಮ್ । ಇದಮ್ । ಅಸ್ಮಿ । ತತ್ । ತೇ । ಪ್ರೇತಿ । ದಾಸ್ಯಾಮಿ । ಇತಿ । ತ್ವೀ 3 । ಇತಿ । ಅಬ್ರವೀತ್ । ಸಂಧಾಮಿತಿ ಸಮ್-ಧಾಮ್ । ಸಮಿತಿ । ದಧಾವಹೈ । ತ್ವಾಮ್ । ಏವ । ಪ್ರೇತಿ । ವಿಶಾನಿ । ಇತಿ ।

---

| | |
|---|---|
| ವಜ್ರಮ್ ಉದಯಚ್ಛತ್ ವಿಷ್ಣ್ವನುಸ್ಥಿತಃ | ವಿಷ್ಣುವಿನ ಹಿಂದೆ ನಿಂತು ವೃತ್ರನನ್ನು ಹೊಡೆಯಲು ವಜ್ರವನ್ನೆತ್ತಿದನು. |
| ಸಃ ಮೇ ಮಾ ಪ್ರಹಾಃ ಯೇನ ಅಹಮ್ ಅಸ್ಮಿ ಇದಮ್ | ಭೀತನಾದ ವೃತ್ರನು 'ನನ್ನನ್ನು ಹೊಡೆಯ ಬೇಡ, ಯಾವ ಶಕ್ತಿಯಿಂದ ಈ ವಿಶ್ವವೆಲ್ಲ ವನ್ನೂ ವ್ಯಾಪಿಸುವ ಶಕ್ತಿಯನ್ನು ಹೊಂದಿರು ತ್ತೇನೆಯೋ |
| ತತ್ ತೇ ಪ್ರದಾಸ್ಯಾಮಿ ಇತಿ ಅಬ್ರವೀತ್ | 'ಅದನ್ನು ನಿನಗೆ ಕೊಡುವೆನು' ಎಂದು ಹೇಳಿದನು. |
| ತ್ವೀ 3 ಇತಿ ಅಬ್ರವೀತ್ ತ್ವಾಮ್ ಏವ ಪ್ರವಿಶಾನಿ ಇತಿ ಸುಧಾಮ್ ತು ಸಂದಧಾವಹೈ | 'ಆಗಲಿ' ಎಂದು ಇಂದ್ರನು ಹೇಳಿದನು. ಆದರೆ ಒಂದು ಸಂಧಿಯನ್ನು ಮಾಡಿ ಕೊಳ್ಳೋಣ. ಆ ಸಂಧಿಯಂತೆ ನಾನು ನಿನ್ನನ್ನು ಪ್ರವೇಶಿಸುವೆನು' ಎಂದು ವೃತ್ರನು ಹೇಳಿದನು. |

ಯನ್ಮಾಂ ಪ್ರವಿಶೇಃ ಕಿಂ ಮಾ ಭುಂಜ್ಯಾ ಇತ್ಯಬ್ರವೀತ್ತ್ವಾ

ಮೇವೇಂಧೀಯ ತವ ಭೋಗಾಯ ತ್ವಾಂ ಪ್ರವಿಶೇಯ

ಮಿತ್ಯಬ್ರವೀತ್ತಂ ವೃತ್ರಃ

---

**ಯತ್** । ಮಾಮ್ । ಪ್ರವಿಶೇರಿತಿ ಪ್ರ-ವಿಶೇಃ । ಕಿಮ್ । ಮಾ । ಭುಂಜ್ಯಾಃ । ಇತಿ । ಅಬ್ರವೀತ್ । ತ್ವಾಮ್ । ಏವ । ಇಂಧೀಯ । ತವ । ಭೋಗಾಯ । ತ್ವಾಮ್ । ಪ್ರೇತಿ । ವಿಶೇಯಮ್ । ಇತಿ । ಅಬ್ರವೀತ್ । ತಮ್ । ವೃತ್ರಃ ।

---

**ಈ ಪ್ರಸಂಗದ ಜ್ಞಾನದ ಫಲ**

| | |
|---|---|
| ಯತ್ ಮಾಮ್ ಪ್ರವಿಶೇಃ ಕಿಮ್ ಮಾ ಭುಂಜ್ಯಾಃ ಇತಿ ಅಬ್ರವೀತ್ | ಇಂದ್ರನು 'ಒಂದು ವೇಳೆ ನೀನು ನನ್ನನ್ನು ಪ್ರವೇಶಿಸಿದರೆ ನನ್ನನ್ನೇ ತಿಂದು ಬಿಡುವೆಯಾ ?' ಎಂದು ಪ್ರಶ್ನಿಸಿದನು. |
| ತ್ವಾಮ್ ಏವ ಇಂಧೀಯ ತವ ಭೋಗಾಯ ತ್ವಾಮ್ ಪ್ರವಿಶೇಯಮ್ ಇತಿ ಅಬ್ರವೀತ್ | ವೃತ್ರನು 'ನಿನ್ನನ್ನೇ ಜಠರಾಗ್ನಿದೀಪನದಿಂದ ಪ್ರಕಾಶಗೊಳಿಸುತ್ತೇನೆ (ನಿನ್ನ) ಹಲವು ಬಗೆಯ ಅನ್ನಗಳ ಭೋಗಕ್ಕಾಗಿ ನಿನ್ನನ್ನು ಪ್ರವೇಶಿಸುವೆನು' ಎಂದನು. |
| ತಮ್ ವೃತ್ರಃ | ಇದಕ್ಕೆ ಒಪ್ಪಿದ ಇಂದ್ರನನ್ನು ವೃತ್ರನು |

---

ವಿಷ್ಣುವಿಗೆ ಎರಡನೆಯ ಬಾರಿ ಧರಿಸು/ಧರಿಸಿದೆ ಎಂದು ಹೇಳಿ ಅವನಿಗೆ ಇತ್ತನು. ವಿಷ್ಣುವು ಇಂದ್ರನಿಗಾಗಿ ಇರುವುದಕ್ಕಾಗಿಯೇ ಶಕ್ತಿಯನ್ನು ಪಡೆದನು.

ಇಂದ್ರನು ಮೂರನೆಯ ಬಾರಿ ವಿಷ್ಣುವಿನ ಸಾಹಾಯ್ಯದಿಂದ ವಜ್ರಪ್ರಹಾರ ಮಾಡಲು ತೊಡಗಿದಾಗ ಹೆದರಿದ ವೃತ್ರನು 'ವಿಶ್ವವನ್ನು ವ್ಯಾಪಿಸಬಲ್ಲ ನನ್ನ ಶಕ್ತಿಯೆಲ್ಲವನ್ನೂ ಕೊಡುವೆನು' ಎಂದು ಇಂದ್ರನಿಗೆ ಹೇಳಿದನು. ಇಂದ್ರನು ಅದಕ್ಕೆ ಒಪ್ಪಿದನು. ಆಗ ವೃತ್ರನು 'ಒಂದು ಒಪ್ಪಂದವನ್ನು ಮಾಡಿಕೊಳ್ಳೋಣ. ಅದರಂತೆ ನಾನು ನಿನ್ನಲ್ಲಿ ಪ್ರವೇಶಿಸುವೆನು' ಎಂದು ಸಂಧಿಯ ಪ್ರಸ್ತಾಪವನ್ನು ಮಾಡಿದನು.

ಪ್ರಾವಿಶದುದರಂ ವೈವೃತ್ರಃ ಕ್ಷುತ್ಖಲು ವೈ ಮನುಷ್ಯಸ್ಯ

ಭ್ರಾತೃವ್ಯೋ ಯ [ಯಃ (೬) ಏವಂ] ಏವಂ ವೇದ

ಹಂತಿ ಕ್ಷುಧಂ ಭ್ರಾತೃವ್ಯಂ

---

ಪ್ರೇತಿ । ಅವಿಶತ್ । ಉದರಮ್ । ವೈ । ವೃತ್ರಃ । ಕ್ಷುತ್ । ಖಲು । ವೈ । ಮನುಷ್ಯಸ್ಯ ।

ಭ್ರಾತೃವ್ಯಃ । ಯಃ । ಏವಮ್ । ವೇದ । ಹಂತಿ । ಕ್ಷುಧಮ್ । ಭ್ರಾತೃವ್ಯಮ್ ।

---

| | |
|---|---|
| ಪ್ರಾವಿಶತ್ | ಪ್ರವೇಶಿಸಿದನು. |
| ಉದರಮ್ ವೈ ವೃತ್ರಃ | ಹಲವು ಬಗೆಯ ಅನ್ನಗಳಿಗೆ ಅವಕಾಶ ಮಾಡಿ ಕೊಡುವ ಹೊಟ್ಟೆಯೇ ವೃತ್ರನಷ್ಟೆ*. |
| ಕ್ಷುತ್ ಖಲು ವೈ ಮನುಷ್ಯಸ್ಯ ಭ್ರಾತೃವ್ಯಃ | ಹಸಿವೇ ಮನುಷ್ಯನ ಪ್ರಬಲವಾದ ಶತ್ರುವಷ್ಟೆ |
| ಯಃ ಏವಮ್ ವೇದ ಭ್ರಾತೃವ್ಯಮ್ ಕ್ಷುಧಮ್ ಹಂತಿ | ಯಾವನು ಹೀಗೆ ತಿಳಿದಿರುತ್ತಾನೆಯೋ ಅವನು ಹಗೆಯಾದ ಹಸಿವನ್ನು ಹೋಗಲಾಡಿಸಿಕೊಳ್ಳುತ್ತಾನೆ. |

---

ವೃತ್ರನ ಮಾತಿಗೆ ಇಂದ್ರನು 'ನೀನು ನನ್ನನ್ನು ಪ್ರವೇಶಿಸಿದರೆ ನನ್ನನ್ನೇ ತಿಂದುಬಿಡುವೆಯಾ ?'' ಎಂದು ಪ್ರಶ್ನಿಸಿದನು. ಅದಕ್ಕೆ ವೃತ್ರನು 'ನಿನ್ನನ್ನೇ ಪ್ರಕಾಶಿಸುವಂತೆ ಮಾಡುತ್ತೇನೆ. ಹಲವು ಬಗೆಯ ಅನ್ನಗಳ ಭೋಗಕ್ಕಾಗಿಯೇ ನಿನ್ನನ್ನು ಪ್ರವೇಶಿಸುವೆನು ?' ಎಂದು ಹೇಳಿದನು. ಇಂದ್ರನು ಒಪ್ಪಿದನು. ವೃತ್ರನು ಇಂದ್ರನನ್ನು ಪ್ರವೇಶಿಸಿದನು.

---

* ವೃತ್ರ ಶಬ್ದಕ್ಕೆ ಮೇಘವೆಂಬ ಅರ್ಥವೂ ಇದೆ. ಇಲ್ಲಿ ಹೊಟ್ಟೆ ಎಂಬ ಅರ್ಥದಲ್ಲಿ ಶ್ರುತಿಯು ಹೇಳಿದೆ. 'ವೃಣೋತಿ' ಎಂಬ ಕ್ರಿಯಾಪದದ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ಯೌಗಿಕವಾಗಿ ವ್ಯಾಪಿಸುವ ವಸ್ತುಗಳೆಲ್ಲಕ್ಕೂ ವಾಚಕವಾಗುವುದು.

ತದಸ್ಮೈ ಪ್ರಾಯಚ್ಛತ್ತತ್ಪ್ರತ್ಯಗೃಹ್ಣಾತ್ತ್ರಿರ್ಮಾಽಧಾ ಇತಿ
ತದ್ವಿಷ್ಣವೇಽತಿ ಪ್ರಾಯಚ್ಛತ್ತದ್ವಿಷ್ಣುಃ ಪ್ರತ್ಯಗೃಹ್ಣಾದಸ್ಮಾಸ್ವಿಂದ್ರ
ಇಂದ್ರಿಯಂ ದಧಾತ್ವಿತಿ

---

**ತತ್** । ಅಸ್ಮೈ । ಪ್ರೇತಿ । ಅಯಚ್ಛತ್ । ತತ್ । ಪ್ರತೀತಿ । ಅಗೃಹ್ಣಾತ್ । ತ್ರಿಃ । ಮಾ । ಅಧಾಃ । ಇತಿ । ತತ್ । ವಿಷ್ಣವೇ । ಅತಿ । ಪ್ರೇತಿ । ಅಯಚ್ಛತ್ । ತತ್ । ವಿಷ್ಣುಃ । ಪ್ರತೀತಿ । ಅಗೃಹ್ಣಾತ್ । ಅಸ್ಮಾಸು । ಇಂದ್ರಃ । ಇಂದ್ರಿಯಮ್ । ದಧಾತು । ಇತಿ ।

---

**ಮೂರನೆಯ ಪ್ರಹಾರದ ಉದ್ಯೋಗ; ಅನಂತರದ ಉಪಾಖ್ಯಾನ**

| | |
|---|---|
| ತತ್ ಅಸ್ಮೈ ಪ್ರಾಯಚ್ಛತ್ | [ಹೀಗೆ ಒಪ್ಪಂದ ಮಾಡಿಕೊಂಡ] ವೃತ್ರನು ತನ್ನ ಶಕ್ತಿಯನ್ನು ಇಂದ್ರನಿಗೆ ಕೊಟ್ಟನು. |
| ತತ್ ಪ್ರತ್ಯಗೃಹ್ಣಾತ್ | ಇಂದ್ರನು ತೆಗೆದುಕೊಂಡನು. |
| ತ್ರಿಃ ಮಾ ಅಧಾಃ ಇತಿ ತತ್ ವಿಷ್ಣವೇ ಅತಿ ಪ್ರಾಯಚ್ಛತ್ | ಈಗ ಮೂರನೆಯ ಬಾರಿ ನನಗೆ ನೆರವು ನೀಡಿ ನನ್ನನ್ನು ಧರಿಸಿದೆ/ಮೂರನೆಯ ಬಾರಿಯೂ ಧರಿಸು ಎಂದು ಅತ್ಯಾದರದಿಂದ ಆ ಶಕ್ತಿಯನ್ನು ವಿಷ್ಣುವಿಗೆ ಕೊಟ್ಟನು. |
| ಅಸ್ಮಾಸು ಇಂದ್ರಃ ಇಂದ್ರಿಯಂ ದಧಾತು ಇತಿ ತತ್ ವಿಷ್ಣುಃ ಪ್ರತ್ಯಗೃಹ್ಣಾತ್ | ಇಂದ್ರನು ತನಗಾಗಿ ಈ ಶಕ್ತಿಯನ್ನು ನಮ್ಮಲ್ಲಿ ಇಟ್ಟಿರುತ್ತಾನೆ ಎಂದು ವಿಷ್ಣುವು ಶಕ್ತಿಯನ್ನು ತೆಗೆದುಕೊಂಡನು. |

---

[ಲೋಕವೆಲ್ಲವನ್ನೂ ವ್ಯಾಪಿಸಿರುವ ಹೊಟ್ಟೆಯೇ ವೃತ್ರನಷ್ಟೆ. ಹಸಿವೇ ಮನುಷ್ಯನನ್ನು ಹಿಂಸಿಸುವ ಮುಖ್ಯ ಶತ್ರುವಾಗಿದೆಯಲ್ಲವೇ ? ಹೀಗೆ ತಿಳಿದವನು ಹಸಿವನ್ನು ಹೋಗಲಾಡಿಸಿಕೊಳ್ಳುತ್ತಾನೆ. ಅವನು ಹಸಿವಿನಿಂದ ಬಳಲುವುದೇ ಇಲ್ಲ].

ಯತ್ತ್ರಿಃ ಪ್ರಾಯಚ್ಛತ್ತ್ರಿಃ ಪ್ರತ್ಯಗೃಹ್ಣಾತ್ತತ್ತ್ರಿಧಾತೋಸ್ತ್ರಿಧಾತುತ್ವಂ

ಯದ್ವಿಷ್ಣುರನ್ವತಿಷ್ಠತ ವಿಷ್ಣವೇಽತಿ ಪ್ರಾಯಚ್ಛತ್ತಸ್ಮಾದೈಂದ್ರಾ

ವೈಷ್ಣವಗ್ಂ ಹವಿರ್ಭವತಿ

---

**ಯತ್** । ತ್ರೀ । ಪ್ರೇತಿ । ಅಯಚ್ಛತ್ । ತ್ರಿಃ । ಪ್ರತ್ಯಗೃಹ್ಣಾದಿತಿ ಪ್ರತಿ-ಅಗೃಹ್ಣಾತ್ । ತತ್ । ತ್ರಿಧಾತೋರಿತಿ ತ್ರಿ-ಧಾತೋಃ । ತ್ರಿಧಾತುತ್ವಮಿತಿ ತ್ರಿಧಾತು-ತ್ವಮ್ । ಯತ್ । ವಿಷ್ಣುಃ । ಅನ್ವತಿಷ್ಠತೇತ್ಯನು - ಅತಿಷ್ಠತ । ವಿಷ್ಣವೇ । ಅತಿ । ಪ್ರೇತಿ । ಅಯಚ್ಛತ್ । ತಸ್ಮಾತ್ । ಐಂದ್ರಾವೈಷ್ಣವಮಿತ್ಯೈಂದ್ರಾ-ವೈಷ್ಣವಮ್ । ಹವಿಃ । ಭವತಿ ।

---

**ನಾಮನಿರ್ವಚನ; ದೇವತಾವಿಧಾನ; ದಕ್ಷಿಣಾವಿಶೇಷವಿಧಾನ**

| | |
|---|---|
| ಯತ್ ತ್ರಿಃ ಪ್ರಾಯಚ್ಛತ್ ತ್ರಿಃ ಪ್ರತ್ಯಗೃಹ್ಣಾತ್ | ಯಾವ ಕಾರಣದಿಂದ ವೃತ್ರನು ಮೂರು ಬಾರಿ ಕೊಟ್ಟನೋ ಇಂದ್ರನು ಮೂರು ಬಾರಿ ತೆಗೆದುಕೊಂಡನೋ |
| ತತ್ ತ್ರಿಧಾತೋಃ ತ್ರಿಧಾತುತ್ವಮ್ | ಆ ಕಾರಣದಿಂದ ಮೂರು ಚತುಷ್ಕಪಾಲಗಳಿರುವ ಯಾಗಕ್ಕೆ '**ತ್ರಿಧಾತು**' ಎಂಬ ಹೆಸರು ಯುಕ್ತವಾಗಿದೆ. |
| ಯತ್ ವಿಷ್ಣುಃ ಅನ್ವತಿಷ್ಠತ ವಿಷ್ಣವೇ ಅತಿ ಪ್ರಾಯಚ್ಛತ್ | ಯಾವ ಕಾರಣದಿಂದ ವಿಷ್ಣುವು ಇಂದ್ರನಿಗೆ ಅನುಕೂಲನಾಗಿ ನಿಂತನೋ, ಯಾವ ಕಾರಣದಿಂದ ಇಂದ್ರನು ವೃತ್ರನು ಕೊಟ್ಟ ಶಕ್ತಿಯನ್ನು ವಿಷ್ಣುವಿಗೆ ಆದರದಿಂದ ಕೊಟ್ಟನೋ |
| ತಸ್ಮಾತ್ ಐಂದ್ರಾವೈಷ್ಣವಮ್ ಹವಿಃ ಭವತಿ | ಆ ಕಾರಣದಿಂದ ಒಟ್ಟಾಗಿರುವ ಇಂದ್ರಾವಿಷ್ಣುಗಳಿಗೆ ಹವಿಸ್ಸು ಕೊಡಲ್ಪಡುತ್ತದೆ. |

ಯದ್ವಾ ಇದಂ ಕಿಂ ಚ ತದಸ್ಮೈ ತತ್ಪ್ರಾಯಚ್ಛದೃಚಃ ಸಾಮಾನಿ ಯಜೂಗ್ಂಷಿ ಸಹಸ್ರಂ ವಾ ಅಸ್ಮೈ ತತ್ಪ್ರಾಯಚ್ಛತ್ತಸ್ಮಾತ್ಸಹಸ್ರ ದಕ್ಷಿಣಮ್ ॥೪೨-12॥

**[ಪ್ರವಣಂ ವಿಷ್ಣುರ್ವಾ ಇದಮಿದಮಹಂ ಯೋ ಭವತ್ಯೇಕವಿಗ್ಂಶತಿಶ್ಚ ॥]**

---

ಯತ್ । ವೈ । ಇದಮ್ । ಕಿಮ್ । ಚ । ತತ್ । ಅಸ್ಮೈ । ತತ್ । ಪ್ರೇತಿ । ಅಯಚ್ಛತ್ । ಋಚಃ । ಸಾಮಾನಿ । ಯಜೂಗ್ಂಷಿ । ಸಹಸ್ರಮ್ । ವೈ । ಅಸ್ಮೈ । ತತ್ । ಪ್ರೇತಿ । ಅಯಚ್ಛತ್ । ತಸ್ಮಾತ್ । ಸಹಸ್ರದಕ್ಷಿಣಮಿತಿ ಸಹಸ್ರ - ದಕ್ಷಿಣಮ್ ॥12॥

---

| | |
|---|---|
| ಯತ್ ವೈ ಇದಮ್ ಕಿಮ್ ಚ | ತನ್ನಲ್ಲಿ ಯಾವ ಶಕ್ತಿ ಇದೆಯೋ |
| ತತ್ ಅಸ್ಮೈ ತತ್ ಪ್ರಾಯಚ್ಛತ್ | ಅದೆಲ್ಲವನ್ನೂ ಆಗ ವೃತ್ರನು ಇಂದ್ರನಿಗೆ ಕೊಟ್ಟನು. |
| ಋಚಃ ಸಾಮಾನಿ ಯಜೂಗ್ಂಷಿ | ಆ ಶಕ್ತಿಯು ಋಕ್, ಯಜುಸ್, ಸಾಮ ಎಂಬ ವೇದತ್ರಯರೂಪವೇ ಆಗಿದೆ. |
| ಅಸ್ಮೈ ತತ್ ಸಹಸ್ರಮ್ ವೈ ಪ್ರಾಯಚ್ಛತ್ | 'ಉತ್ತರಂ ಸಹಸ್ರಂ ನಮತ, ಮುಂತಾದ ಅನೇಕ ಫಲಗಳುಳ್ಳ ವೇದತ್ರಯರೂಪವಾದ ಶಕ್ತಿಯನ್ನು ಈ ಇಂದ್ರನಿಗೆ ಆಗ ವೃತ್ರನು ಕೊಟ್ಟನು. |
| ತಸ್ಮಾತ್ ಸಹಸ್ರದಕ್ಷಿಣಮ್ | ಆದುದರಿಂದ ಹಿಂದೆ ಹೇಳಿರುವ **'ಹಿರಣ್ಯಂ ದದಾತಿ'** ಎಂಬ ದಕ್ಷಿಣೆಯು ಸಹಸ್ರಸಂಖ್ಯಾಕ ಹಿರಣ್ಯರೂಪವಾಗಿದೆ. |

---

ಹೀಗೆ ವೃತ್ರನು ಪ್ರವೇಶಿಸಿದ ನಂತರ, ಮೂರನೆಯ ಬಾರಿಯೂ ಆ ಶಕ್ತಿಯನ್ನು ಆತ್ಮಾದರದಿಂದ ಇಂದ್ರನು ವಿಷ್ಣುವಿಗೆ ಇತ್ತನು. ವಿಷ್ಣುವು ತನಗಾಗಿ ಈ ಶಕ್ತಿಯನ್ನು

ಇಟ್ಟಿರುತ್ತಾನೆಂದು ತಿಳಿದು ಸ್ವೀಕರಿಸಿದನು.

ವೃತ್ರನು ಮೂರು ಬಾರಿ ತನ್ನ ತ್ರಿಲೋಕವ್ಯಾಪಕಶಕ್ತಿಯನ್ನು ಕೊಟ್ಟನು. ಇಂದ್ರನು ಮೂರು ಬಾರಿ ತೆಗೆದುಕೊಂಡನು. ಆದುದರಿಂದ ಮೂರು ಚತುಷ್ಕಪಾಲಗಳು ಸೇರಿ ದ್ವಾದಶಕಪಾಲ ಪುರೋಡಾಶ ದ್ರವ್ಯವುಳ್ಳ ಈ ಯಾಗಕ್ಕೆ '**ತ್ರಿಧಾತು**'ವೆಂಬ ಹೆಸರಿದೆ.

ವಿಷ್ಣುವು ಇಂದ್ರನಿಗಾಗಿ ತನ್ನ ರೂಪವನ್ನು ಮೂರು ಲೋಕಗಳಲ್ಲಿಯೂ ಸ್ಥಾಪಿಸಿ, ಇಂದ್ರನಿಗೆ ಸಹಾಯನಾಗಿ ನಿಂತನು. ಇಂದ್ರನು ವೃತ್ರನು ಕೊಟ್ಟ ಶಕ್ತಿಯನ್ನು ಆದರದಿಂದ ವಿಷ್ಣುವಿಗೆ ಕೊಟ್ಟನು. ವಿಷ್ಣುವು ಇಂದ್ರನಿಗಾಗಿ ಆ ಶಕ್ತಿಯನ್ನು ತನ್ನಲ್ಲಿ ಇಟ್ಟುಕೊಂಡನು. ಆದುದರಿಂದ ಇಂದ್ರಾವಿಷ್ಣುಗಳು ಒಟ್ಟಾಗಿ ಈ ಯಾಗದ ದೇವತೆಗಳಾಗಿದ್ದಾರೆ. ವೃತ್ರನು ಋಗ್ಯಜುಸ್ಸಾಮರೂಪವಾದ ಶಕ್ತಿಯನ್ನು ಇಂದ್ರನಿಗೆ ಕೊಟ್ಟನು. ಸಹಸ್ರಫಲಗಳನ್ನು ನೀಡುವ ಈ ಯಾಗಕ್ಕೆ ಸಹಸ್ರಹಿರಣ್ಯದಕ್ಷಿಣೆಯು ಉಕ್ತವಾದುದು ಯುಕ್ತವಾಗಿಯೇ ಇದೆ.



★ ★ ★

## ॥ ತ್ರಯೋದಶೋಽನುವಾಕಃ ॥

ದೇವಾ ವೈ ರಾಜನ್ಯಾಜ್ಜಾಯಮಾನಾದಬಿಭಯುಸ್ತಮಂ

ತರೇವ ಸಂತಂ ದಾಮ್ನಾಽಪೌಂಭನ್ಥ್ಸ

---

**ದೇವಾಃ** । ವೈ । ರಾಜನ್ಯಾತ್ । ಜಾಯಮಾನಾತ್ । ಅಬಿಭಯುಃ । ತಮ್ । ಅಂತಃ । ಏವ । ಸಂತಮ್ । ದಾಮ್ನಾ । ಅಪೇತಿ । ಔಂಭನ್ । ಸಃ ।

---

ಹಿಂದಿನ ಹನ್ನೆರಡನೆಯ ಅನುವಾಕದಲ್ಲಿ ತ್ರೈಧಾತವೀಯ ದೇವತಾವಿಧಿಯೂ, ದಕ್ಷಿಣಾ ವಿಶೇಷವಿಧಿಯೂ ಉಪಾಖ್ಯಾನದೊಡನೆ ಹೇಳಲ್ಪಟ್ಟಿತು.

ಈ ಹದಿಮೂರನೆಯ ಅನುವಾಕದಲ್ಲಿ ಐಂದ್ರಾಬಾರ್ಹಸ್ಪತ್ಯಯಾಗವು ಉಪಾಖ್ಯಾನದೊಡನೆ ಹೇಳಲ್ಪಟ್ಟಿದೆ.

---

| | |
|---|---|
| ದೇವಾಃ ವೈ ಜಾಯಮಾನಾತ್ | ದೇವತೆಗಳಾದರೋ ಹುಟ್ಟುತ್ತಿರುವ |
| ರಾಜನ್ಯಾತ್ | ಕ್ಷತ್ರಿಯನಿಂದ |
| ಅಬಿಭಯುಃ | ಹೆದರಿದರು. |
| ಅಂತಃ ಏವ ಸಂತಮ್ | ಅವನು ಗರ್ಭದಲ್ಲಿ ಇರುವಾಗಲೇ |
| ತಮ್ | ಅವನನ್ನು |
| ದಾಮ್ನಾ ಅಪೌಂಭನ್ | ಶಕ್ತಿಪ್ರತಿಬಂಧವೆಂಬ ಹಗ್ಗದಿಂದ ಕಟ್ಟಿ ಹಾಕಿ |
| ಯತ್ ರಾಜನ್ಯಃ ಸಃ | ದರು. ಕ್ಷತ್ರಿಯನೆಂಬುವನು ಯಾವನುಂಟೋ |

---

ದೇವತೆಗಳಾದರೋ ಶಕ್ತಿಸಂಪನ್ನನಾದ ಕ್ಷತ್ರಿಯನು ತಮ್ಮನ್ನೂ ಸೋಲಿಸಿಯಾನು ಎಂದು ಭಯಪಟ್ಟರು. ಅವನು ಗರ್ಭದಲ್ಲಿ ಇರುವಾಗಲೇ ಅವರು ಆತನ ಶಕ್ತಿಯನ್ನು ಪ್ರತಿಬಂಧಿಸಿ, ಅವನು ಶಕ್ತಿಹೀನನಾಗಿಯೇ ಜನಿಸುವಂತೆ ಮಾಡಿದರು.

ವಾ ಏಷೋಽಪೋಬ್ಧೋ ಜಾಯತೇ ಯದ್ರಾಜನ್ಯೋ

ಯದ್ವಾ ಏಷೋಽನಪೋಬ್ಧೋ ಜಾಯೇತ ವೃತ್ರಾನ್ಘ್ನಗ್ಂಶ್ಚ

ರೇದ್ಯಂ ಕಾಮಯೇತ ರಾಜನ್ಯಮನಪೋಬ್ಧೋ ಜಾಯೇತ

---

ವೈ । ಏಷಃ । ಅಪೋಬ್ಧ ಇತ್ಯಪ-ಉಬ್ಧಃ । ಜಾಯತೇ । ಯತ್ । ರಾಜನ್ಯಃ । ಯತ್ । ವೈ ।
ಏಷಃ । ಅನಪೋಬ್ಧ ಇತ್ಯನಪ - ಉಬ್ಧಃ । ಜಾಯೇತ । ವೃತ್ರಾನ್ । ಘ್ನನ್ । ಚರೇತ್ ।
**ಯಮ್** । ಕಾಮಯೇತ । ರಾಜನ್ಯಮ್ । ಅನಪೋಬ್ಧ ಇತ್ಯನಪ-ಉಬ್ಧಃ । ಜಾಯೇತ ।

---

| | |
|---|---|
| ಏಷಃ ವೈ ಅಪೋಬ್ಧಃ ಜಾಯತೇ | ಅವನು ಶಕ್ತಿಪ್ರತಿಬಂಧವುಳ್ಳವನಾಗಿಯೇ ಜನಿಸುತ್ತಾನೆ. |
| ಯತ್ ಏಷಃ ವೈ ಅನಪೋಬ್ಧಃ ಜಾಯೇತ | ಈ ಕ್ಷತ್ರಿಯನು ಶಕ್ತಿ ಪ್ರತಿಬಂಧವಿಲ್ಲದವನಾಗಿ, ಸಂಪೂರ್ಣಶಕ್ತಿಯುತನಾಗಿ ಹುಟ್ಟಿದರೆ, |
| ವೃತ್ರಾನ್ ಘ್ನನ್ ಚರೇತ್ | ರಾಜ್ಯವನ್ನು ಮುತ್ತುವ ಶತ್ರುಗಳನ್ನು ಕೊಲ್ಲುತ್ತಾ ಭೂಮಿಯಲ್ಲಿ ಸಂಚರಿಸಬಲ್ಲವನಾಗುತ್ತಾನೆ. |

**ರಾಜನಿಗೆ ಐಂದ್ರಾಬಾರ್ಹಸ್ಪತ್ಯಯಾಗವಿಧಿ.**

| | |
|---|---|
| ಯಮ್ ರಾಜನ್ಯಮ್ ಅನಪೋಬ್ಧಃ ಜಾಯೇತ | ಅಧ್ವರ್ಯುವು ಯಾವ ರಾಜನನ್ನು ಉದ್ದೇಶಿಸಿ 'ಈತನು ಶಕ್ತಿ ಸಂಪನ್ನನಾಗಿ ಜನಿಸಲಿ, |

---

ಒಂದು ವೇಳೆ ರಾಜನು ಶಕ್ತಿಸಂಪನ್ನನಾಗಿಯೇ ಜನಿಸುವಂತೆ ಆದರೆ ಅವನು ಶತ್ರುಗಳನ್ನು ಸಂಹರಿಸುತ್ತಾ ಭೂಮಿಯಲ್ಲಿ ಸಂಚರಿಸಬಲ್ಲನು.

ಯಾವ ರಾಜನು ಈ ಯಾಗದಿಂದ ಶಕ್ತಿಸಂಪನ್ನನಾಗಿ ಜನಿಸಿ, ಶತ್ರುಗಳನ್ನು

ವೃತ್ರಾನ್ಘ್ನಗ್ಂಶ್ಚರೇದಿತಿ ತಸ್ಮಾ ಏತಮೈಂದ್ರಾಬಾರ್ಹಸ್ಪತ್ಯಂ

ಚರುಂ ನಿರ್ವಪೇದೈಂದ್ರೋ ವೈ ರಾಜನ್ಯೋ

ಬ್ರಹ್ಮ ಬೃಹಸ್ಪತಿರ್ಬ್ರಹ್ಮಣೈವೈನಂ

---

ವೃತ್ರಾನ್ । ಘ್ನನ್ । ಚರೇತ್ । ಇತಿ । ತಸ್ಮೈ । ಏತಮ್ । ಐಂದ್ರಾಬಾರ್ಹಸ್ಪತ್ಯಮಿತ್ಯೈಂದ್ರಾ-ಬಾರ್ಹಸ್ಪತ್ಯಮ್ । ಚರುಮ್ । ನಿರಿತಿ । ವಪೇತ್ । ಐಂದ್ರಃ । ವೈ । ರಾಜನ್ಯಃ । ಬ್ರಹ್ಮ । ಬೃಹಸ್ಪತಿಃ । ಬ್ರಹ್ಮಣಾ । ಏವ । ಏನಮ್ ।

---

| | |
|---|---|
| ವೃತ್ರಾನ್ ಘ್ನನ್ ಚರೇತ್ ಇತಿ ಕಾಮಯೇತ | ಶತ್ರುಗಳನ್ನು ಸಂಹರಿಸುತ್ತಾ ಸಂಚರಿಸಲಿ' ಎಂದು ಬಯಸುವನೋ |
| ತಸ್ಮೈ ಏತಮ್ ಐಂದ್ರಾ ಬಾರ್ಹಸ್ಪತ್ಯಮ್ ಚರುಮ್ ನಿರ್ವಪೇತ್ | ಅಂತಹ ಯಜಮಾನನಿಗಾಗಿ* ಇಂದ್ರಾ ಬೃಹಸ್ಪತಿದೇವತಾಕವಾದ ಚರುಯಾಗವನ್ನು ಮಾಡಬೇಕು. |

**ಫಲಪ್ರಾಪ್ತಿಯ ವಿವರಣೆ; ದಕ್ಷಿಣಾವಿಶೇಷವಿಧಾನ**

| | |
|---|---|
| ರಾಜನ್ಯಃ ಐಂದ್ರಃ ವೈ | *ಕ್ಷತ್ರಿಯನು ಇಂದ್ರಸಂಬಂಧಿಯಷ್ಟೆ. |
| ಬ್ರಹ್ಮ ಬೃಹಸ್ಪತಿಃ ಬ್ರಹ್ಮಣಾ ಏವ ಏನಮ್ | *ಬೃಹಸ್ಪತಿಯು ಬ್ರಾಹ್ಮಣನು. ಬ್ರಹ್ಮ ಸಾಮರ್ಥ್ಯದಿಂದ ಈ ಕ್ಷತ್ರಿಯನನ್ನು |

---

* ಯಜಮಾನನಿಗಾಗಿ ಅಧ್ವರ್ಯುವು ಯಾಗವನ್ನು ಅನುಷ್ಠಿಸಬೇಕು ಎಂದು ಶಬ್ದಾರ್ಥವಾದರೂ, ಯಾಗವು ಯಜಮಾನನಿಗೆ ಸಂಬಂಧಿಸಿದುದರಿಂದ ಯಾವ ಕ್ಷತ್ರಿಯನು ಶಕ್ತಿಸಂಪನ್ನನಾಗಿ ಶತ್ರುಗಳನ್ನು ಗೆಲ್ಲಲು ಬಯಸುವನೋ ಅವನು ಈ ಯಾಗವನ್ನು ಅನುಷ್ಠಿಸಬೇಕು ಎಂದು ತಾತ್ಪರ್ಯಾರ್ಥ.
* 'ಯಾನ್ಯೇತಾನಿ ದೇವತ್ರಾ ಕ್ಷತ್ರಾಣೀಂದ್ರಃ ......' ಎಂದು ಬೃಹದಾರಣ್ಯಕೋಪನಿಷತ್ತಿನಲ್ಲಿದೆ. ಇಂದ್ರ, ವರುಣ, ಸೋಮ ಮತ್ತು ರುದ್ರರು ರಾಜರೆನಿಸಿ, ಕ್ಷತ್ರಿಯರೆಂದು ಅದರ ಅರ್ಥವಿದೆ.
* 'ಬ್ರಹ್ಮ ವೈ ದೇವಾನಾಂ ಬೃಹಸ್ಪತಿಃ' ಎಂದು ಶ್ರುತಿಯಲ್ಲಿ ಅನೇಕ ಸ್ಥಳಗಳಲ್ಲಿ ಇದೆ.

ದಾಮ್ನೋಽಪೋಂಭನಾನ್ಮುಂಚತಿ ಹಿರಣ್ಮಯಂ ದಾಮ ದಕ್ಷಿಣಾ ಸಾಕ್ಷಾದೇವೈನಂ ದಾಮ್ನೋಽಪೋಂಭನಾನ್ಮುಂಚತಿ ||೪೩-13||

[ಏನಂ ದ್ವಾದಶ ಚ ||]

---

ದಾಮ್ನಃ । ಅಪೋಂಭನಾದಿತ್ಯಪ-ಉಂಭನಾತ್ । ಮುಂಚತಿ । ಹಿರಣ್ಮಯಮ್ । ದಾಮ । ದಕ್ಷಿಣಾ । ಸಾಕ್ಷಾದಿತಿ ಸ-ಅಕ್ಷಾತ್ । ಏವ । ಏನಮ್ । ದಾಮ್ನಃ । ಅಪೋಂಭನಾದಿತ್ಯಪ-ಉಂಭನಾತ್ । ಮುಂಚತಿ ||13||

---

| | |
|---|---|
| ದಾಮ್ನಃ ಅಪೋಂಭನಾತ್ ಮುಂಚತಿ | ದೇವತೆಗಳ ಶಕ್ತಿ ಪ್ರತಿಬಂಧರೂಪವಾದ ಪಾಶದಿಂದ ಅಧ್ವರ್ಯುವು ಬಿಡಿಸುತ್ತಾನೆ. |
| ಹಿರಣ್ಮಯಮ್ ದಾಮ ದಕ್ಷಿಣಾ | ಚಿನ್ನದ ಸರಪಳಿಯು ಈ ಯಾಗದ ದಕ್ಷಿಣೆಯಾಗಿದೆ. |
| ಸಾಕ್ಷಾತ್ ಏವ ಅಪೋಂಭನಾತ್ ದಾಮ್ನಃ ಏನಮ್ ಮುಂಚತಿ | [ಯಾಗಕ್ಕೆ ಅನುರೂಪವಾದ ಅದರಿಂದ] ದೇವತೆಗಳ ಶಕ್ತಿ ಪ್ರತಿಬಂಧರೂಪವಾದ ಹಗ್ಗದ ಕಟ್ಟಿನಿಂದ ಈ ಯಜಮಾನನನ್ನು ಅಧ್ವರ್ಯುವು ನೇರವಾಗಿ ಬಿಡಿಸುತ್ತಾನೆ. |

---

ಜಯಿಸಬೇಕೆಂದು ಅಧ್ವರ್ಯುವು ಬಯಸುವನೋ, ಆ ರಾಜನಿಗಾಗಿ ಅಧ್ವರ್ಯುವು ಇಂದ್ರಾಬೃಹಸ್ಪತಿ ದೇವತಾಕವಾಗಿರುವ ಚರುವು ಹವಿಸ್ಸಾಗಿರುವ ಈ ಯಾಗವನ್ನು ಅನುಷ್ಠಿಸಬೇಕು★. ಆ ರಾಜನು ಈ ಯಾಗವನ್ನು ಅನುಷ್ಠಿಸಬೇಕೆಂಬುದು ಅರ್ಥ.

---

★ ಶ್ರುತಿಯಲ್ಲಿ 'ನಿರ್ವಪೇತ್' ಎಂದು ಹೇಳಿದೆ. 'ನಿರ್ವಪೇತ್', 'ಆಲಭೇತ', 'ಆಸತೇ' ಮೊದಲಾದ ಶಬ್ದಗಳಿಗೆ 'ಯಾಗ ಮಾಡಬೇಕು' ಎಂದು ಲಾಕ್ಷಣಿಕ ಅರ್ಥ ಎಂದು ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಹೇಳಿದೆ.

ದೇವತೆಗಳಲ್ಲಿ ಇಂದ್ರನು ಕ್ಷತ್ರಿಯನು. ಬೃಹಸ್ಪತಿಯು ಬ್ರಾಹ್ಮಣನು. ಈ ಇಂದ್ರ, ಬೃಹಸ್ಪತಿ ದೇವತೆಗಳ ಯಾಗದಿಂದ ಇಂದ್ರ ಹಾಗೂ ಬೃಹಸ್ಪತಿಗಳ ಅನುಗ್ರಹವು ಒದಗುವುದು. ಆ ಸಾಮರ್ಥ್ಯದಿಂದ ಕ್ಷತ್ರಿಯನಾದ ರಾಜನನ್ನು ದೇವತೆಗಳ ಪಾಶದಿಂದ ಬಿಡಿಸಿದಂತಾಗುತ್ತದೆ.

ಈ ಯಾಗಕ್ಕೆ ಅನುರೂಪವಾದ ಚಿನ್ನದ ಸರಪಳಿಯು ದಕ್ಷಿಣೆಯಾಗಿದೆ. ಇದರಿಂದ ಯಜಮಾನನನ್ನು ನೇರವಾಗಿಯೇ ದೇವತೆಗಳ ಕಟ್ಟಿನಿಂದ ಬಿಡುಗಡೆ ಮಾಡಿದಂತಾಗುತ್ತದೆ. ಯಜಮಾನನು ದೇವತೆಗಳ ಅನುಗ್ರಹದಿಂದ ಶಕ್ತಿ ಸಂಪನ್ನನಾಗಿ ಶತ್ರುಗಳನ್ನು ಗೆಲ್ಲುತ್ತಾನೆ.

★ ★ ★



## || ಚತುರ್ದಶೋಽನುವಾಕಃ ||

# ನವೋನವೋ ಭವತಿ ಜಾಯಮಾನೋಽಹ್ನಾಂ

# ಕೇತುರುಷಸಾಮೇತ್ಯಗ್ರೇ ।

**||ವ್ಯೆ||** **ನವೋನವ ಇತಿ ನವಃ-ನವಃ । ಭವತಿ ।** ಜಾಯಮಾನಃ । ಅಹ್ನಾಮ್ । ಕೇತುಃ । ಉಷಸಾಮ್ । ಏತಿ । ಅಗ್ರೇ ||

ಹದಿಮೂರನೆಯ ಅನುವಾಕದಲ್ಲಿ ಶಕ್ತಿಪ್ರತಿಬಂಧವನ್ನು ಹೋಗಲಾಡಿಸುವ ಐಂದ್ರಾಬಾರ್ಹಸ್ಪತ್ಯಚರುಯಾಗವು ಹೇಳಲ್ಪಟ್ಟಿದೆ. ಕೊನೆಯದಾದ ಈ ಹದಿನಾಲ್ಕನೆಯ ಅನುವಾಕದಲ್ಲಿ ಕಾಮ್ಯೇಷ್ಟಿಯ ಯಾಜ್ಯಾ – ಪುರೋನುವಾಕ್ಯಗಳು ಹೇಳಲ್ಪಟ್ಟಿವೆ. ಈ ಅನುವಾಕವು ವೈಶ್ವದೇವಕಾಂಡಕ್ಕೆ ಸೇರಿದೆ.

| ಮಂತ್ರ | ವಿನಿಯೋಗ |
| --- | --- |
| **ನವೋನವೋ ...ಆಯುಃ ||** | ಪಾಪ/ ರೋಗಪರಿಹಾರಕವಾದ ಆದಿತ್ಯ ಚರುಯಾಗದ ಪುರೋನುವಾಕ್ಯೆ |

**ಚಂದ್ರಮಾಃ** = ಚಂದ್ರನ ಪ್ರಕಾಶಕ್ಕೆ ಕಾರಣಭೂತನಾದ ಆದಿತ್ಯನು;* **ಜಾಯಮಾನಃ** = (ನಿತ್ಯವೂ) ಹುಟ್ಟುವವನಾಗಿ; **ನವೋನವಃ ಭವತಿ** = ಹೊಸ ಹೊಸಬನಾಗಿಯೇ ಹುಟ್ಟುತ್ತಾನೆ; **ಅಹ್ನಾಮ್ ಕೇತುಃ** = ಹಗಲನ್ನು ತಿಳಿಸಿಕೊಡತಕ್ಕವನು; **ಉಷಸಾಮ್ ಅಗ್ರೇ ಏತಿ** = ಉಷಃಕಾಲದ ಅನಂತರ ಹುಟ್ಟುತ್ತಾನೆ.

ಚಂದ್ರನ ಪ್ರಕಾಶಕ್ಕೆ ಕಾರಣನಾದ ಸೂರ್ಯನನ್ನೇ ಇಲ್ಲಿ ಚಂದ್ರನ ಅಭೇದದಿಂದ ಸ್ತುತಿಸಲಾಗಿದೆ. ಸೂರ್ಯನು ನಿತ್ಯವು ಹೊಸ ಹೊಸಬನಾಗಿಯೇ ಹುಟ್ಟುತ್ತಾನೆ. ಚಂದ್ರನಿಗೆ ನಿತ್ಯವೂ ಕಲೆಗಳ ಹಾನಿ–ವೃದ್ಧಿಗಳು ಇರುವುದರಿಂದ ಹೊಸತನ. ಸೂರ್ಯನಿಗೆ ಸ್ವರೂಪದಲ್ಲಿ

★ ಸೂರ್ಯಕಿರಣಗಳೇ ಚಂದ್ರನನ್ನು ಪ್ರವೇಶಿಸಿ, ಚಂದ್ರನಿಗೆ ಕಾಂತಿಯನ್ನು ಕೊಡುತ್ತವೆ. ಆದುದರಿಂದ ಇಲ್ಲಿ ಚಂದ್ರನ ಅಭೇದದಿಂದ ಸೂರ್ಯನು ವರ್ಣಿಸಲ್ಪಟ್ಟಿದ್ದಾನೆ.

**ಭಾಗಂ ದೇವೇಭ್ಯೋ ವಿದಧಾತ್ಯಾಯನ್ಪ್ರ ಚಂದ್ರಮಾಸ್ತಿರತಿ ದೀರ್ಘಮಾಯುಃ ॥**

---

ಭಾಗಮ್ । ದೇವೇಭ್ಯಃ । ವೀತಿ । ದಧಾತಿ । ಆಯನ್ನಿತ್ಯಾ-ಯನ್ । ಪ್ರೇತಿ । ಚಂದ್ರಮಾಃ । ತಿರತಿ । ದೀರ್ಘಮ್ । ಆಯುಃ ॥

---

**ಆಯನ್** = ಬರುತ್ತಾ; **ದೇವೇಭ್ಯಃ** = ಅಗ್ನಿಹೋತ್ರಾದಿಕರ್ಮಗಳ ದೇವತೆಗಳಿಗೆ; **ಭಾಗವ್ ವಿದಧಾತಿ** = ಹವಿರ್ಭಾಗಗಳನ್ನು ಕೊಡಿಸಿಕೊಡುತ್ತಾನೆ; [ಇಂತಹ] **ಚಂದ್ರಮಾಃ** = ಚಂದ್ರಾಭಿನ್ನವಾದ ಸೂರ್ಯನು; **ದೀರ್ಘಮ್ ಆಯುಃ** = [ರೋಗವನ್ನು ಪರಿಹರಿಸಿ] ದೀರ್ಘಾಯಸ್ಸನ್ನು ಯಜಮಾನನಿಗೆ; **ಪ್ರ ತಿರತಿ** = ಉಂಟುಮಾಡಲಿ.

---

ಹಾನಿ–ವೃದ್ಧಿಗಳು ಇಲ್ಲದಿದ್ದರೂ ದಕ್ಷಿಣಾಯನ – ಉತ್ತರಾಯಣಗಳಲ್ಲಿ ಗತಿಯು ಭಿನ್ನವಾಗಿರುವುದರಿಂದ ನವನವೀನತೆ.

ಸೂರ್ಯನು ಹಗಲನ್ನು ತಿಳಿಸಿಕೊಡುತ್ತಾನೆ. ಚಂದ್ರನು ಯಾಗಾದಿಗಳಿಗೆ ಬೇಕಾದ ಹಗಲು–ರಾತ್ರಿ ತಿಥಿಗಳನ್ನು ತಿಳಿಸಿಕೊಡುತ್ತಾನೆ.ಸೂರ್ಯನು ಉಷಃಕಾಲದ ಅನಂತರ ಉದಯಿಸಿ ಬರುತ್ತಾನೆ.ಚಂದ್ರನು ಉಷಃಕಾಲಕ್ಕಿಂತಲೂ ಮೊದಲೇ ಬರುತ್ತಾನೆ. ಸೂರ್ಯನು ಅಗ್ನಿಹೋತ್ರಾದಿಕರ್ಮಗಳಲ್ಲಿ ದೇವತೆಗಳಿಗೆ ಹವಿರ್ಭಾಗವನ್ನು ಕೊಡಿಸಿ ಕೊಡುತ್ತಾನೆ. ಇಂತಹ ಆದಿತ್ಯನು ಯಜಮಾನನ ಪಾಪಗಳನ್ನೂ, ರೋಗಗಳನ್ನೂ ಹೋಗಲಾಡಿಸಿ, ದೀರ್ಘಾಯುಸ್ಸನ್ನು ಉಂಟುಮಾಡಲಿ.*

---

* ಈ ಆಶಂಸನೆಯನ್ನು ಚಂದ್ರನ ಪರವಾಗಿಯೂ ಅನ್ವಯಿಸಬಹುದು. ಆದಿತ್ಯೇಷ್ಟಿಯಾದುದರಿಂದ ಆದಿತ್ಯನ ಸ್ತುತಿಯಿದೆ.

**ಯಮಾದಿತ್ಯಾ ಅಗ್ಂಶುಮಾ ಪ್ಯಾಯಯಂತಿ ಯಮಕ್ಷಿತ ಮಕ್ಷಿತಯಃ ಪಿಬಂತಿ । ತೇನ ನೋ ರಾಜಾ ವರುಣೋ ಬೃಹಸ್ಪತಿರಾಪ್ಯಾಯಯಂತು ಭುವನಸ್ಯ ಗೋಪಾಃ ॥**

---

**ಯಮ್** । ಆದಿತ್ಯಾಃ । ಅಗ್ಂಶುಮ್ । ಆಪ್ಯಾಯಯಂತೀತ್ಯಾ-ಪ್ಯಾಯಯಂತಿ । ಯಮ್ । ಅಕ್ಷಿತಮ್ । ಅಕ್ಷಿತಯಃ । ಪಿಬಂತಿ ॥ ತೇನ । ನಃ । ರಾಜಾ । ವರುಣಃ । ಬೃಹಸ್ಪತಿಃ । ಏತಿ । ಪ್ಯಾಯಯಂತು । ಭುವನಸ್ಯ । ಗೋಪಾ ಇತಿ ಗೋ–ಪಾಃ ॥

---

| ಮಂತ್ರ | ವಿನಿಯೋಗ |
|---|---|
| **ಯಮಾದಿತ್ಯಾಃ ....ಗೋಪಾಃ ॥** | ಆದಿತ್ಯಚರುಯಾಗದ ಯಾಜ್ಯೆ |

---

❖ **ಆದಿತ್ಯಾಃ** = ಸೂರ್ಯರು; **ಯಮ್ ಅಗ್ಂಶುಮ್** = [ಚಂದ್ರನ ಸ್ಥಿರವಾಗಿರುವ ಯಾವ] ಒಂದು ಕಲೆಯನ್ನು; **ಆಪ್ಯಾಯಯಂತಿ** = ಶುಕ್ಲಪಕ್ಷದಲ್ಲಿ ವೃದ್ಧಿಗೊಳಿಸುತ್ತಾರೆಯೋ; **ಯಮ್ ಅಕ್ಷಿತಮ್** = [ಹುಣ್ಣಿಮೆಯಲ್ಲಿ ಪೂರ್ಣವಾದ ಚಂದ್ರನ ಕಲೆಗಳಲ್ಲಿ ಒಂದೊಂದರಂತೆ] ಯಾವ ಕಲೆಗಳನ್ನು; **ಅಕ್ಷಿತಯಃ ಪಿಬಂತಿ** = ನಾಶವಿಲ್ಲದ ಅಗ್ನಿ– ರವಿ ಮುಂತಾದ ದೇವತೆಗಳು ಕುಡಿಯುತ್ತಾರೆಯೋ; [ಕೃಷ್ಣ ಪಕ್ಷದಲ್ಲಿ ಸೂರ್ಯರು ಮುಚ್ಚುತ್ತಾ ಬರುತ್ತಾರೆಯೋ] **ತೇನ** = ಆ ಚಂದ್ರನ ಕಲಾರೂಪವಾದ ಅಮೃತದಿಂದ; **ರಾಜಾ** = ಪ್ರಕಾಶಮಾನನಾದ ಆದಿತ್ಯನೂ [ದೇವರಾಜನೂ]; **ವರುಣಃ** = ವರುಣನೂ ; **ಬೃಹಸ್ಪತಿಃ** = ದೇವಗುರುವಾದ ಬೃಹಸ್ಪತಿಯೂ; **ಭುವನಸ್ಯ ಗೋಪಾಃ** = ಲೋಕರಕ್ಷಕರಾದ [ಇತರ ದೇವತೆಗಳೂ]

---

ಅಮಾವಾಸ್ಯೆಯಲ್ಲಿ ಒಂದೇ ಒಂದು ಕಲೆಯಿಂದ ಕೂಡಿರುವ ಚಂದ್ರನನ್ನು ಶುಕ್ಲಪಕ್ಷದಲ್ಲಿ ಆದಿತ್ಯರು ಕಲಾವೃದ್ಧಿಗೊಳಿಸುತ್ತಾರೆ. ಪೌರ್ಣಮಾಸಿಯಲ್ಲಿ ಪೂರ್ಣನಾದ

## ಪ್ರಾಚ್ಯಾಂ ದಿಶಿ ತ್ವಮಿಂದ್ರಾಸಿ ರಾಜೋತೋದೀಚ್ಯಾಂ

## ವೃತ್ರಹನ್ವೃತ್ರಹಾಽಸಿ ।

---

ಪ್ರಾಚ್ಯಾಮ್ । ದಿಶಿ । ತ್ವಮ್ । ಇಂದ್ರ । ಅಸಿ । ರಾಜಾ । ಉತ । ಉದೀಚ್ಯಾಮ್ । ವೃತ್ರ ಹನ್ನಿತಿ ವೃತ್ರ – ಹನ್ । ವೃತ್ರಹೇತಿ ವೃತ್ರ–ಹಾ । ಅಸಿ ।

---

| ಮಂತ್ರ | ವಿನಿಯೋಗ |
| --- | --- |
| **ಪ್ರಾಚ್ಯಾಮ್...... ಹವ್ಯಃ ॥** | ಅನ್ನಾದ್ಯಕಾಮನಿಗೆ ವಿಹಿತವಾದ ತ್ರಿಧಾತು ಯಾಗದಲ್ಲಿ ರಾಜೇಂದ್ರಹವಿಸ್ಸಿನ ಪುರೋನುವಾಕ್ಯೆ ಸ್ವರಾಡಿಂದ್ರಹವಿಸ್ಸಿನ ಯಾಜ್ಯಾನುವಾಕ್ಯೆ |

---

**ನಃ** = [ರೋಗಗ್ರಸ್ತರಾದ ನಮ್ಮನ್ನು] ಯಜಮಾನನನ್ನು [ಪಾಪವನ್ನೂ ರೋಗವನ್ನೂ ಹೋಗಲಾಡಿಸಿ]; **ಆ ಪ್ಯಾಯಯಂತು** = ಸರ್ವವಿಧದಲ್ಲಿಯೂ ವೃದ್ಧಿಗೊಳಿಸಲಿ. ❖ **ಇಂದ್ರ** = ಇಂದ್ರದೇವನೇ! **ತ್ವಮ್** = ನೀನು; **ಪ್ರಾಚ್ಯಾಂ ದಿಶಿ** = ಪೂರ್ವದಿಕ್ಕಿನಲ್ಲಿ; **ರಾಜಾ ಅಸಿ** = ರಾಜನಾಗಿದ್ದೀಯೆ; **ಉತ** = ಮತ್ತು; **ವೃತ್ರಹನ್** = ಮೇಘಗಳನ್ನು / ಶತ್ರುಗಳನ್ನು ಭೇದಿಸುವವನೇ ! **ಉದೀಚ್ಯಾಮ್** = ಉತ್ತರದಿಕ್ಕಿನಲ್ಲಿಯೂ; **ವೃತ್ರಹಾ ಅಸಿ** = ಶತ್ರುಗಳನ್ನು ಸಂಹರಿಸುವವನಾಗಿರುವೆ.

---

ಚಂದ್ರನ ಕಲೆಗಳನ್ನು ಕೃಷ್ಣಪಕ್ಷದಲ್ಲಿ ಸೇವಿಸುತ್ತಾ ಬರುತ್ತಾರೆ. ಚಂದ್ರನ ಕಲೆಗಳನ್ನು ಕಡಿಮೆ ಗೊಳಿಸುತ್ತಾ ಬರುತ್ತಾರೆ. ಇಂತಹ ಆದಿತ್ಯರೂ, ಇಂದ್ರನೂ, ವರುಣನೂ, ಬೃಹಸ್ಪತಿಯೂ, ಇತರ ಲೋಕರಕ್ಷಕ ದೇವತೆಗಳೂ ಅಮೃತಮಯವಾದ ಚಂದ್ರನ ಕಲೆಗಳಿಂದ ಯಜಮಾನ ನನ್ನು ರೋಗಮುಕ್ತನನ್ನಾಗಿ ಮಾಡಿ ಸರ್ವವಿಧದಲ್ಲಿಯೂ ವೃದ್ಧಿಹೊಂದುವಂತೆ ಮಾಡಲಿ.

(ಅನ್ನಾದ್ಯಕಾಮನಿಗೆ ತ್ರಿಧಾತುಯಾಗವು ವಿಹಿತವಾಗಿದೆ. ಈ ಯಾಗಕ್ಕೆ ರಾಜನಾದ

**ಯತ್ರ ಯಂತಿ ಸ್ರೋತ್ಯಾಸ್ತಜ್ಜಿತಂ [ಸ್ರೋತ್ಯಾಸ್ತತ್ (೧) ಜಿತಂ] ತೇ ದಕ್ಷಿಣತೋ ವೃಷಭ ಏಧಿ ಹವ್ಯಃ ॥**

---

ಯತ್ರ । ಯಂತಿ । ಸ್ರೋತ್ಯಾಃ । ತತ್ । ಜಿತಮ್ । ತೇ । ದಕ್ಷಿಣತಃ । ವೃಷಭಃ । ಏಧಿ । ಹವ್ಯಃ ॥

---

[ಅಷ್ಟೇ ಅಲ್ಲ] **ಸ್ರೋತ್ಯಾಃ** = ಹರಿಯುವ ನದಿಗಳು; **ಯತ್ರ ಯಂತಿ** = ಎಲ್ಲೆಲ್ಲಿ ಹರಿಯುತ್ತವೆಯೋ; **ತತ್ ತೇ ಜಿತಮ್** = ಆ ಪ್ರದೇಶವೆಲ್ಲವೂ ನಿನ್ನಿಂದ ಜಯಿಸಲ್ಪಟ್ಟಿದೆ; [ನೀನು] **ವೃಷಭಃ** = ಕಾಮನೆಗಳನ್ನು ಸುರಿಸತಕ್ಕವನು; **ಹವ್ಯಃ** = ಹವಿಸ್ಸುಗಳನ್ನು ಅರ್ಪಿಸಿ ಆರಾಧಿಸಲು ಯೋಗ್ಯನು; [ಇಂತಹ ನೀನು] **ದಕ್ಷಿಣತಃ ಏಧಿ** = [ಆಹವನೀಯಾಗ್ನಿಯ] ದಕ್ಷಿಣಭಾಗದಲ್ಲಿ [ಹವಿಸ್ಸನ್ನು ಸ್ವೀಕರಿಸಲು] ಉಪಸ್ಥಿತನಾಗಿರು.

---

ಇಂದ್ರನು, ಅಧಿರಾಜನಾದ ಇಂದ್ರನು, ಸ್ವರಾಜನಾದ ಇಂದ್ರನೆಂಬ ಮೂರು ದೇವತೆಗಳು. ಹವಿರ್ಭಾಗವನ್ನು ಪಡೆಯುವವರಾಗಿ ಉಕ್ತವಾಗಿದೆ. ಈ ಮಂತ್ರದಲ್ಲಿ ರಾಜೇಂದ್ರಹವಿಸ್ಸಿಗೆ ಪುರೋನುವಾಕ್ಯವಿದೆ. ಇದು ಸ್ವರಾಡಿಂದ್ರ ಹವಿಸ್ಸಿನ ಯಾಜ್ಯಾನುವಾಕ್ಯೆಯೂ ಹೌದು)

ಇಂದ್ರದೇವನೇ ! ನೀನು ಪೂರ್ವದಿಕ್ಕಿನ ಒಡೆಯ. ಶತ್ರುನಾಶಕನಾದ ನೀನು ದಕ್ಷಿಣ ದಿಕ್ಕಿನಲ್ಲಿಯೂ ಶತ್ರುಗಳನ್ನು ಕೊಲ್ಲುವವನಾಗಿದ್ದೀಯೆ. ಇಷ್ಟೇ ಅಲ್ಲ, ನದಿಗಳು ಹರಿಯುವ ಎಲ್ಲಾ ಪ್ರದೇಶಗಳನ್ನೂ ನೀನು ಜಯಿಸಿರುತ್ತೀಯೆ. ನೀನು ಸೇವಿಸುವವರ ಕಾಮನೆಗಳನ್ನು ಈಡೇರಿಸತಕ್ಕವನು. ಹವಿರ್ಭಾಗಗಳನ್ನು ಸ್ವೀಕರಿಸಲು ಯೋಗ್ಯನು. ನೀನು ಋತ್ವಿಜರು ಸಮರ್ಪಿಸುವ ಹವಿರ್ಭಾಗವನ್ನು ಸ್ವೀಕರಿಸಲು ಆಹವನೀಯಾಗ್ನಿಯ ದಕ್ಷಿಣಭಾಗದಲ್ಲಿ ಸನ್ನಿಹಿತನಾಗಿರು.

**ಇಂದ್ರೋ ಜಯಾತಿ ನ ಪರಾಜಯಾತಾ ಅಧಿರಾಜೋ ರಾಜಸು ರಾಜಯಾತಿ । ವಿಶ್ವಾ ಹಿ ಭೂಯಾಃ ಪೃತನಾ ಅಭಿಷ್ಟೀರುಪಸದ್ಯೋ ನಮಸ್ಯೋ ಯಥಾಽಸತ್ ॥**

---

**ಇಂದ್ರಃ** । ಜಯಾತಿ । ನ । ಪರೇತಿ । ಜಯಾತ್ಯೈ । ಅಧಿರಾಜ ಇತ್ಯಧಿ–ರಾಜಃ । ರಾಜಸ್ವಿತಿ ರಾಜ– ಸು । ರಾಜಯಾತಿ ॥ ವಿಶ್ವಾಃ । ಹಿ । ಭೂಯಾಃ । ಪೃತನಾಃ । ಅಭಿಷ್ಟೀಃ । ಉಪಸದ್ಯ ಇತ್ಯುಪಃ – ಸದ್ಯಃ । ನಮಸ್ಯಃ । ಯಥಾ । ಅಸತ್ ॥

---

| ಮಂತ್ರ | ವಿನಿಯೋಗ |
|---|---|
| **ಇಂದ್ರೋ ಜಯಾತಿ ....ಅಸತ್ ॥** | ರಾಜೇಂದ್ರಹವಿಸ್ಸಿನ ಯಾಜ್ಯೆ; ಅಧಿರಾಜೇಂದ್ರ ಹವಿಸ್ಸಿನ ಪುರೋನುವಾಕ್ಯೆ |

---

❖ **ಇಂದ್ರಃ ಜಯಾತಿ** = ಇಂದ್ರದೇವನು ಎಲ್ಲೆಲ್ಲಿಯೂ ಗೆಲ್ಲುತ್ತಾನೆ. **ನ ಪರಾ ಜಯಾತ್ಯೈ** = ಎಲ್ಲಿಯೂ ಸೋಲುವುದಿಲ್ಲ. **ರಾಜಸು ಅಧಿರಾಜಃ** = ರಾಜರಲ್ಲಿ ಶ್ರೇಷ್ಠರಾಜನಾಗಿ; **ರಾಜಯಾತಿ** = ತನ್ನ ಆಶ್ರಿತರನ್ನೂ ರಾಜನ್ನಾಗಿಸುತ್ತಾನೆ; **ಯಥಾ** = ಹೇಗೆ; **ಉಪಸದ್ಯಃ** = ಎಲ್ಲರಿಗೂ ಆಶ್ರಯಿಸತಕ್ಕವನೂ; **ನಮಸ್ಯಃ** = ನಮಸ್ಕಾರಕ್ಕೆ ಅರ್ಹನೂ; **ಅಸತ್ ಹಿ** = ಆಗಿರುತ್ತೀಯೋ; [ಹಾಗೆಯೇ]; **ವಿಶ್ವಾಃ** = ಎಲ್ಲ ಶತ್ರುಸೇನೆಗಳನ್ನೂ; **ಪೃತನಾಃ** = ಎಲ್ಲ ಶತ್ರುಗಳನ್ನೂ; **ಅಭಿಷ್ಟೀಃ ಭೂಯಾಃ** = ಸೋಲಿಸುವವನಾಗು/ನಮಗೆ ಅನ್ನಾದ್ಯವನ್ನು ಕೊಡು.

---

ಇಂದ್ರನು ಎಲ್ಲೆಡೆಯೂ ಜಯಿಸತಕ್ಕವನು. ಅವನಿಗೆ ಎಲ್ಲಿಯೂ ಸೋಲಿಲ್ಲ. ಅವನು ರಾಜರಲ್ಲಿ ರಾಜನು. ತನ್ನ ಆಶ್ರಿತರನ್ನೂ ರಾಜನಾಗಿಸತಕ್ಕವನು. ಎಲ್ಲರೂ ಸೇವಿಸಲು ಅರ್ಹನಾಗಿರುವವನು. ನಮಸ್ಕರಿಸಲು ಅರ್ಹನು; ಇಂತಹ ಇಂದ್ರನು ಎಲ್ಲ ಶತ್ರುಗಳನ್ನೂ ಸೋಲಿಸಿ, ನಮಗೆ ಅನ್ನಾದ್ಯವನ್ನು ಕೊಡಲಿ. ಶತ್ರುಗಳನ್ನು ಗೆಲ್ಲುವ ಸಾಮರ್ಥ್ಯವನ್ನು ಕರುಣಿಸಲಿ. ಯಜಮಾನನು ಬೇರೆಯವರಿಗೆ ಆಶ್ರಯದಾತನೂ ನಮಸ್ಕಾರಾರ್ಹನೂ ಆಗುವಂತೆ ಮಾಡಲಿ.

# ಅಸ್ಯೇದೇವ ಪ್ರರಿರಿಚೇ ಮಹಿತ್ವಂ ದಿವಃ ಪೃಥಿವ್ಯಾಃ ಪರ್ಯಂತರಿಕ್ಷಾತ್ । ಸ್ವರಾಡಿಂದ್ರೋ ದಮ ಆ ವಿಶ್ವಗೂರ್ತಃ ಸ್ವರಿರಮತ್ರೋ ವವಕ್ಷೇ ರಣಾಯ ॥

ಅಸ್ಯ । ಇತ್ । ಏವ । ಪ್ರೇತಿ । ರಿರಿಚೇ । ಮಹಿತ್ವಮಿತಿ ಮಹಿ –ತ್ವಮ್ ।ದಿವಃ । ಪೃಥಿವ್ಯಾಃ । ಪರೀತಿ । ಅಂತರಿಕ್ಷಾತ್ । ಸ್ವರಾಡಿತಿ ಸ್ವ-ರಾಟ್ । ಇಂದ್ರಃ । ದಮೇ । ಏತಿ । ವಿಶ್ವಗೂರ್ತ ಇತಿ ವಿಶ್ವ–ಗೂರ್ತಃ । ಸ್ವರಿಃ । ಅಮತ್ರಃ । ವವಕ್ಷೇ । ರಣಾಯ ॥

| ಮಂತ್ರ | ವಿನಿಯೋಗ |
|---|---|
| ಅಸ್ಯೇದೇವ......ರಣಾಯ ॥ | ಅಧಿರಾಜೇಂದ್ರ ಹವಿಸ್ಸಿನ ಯಾಜ್ಯೆ<br>ಸ್ವರಾಡಿಂದ್ರ ಹವಿಸ್ಸಿನ ಪುರೋನುವಾಕ್ಯೆ |

❖ **ಅಸ್ಯ ಇತ್ ಏವ** = ಈ ಇಂದ್ರನದೇ ಆಗಿರುವ; **ಮಹಿತ್ವಮ್** = ಮಹತ್ತ್ವವು; **ದಿವಃ** = ದ್ಯುಲೋಕದಿಂದಲೂ; **ಪೃಥಿವ್ಯಾಃ** = ಭೂಲೋಕದಿಂದಲೂ; **ಅಂತರಿಕ್ಷಾತ್** = ಅಂತರಿಕ್ಷದಿಂದಲೂ; **ಪರಿ** = ಅತಿಶಯವಾಗಿ /ಹೆಚ್ಚಾಗಿ; **ಪ್ರ ರಿರಿಚೇ** = ಮೀರಿ ಇರುತ್ತದೆ; **ಸ್ವರಾಟ್** = ಸ್ವತಂತ್ರಪ್ರಭುವಾದ; **ದಮೇ ವಿಶ್ವಗೂರ್ತಃ** = ಮನೆಯಲ್ಲಿಯೇ ಎತ್ತಿ ಹಿಡಿದಿರುವ ಆಯುಧವುಳ್ಳ; **ಸ್ವರಿಃ** = ಶತ್ರುಗಳನ್ನು ಆಕ್ರಮಿಸುವ ಸ್ವಭಾವವುಳ್ಳ; **ಅಮತ್ರಃ** = ರೋಗಗಳಿಂದಲೂ, ಹಸಿವಿನಿಂದಲೂ ಕಾಪಾಡುವ; **ಇಂದ್ರಃ** = ಇಂದ್ರದೇವನು; **ರಣಾಯ** = ಯುದ್ಧಕ್ಕಾಗಿ; **ಆ ವವಕ್ಷೇ** = ಶತ್ರುಗಳ ಮೇಲೆ ಸೇನೆಯನ್ನು ನಡೆಸುತ್ತಾನೆ.

ಈ ಇಂದ್ರದೇವನ ಮಹಿಮೆಯು ದ್ಯುಲೋಕ, ಭೂಲೋಕ, ಅಂತರಿಕ್ಷಲೋಕವನ್ನೂ ಮೀರಿ ವ್ಯಾಪಿಸಿದೆ. ಈ ಸ್ವತಂತ್ರಪ್ರಭುವಾದ ಇಂದ್ರನು ಮನೆಯಿಂದ ಹೊರಡುವಾಗಲೇ ಎಲ್ಲ ಆಯುಧಗಳನ್ನೂ ಧರಿಸಿರುತ್ತಾನೆ. ಯಾವಾಗಲೂ ಶತ್ರುಗಳ ಮೇಲೆ ನುಗ್ಗುವ ಪ್ರಭಾವವುಳ್ಳವನು. ರೋಗಗಳನ್ನೂ, ಹಸಿವನ್ನೂ, ಹೋಗಲಾಡಿಸುವ ಸಾಮರ್ಥ್ಯವುಳ್ಳವನು.

# ಅಭಿ ತ್ವಾ ಶೂರ ನೋನುಮೋಽದುಗ್ಧಾ ಇವ ಧೇನವಃ।
# ಈಶಾನಮಸ್ಯ [ಈಶಾನಮ್ (೨) ಅಸ್ಯ] ಜಗತಃ
# ಸುವರ್ದೃಶಮೀಶಾನಮಿಂದ್ರ ತಸ್ಥುಷಃ ॥

---

**ಅಭೀತಿ** । ತ್ವಾ । ಶೂರ । ನೋನುಮಃ । ಅದುಗ್ಧಾಃ । ಇವ । ಧೇನವಃ ॥ ಈಶಾನಮ್ । ಅಸ್ಯ । ಜಗತಃ । ಸುವರ್ದೃಶಮಿತಿ ಸುವಃ –ದೃಶಮ್ । ಈಶಾನಮ್ । ಇಂದ್ರ । ತಸ್ಥುಷಃ ॥

---

| ಮಂತ್ರ | ವಿನಿಯೋಗ |
|---|---|
| **ಅಭಿ ತ್ವಾ......ತಸ್ಥುಷಃ ॥** | ಸರ್ವಪೃಷ್ಠಾಯಾಗದಲ್ಲಿ★ ರಾಥಂತರೇಂದ್ರ ಹವಿಸ್ಸಿನ ಪುರೋನುವಾಕ್ಯೆ. ರೈವತೇಂದ್ರ ಹವಿಸ್ಸಿನ ಯಾಜ್ಯೆ. |

---

❖ **ಶೂರ** = ಶೂರನಾದ; **ಇಂದ್ರ** = ಇಂದ್ರನೇ ! **ಅದುಗ್ಧಾಃ ಧೇನವಃ ಇವ** = ಇನ್ನೂ ಹಾಲನ್ನು ಕರೆಯದಿರುವ ಹಸುಗಳಂತೆ; **ಅಸ್ಯ ಜಗತಃ ಈಶಾನಮ್** = ಜಂಗಮಾತ್ಮಕವಾದ ಈ ಲೋಕಕ್ಕೆ ಒಡೆಯನಾದ; **ತಸ್ಥುಷಃ** = ಅಸ್ಯ ಜಗತಃ **ಈಶಾನಮ್** = ಸ್ಥಾವರ ಜಗತ್ತಿನ ಒಡೆಯನೂ ಆದ; **ಸುವರ್ದೃಶಮ್** = ಸ್ವರ್ಗವನ್ನು ತೋರಿಸಿಕೊಡುವ; **ತ್ವಾ** = ನಿನ್ನನ್ನು; **ಅಭಿ ನೋನುಮಃ** = ಮತ್ತೆ ಮತ್ತೆ ಸ್ತುತಿಸುತ್ತೇವೆ.

---

ಇಂತಹ ಇಂದ್ರನು ಯುದ್ಧದಲ್ಲಿ ಶತ್ರುಗಳ ಮೇಲೆ ಸೇನೆಯನ್ನು ನಡೆಸಲಿ. ಶತ್ರುಗಳನ್ನು ಸೋಲಿಸಿ ಅನ್ನಸಮೃದ್ಧಿಯನ್ನು ಕರುಣಿಸಲಿ.

---

★ ಪೃಷ್ಠಸ್ತೋತ್ರಗಳು ಸೋಮಯಾಗಕ್ಕೆ ಸಂಬಂಧಿಸಿವೆ. ಈ ಸರ್ವಪೃಷ್ಠಾಯಾಗವು ಸೋಮಯಾಗ ವಲ್ಲ, ಇದು ಇಷ್ಟಿ. ಆದರೂ ಇಂದ್ರಪ್ರೀತ್ಯರ್ಥವಾಗಿ ಈ ಯಾಗದಲ್ಲಿ ಯಾಜ್ಯಾ-ಪುರೋನುವಾಕ್ಯೆ ಗಳನ್ನು ವಿನಿಯೋಗಿಸಲಾಗಿದೆ.

**ತ್ವಾಮಿದ್ಧಿ ಹವಾಮಹೇ ಸಾತಾ ವಾಜಸ್ಯ ಕಾರವಃ। ತ್ವಾಂ ವೃತ್ರೇಷ್ವಿಂದ್ರ ಸತ್ಪತಿಂ ನರಸ್ತ್ವಾಂ ಕಾಷ್ಠಾಸ್ವರ್ವತಃ ॥**

---

**ತ್ವಾಮ್** । ಇತ್ । ಹಿ । ಹವಾಮಹೇ । ಸಾತಾ । ವಾಜಸ್ಯ । ಕಾರವಃ ॥ ತ್ವಾಮ್ । ವೃತ್ರೇಷು । ಇಂದ್ರ । ಸತ್ಪತಿಮಿತಿ ಸತ್– ಪತಿಮ್ । ನರಃ । ತ್ವಾಮ್ । ಕಾಷ್ಠಾಸು । ಅರ್ವತಃ ॥

---

| ಮಂತ್ರ | ವಿನಿಯೋಗ |
| --- | --- |
| **ತ್ವಾಮಿದ್ಧಿ...ಅರ್ವತಃ ॥** | ರಾಥಂತರೇಂದ್ರ ಹವಿಸ್ಸಿನ ಯಾಜ್ಯೆ.<br>ಬಾರ್ಹತೇಂದ್ರ ಹವಿಸ್ಸಿನ ಪುರೋನುವಾಕ್ಯೆ. |

---

❖ **ಇಂದ್ರ** = ಇಂದ್ರದೇವನೇ! **ಕಾರವಃ** = ಯಾಗಕರ್ತರಾದ ನಾವು; **ವಾಜಸ್ಯ ಸಾತಾ** = ಅನ್ನದ ದಾನನಿಮಿತ್ತವಾಗಿ; **ತ್ವಾಮ್ ಇತ್** = ನಿನ್ನನ್ನೇ; **ಹವಾಮಹೇ** = ಆಹ್ವಾನಿಸುತ್ತೇವೆ. **ವೃತ್ರೇಷು** = [ಪ್ರಾಪ್ತೇಷು ಸತ್ಸು] = ವೈರಿಗಳು ಪ್ರಾಪ್ತರಾಗಲಾಗಿ; **ನರಃ** = ಮಾನವರಾದ ನಾವು; **ಸತ್ಪತಿಮ್** = ಸಜ್ಜನ/ಸನ್ಮಾರ್ಗರಕ್ಷಕನಾದ; **ತ್ವಾಮ್** = ನಿನ್ನನ್ನು; ಹವಾಮಹೇ = ಕರೆಯುತ್ತೇವೆ; [ನಾವು] **ಕಾಷ್ಠಾಸು** = ಎಲ್ಲ ದಿಕ್ಕುಗಳಲ್ಲಿಯೂ; **ಅರ್ವತಃ** = [ದೃಷ್ಟ್ವಾ]= [ಶತ್ರುಗಳ] ಕುದುರೆಯ ಸೇನೆಯೇ ಮೊದಲಾದವನ್ನು [ನೋಡಿ]; **ತ್ವಾಮ್** ಹವಾಮಹೇ **ಹಿ** = ನಿನ್ನನ್ನು ರಕ್ಷಣೆಗಾಗಿ ಆಹ್ವಾನಿಸುತ್ತೇವಷ್ಟೆ. ತ್ವಾಮ್ ಅರ್ವತಃ ಹವಾಮಹೇ = ಮಳೆಯನ್ನು /ನೀರನ್ನು ಕೊಡಲು ನಿನ್ನನ್ನು ಆಹ್ವಾನಿಸುತ್ತೇವೆ.

---

ಇಂದ್ರನೇ! ಹಾಲನ್ನು ಇನ್ನೂ ಕರೆಯದೇ ಇರುವಾಗ ಹಸುಗಳು ಕರುಗಳಿಗಾಗಿ ಕೂಗಿಕೊಳ್ಳುತ್ತಿರುತ್ತವೆ. ಅಂತೆಯೇ ಸ್ಥಾವರ – ಜಂಗಮಾತ್ಮಕವಾದ ಈ ಜಗತ್ತಿಗೆ ಒಡೆಯನಾದ, ಸ್ವರ್ಗಲೋಕವನ್ನು ಭಕ್ತರಿಗೆ ತೋರಿಸಿಕೊಡುವ, ಶೂರನಾದ ನಿನ್ನನ್ನು ಮತ್ತೆ ಮತ್ತೆ ಸ್ತುತಿಸುತ್ತೇವೆ. ನೀನು ನಮ್ಮ ಇಷ್ಟಾರ್ಥಗಳನ್ನು ಕರುಣಿಸು.

ಇಂದ್ರನೇ! ಯಾಗವನ್ನು ಅನುಷ್ಠಿಸುವ ನಾವು ಅನ್ನಪ್ರಾಪ್ತಿಗಾಗಿ ನಿನ್ನನ್ನೇ ಪ್ರಾರ್ಥಿಸುತ್ತೇವೆ. ಹಗೆಗಳು ಮುತ್ತಿದಾಗ ಸತ್ಪುರುಷರನ್ನು ರಕ್ಷಿಸುವವನು ನೀನಷ್ಟೆ. ಶತ್ರುಗಳ ಅಶ್ವಸೇನಾದಿಗಳನ್ನು ನೋಡಿ ಅವರನ್ನು ಜಯಿಸುವುದಕ್ಕಾಗಿ ನಿನ್ನನ್ನೇ ಪ್ರಾರ್ಥಿಸುತ್ತೇವೆ. ನಿನ್ನನ್ನು ವೃಷ್ಟಿಗಾಗಿ ಸ್ತುತಿಸುತ್ತೇವೆ.

# ಯದ್ದ್ಯಾವ ಇಂದ್ರ ತೇ ಶತಗ್ಂ ಶತಂ ಭೂಮೀರುತ ಸ್ಯುಃ। ನ ತ್ವಾ ವಜ್ರಿನ್ಥ್ಸಹಸ್ರಗ್ಂ ಸೂರ್ಯಾ ಅನು ನ ಜಾತಮಷ್ಟ ರೋದಸೀ ॥

**ಯತ್** । ದ್ಯಾವಃ । ಇಂದ್ರ । ತೇ । ಶತಮ್ । ಶತಮ್ । ಭೂಮೀಃ । ಉತ । ಸ್ಯುಃ ॥ ನ । ತ್ವಾ । ವಜ್ರಿನ್ । ಸಹಸ್ರಮ್ । ಸೂರ್ಯಾಃ । ಅನ್ವಿತಿ । ನ । ಜಾತಮ್ । ಅಷ್ಟ । ರೋದಸೀ ಇತಿ ॥

| ಮಂತ್ರ | ವಿನಿಯೋಗ |
|---|---|
| **ಯದ್ದ್ಯಾವಃ ...ರೋದಸೀ** ॥ | ಬಾರ್ಹತೇಂದ್ರ ಹವಿಸ್ಸಿನ ಯಾಜ್ಯೆ ವೈರೂಪೇಂದ್ರ ಹವಿಸ್ಸಿನ ಪುರೋನುವಾಕ್ಯೆ. |

❖ **ವಜ್ರಿನ್** = ವಜ್ರಾಯುಧಧಾರಿಯೇ ! **ಇಂದ್ರ** = ಇಂದ್ರದೇವನೇ ! **ಯತ್** = ಒಂದು ವೇಳೆ; **ದ್ಯಾವಃ ಶತಮ್ ಸ್ಯುಃ** = ದ್ಯುಲೋಕಗಳು ನೂರು ಇರಬಹುದು; **ಉತ** = ಮತ್ತು; **ಶತಮ್ ಭೂಮೀಃ** ಸ್ಯುಃ = ಭೂಲೋಕಗಳೂ ನೂರಿರಬಹುದು. **ರೋದಸೀ** = [ಹೀಗೆ ಅನೇಕ ವಿಶೇಷಗಳಿಂದ ಕೂಡಿದ] ದ್ಯುಲೋಕ - ಭೂಲೋಕಗಳು; **ಜಾತವ್** = ಆವಿರ್ಭವಿಸಿದ; **ತ್ವಾ** = ನಿನ್ನನ್ನು; **ನ ಅನು ಅಷ್ಟ**= [ಐಶ್ವರ್ಯದಿಂದ ನಿನ್ನನ್ನು] ಅನುಕರಿಸಿ ಮೀರಿಸಲಾರವು; **ಸಹಸ್ರಮ್ ಸೂರ್ಯಾಃ** = ಸೂರ್ಯರು ಸಾವಿರ ಸಂಖ್ಯೆಯಲ್ಲಿದ್ದರೂ; **ತೇ** ನ ಅನು ಅಷ್ಟ= [ತೇಜಸ್ಸಿನಿಂದ] ನಿನ್ನನ್ನು ಅನುಕರಿಸಿ ಮೀರಿಸಲಾರರು.

ನೀನು ಇಂದ್ರಿಯ–ವೀರ್ಯಗಳನ್ನು ಕೊಟ್ಟು ಶತ್ರುಗಳನ್ನು ಜಯಿಸುವಂತೆ ಮಾಡು.

ಓ ವಜ್ರಧಾರಿಯಾದ ಇಂದ್ರನೇ ! ಒಂದು ವೇಳೆ ನೂರು ದ್ಯುಲೋಕಗಳು ಇರಬಹುದು. ಭೂಲೋಕಗಳು ನೂರು ಇರಬಹುದು. ಆದರೆ ಹಲವು ಆಶ್ಚರ್ಯಗಳಿಂದ ತುಂಬಿದ ದ್ಯಾವಾಪೃಥಿವಿಗಳು ಆವಿರ್ಭವಿಸಿದ ನಿನ್ನನ್ನು ಮಹಿಮೆಯಲ್ಲಿ ಮೀರಿಸಲಾರವು. ಹಾಗೆಯೇ ಸೂರ್ಯನು ಸಾವಿರ ಸಂಖ್ಯೆಯಲ್ಲಿ ಇದ್ದರೂ ತೇಜಸ್ಸಿನಲ್ಲಿ ನಿನ್ನನ್ನು ಮೀರಿಸಲಾರರು. ಅಂತಹ ನೀನು ನಮಗೆ ಇಂದ್ರಿಯ–ವೀರ್ಯಗಳನ್ನು ಕೊಟ್ಟು ರಕ್ಷಿಸು.

# ಪಿಬಾ ಸೋಮಮಿಂದ್ರ ಮಂದತು ತ್ವಾ ಯಂ ತೇ ಸುಷಾವ ಹರ್ಯಶ್ವಾದ್ರಿಃ[೩]। ಸೋತುರ್ಬಾಹುಭ್ಯಾಗ್ಂ ಸುಯತೋ ನಾರ್ವಾ ॥

---

ಪಿಬ । ಸೋಮಮ್ । ಇಂದ್ರ । ಮಂದತು । ತ್ವಾ । ಯಮ್ । ತೇ । ಸುಷಾವ । ಹರ್ಯಶ್ವೇತಿ ಹರಿ–ಅಶ್ವ । ಅದ್ರಿಃ ॥ ಸೋತುಃ । ಬಾಹುಭ್ಯಾಮಿತಿ ಬಾಹು – ಭ್ಯಾಮ್ । ಸುಯತ ಇತಿ ಸು–ಯತಃ । ನ । ಅರ್ವಾ ॥

---

| ಮಂತ್ರ | ವಿನಿಯೋಗ |
| --- | --- |
| ಪಿಬಾ....ನಾರ್ವಾ ॥ | ವೈರಾಜೇಂದ್ರ ಹವಿಸ್ಸಿನ ಯಾಜ್ಯೆ.<br>ಶಾಕ್ವರೇಂದ್ರ ಹವಿಸ್ಸಿನ ಪುರೋನುವಾಕ್ಯೆ★ |

---

❖ **ಹರ್ಯಶ್ವ** = ಹಸಿರು ಬಣ್ಣದ ಕುದುರೆಗಳುಳ್ಳ/ಹರಿ ಎಂಬ ಹೆಸರುಳ್ಳ; **ಇಂದ್ರ** = ಇಂದ್ರದೇವನೇ ! **ಸೋಮಮ್ ಪಿಬ** = ಸೋಮರಸವನ್ನು ಕುಡಿ; **ತ್ವಾ ಮಂದತು** = [ಆ ಸೋಮರಸವು] ನಿನ್ನನ್ನು ಸಂತೋಷಪಡಿಸಲಿ; **ಅದ್ರಿಃ** = [ಉಪಾಂಶುಸವನಾದಿರೂಪವಾದ] ಕಲ್ಲು; **ತೇ** = ನಿನಗಾಗಿ; **ಯಮ್** ಸೋಮಮ್ **ಸುಷಾವ** = ಯಾವ ಸೋಮರಸವನ್ನು ಕುಟ್ಟಿ ತೆಗೆಯಿತೋ [ಆ ಸೋಮರಸವನ್ನು ಕುಡಿ] ಮತ್ತು; **ಸೋತುಃ** = ಸೋಮರಸವನ್ನು ತೆಗೆಯುವ ಋತ್ವಿಜನ; **ಬಾಹುಭ್ಯಾಮ್** = ತೋಳುಗಳಿಂದ; **ಸುಯತಃ** = ನಿಯಮ ಪೂರ್ವಕವಾಗಿ ಉತ್ಪಾದಿಸಲ್ಪಟ್ಟಿದೆಯೋ; **ನ ಅರ್ವಾ** = ಹೀನವಲ್ಲದೆ ಉತ್ತಮವಾಗಿದೆಯೋ [ಅಂತಹ ಸೋಮರಸವನ್ನು ಕುಡಿ].

---

ಹರ್ಯಶ್ವನಾದ ಇಂದ್ರನೇ ! ನೀನು ಸೋಮರಸವನ್ನು ಪಾನ ಮಾಡು. ಇದು ನಿನ್ನನ್ನು ತೃಪ್ತಿಪಡಿಸಲಿ. ಸೋಮಲತೆಯನ್ನು ಗ್ರಾವ (ಕಲ್ಲು)ಗಳಿಂದ ನಿಯಮಪೂರ್ವಕವಾಗಿ ಕುಟ್ಟಿ

---

★ ಇಲ್ಲಿ ವೈರೂಪೇಂದ್ರಹವಿಸ್ಸಿನ ಯಾಜ್ಯೆ ಹಾಗೂ ವೈರಾಜೇಂದ್ರ ಹವಿಸ್ಸಿನ ಪುರೋನುವಾಕ್ಯೆಯಾಗಿ 'ಕದಾ ಚನ ಸ್ತರೀರಸಿ' ಎಂಬ ಶಾಖಾಂತರೀಯಮಂತ್ರವಿದೆ. ಈ ಮಂತ್ರದ ವ್ಯಾಖ್ಯಾನವು ಈ ಶಾಖೆಯಲ್ಲಿ ಪ್ರಥಮಕಾಂಡದಲ್ಲಿದೆ. [1.4.22]

**ರೇವತೀರ್ನಸ್ಸಧಮಾದ ಇಂದ್ರೇ ಸಂತು ತುವಿವಾಜಾಃ ।**

**ಕ್ಷುಮಂತೋ ಯಾಭಿರ್ಮದೇಮ ॥**

---

**ರೇವತೀಃ** । ನಃ । ಸಧಮಾದ ಇತಿ ಸಧ – ಮಾದಃ । ಇಂದ್ರೇ । ಸಂತು । ತುವಿವಾಜಾ ಇತಿ ತುವಿ – ವಾಜಾಃ ॥ ಕ್ಷುಮಂತಃ । ಯಾಭಿಃ । ಮದೇಮ ॥

---

| ಮಂತ್ರ | ವಿನಿಯೋಗ |
|---|---|
| **ರೇವತೀರ್ನಃ .....ಮದೇಮ** ॥ | ಶಾಕ್ವರೇಂದ್ರ ಹವಿಸ್ಸಿನ ಯಾಜ್ಯೆ.ರೈವತೇಂದ್ರ ಹವಿಸ್ಸಿನ ಪುರೋನುವಾಕ್ಯೆ |

---

❖ **ರೇವತೀಃ** = ಧನಯುಕ್ತವಾದ; **ಸಧಮಾದಃ** = ಎಲ್ಲರನ್ನೂ ಜೊತೆಯಲ್ಲಿಯೇ ಸಂತೋಷಪಡಿಸುವ; **ತುವಿವಾಜಾಃ** = ಬಹ್ವನ್ನಕಾರಣವಾದ ನೀರುಗಳು; **ನಃ ಸಂತು** = ನಮಗೆ ಇರಲಿ; **ಇಂದ್ರೇ** ಸಂತು= [ನಮಗಾಗಿ] ಇಂದ್ರನಲ್ಲಿ ಇರಲಿ; **ಯಾಭಿಃ** = ಯಾವ ನೀರಿನ ಪ್ರಾಪ್ತಿಯಿಂದ; **ಕ್ಷುಮಂತಃ ಮದೇಮ** = [ಇಂದ್ರನನ್ನು] ಗಟ್ಟಿಯಾಗಿ ಸ್ತುತಿಸುತ್ತಾ ಆನಂದಿಸುವೆವೋ, [ಅಂತಹ ನೀರು ಇಂದ್ರನ ಅನುಗ್ರಹದಿಂದ ನಮಗೆ ಬರಲಿ.]

---

ರಸವನ್ನು ತೆಗೆದಿರುತ್ತಾರೆ. ಋತ್ವಿಜರು ತಮ್ಮ ಬಾಹುಗಳಿಂದ ಇದನ್ನು ಸಿದ್ಧಪಡಿಸಿದ್ದಾರೆ. ಇದು ಉತ್ತಮವಾಗಿದೆ. ಈ ಸೋಮರಸವನ್ನು ಕುಡಿದು ತೃಪ್ತನಾಗಿ ನಮ್ಮ ಕಾಮನೆಗಳನ್ನು ಪೂರ್ಣಗೊಳಿಸು.

ನೀರು ಸರ್ವಾಧಾರವಾದುದು. ಧನಕ್ಕೆ ಸಾಧನವಾದ ಸಸ್ಯಗಳ ಬೆಳೆಗೆ ಕಾರಣವಾಗಿ ಲೋಕವೆಲ್ಲವನ್ನೂ ಸಂತೋಷಪಡಿಸಬಲ್ಲುದು. ವೃಷ್ಟಿಗೆ ಒಡೆಯನಾದ ಇಂದ್ರನಿಂದ ನಮಗೆ ಇಂತಹ ನೀರು ಒದಗಲಿ. ಇಂತಹ ನೀರನ್ನು ಪಡೆದು ಇಂದ್ರನನ್ನು ಗಟ್ಟಿಯಾಗಿ ಪ್ರಶಂಸಿಸುತ್ತಾ ನಾವು ಸಂತೋಷಪಡುವಂತಾಗಲಿ.

# ಉದಗ್ನೇ ಶುಚಯಸ್ತವ* ವಿ ಜ್ಯೋತಿಷೋ*ದು ತ್ಯಂ ಜಾತವೇದಸಗ್ಂ*

**ಉದಿತಿ** । ಅಗ್ನೇ । ಶುಚಯಃ । ತವ । **ವೀತಿ** । ಜ್ಯೋತಿಷಾ । **ಉದಿತಿ** । ಉ । ತ್ಯಮ್ ।
ಜಾತವೇದಸಮಿತಿ ಜಾತ – ವೇದಸಮ್ ।

| ಮಂತ್ರ | ವಿನಿಯೋಗ |
|---|---|
| ಉದಗ್ನೇ...ಅರ್ಚಯಃ । | ಚಕ್ಷುಷ್ಕಾಮನಿಗೆ ವಿಹಿತವಾದ ಮೂರು ಹವಿಸ್ಸುಗಳ ಇಷ್ಟಿಯಲ್ಲಿ ಆಗ್ನೇಯ ಪುರೋಡಾಶಯಾಗದ ಪುರೋನುವಾಕ್ಯದ ಪ್ರತೀಕಗ್ರಹಣ. |

★ ಉದಗ್ನೇ ಶುಚಯಸ್ತವ ಶುಕ್ರಾ ಭ್ರಾಜಂತ ಈರತೇ । ತವ ಜ್ಯೋತೀಗ್ಂಷ್ಯರ್ಚಯಃ ॥
ತೈ.ಸಂ. 1.3.14

★ ವಿ ಜ್ಯೋತಿಷಾ ಬೃಹತಾ ಭಾತ್ಯಗ್ನಿರಾವಿರ್ವಿಶ್ವಾನಿ ಕೃಣುತೇ ಮಹಿತ್ವಾ ।
ಪ್ರಾದೇವೀರ್ಮಾಯಾಸ್ಸಹತೇ ದುರೇವಾಃ ಶಿಶೀತೇ ಶೃಂಗೇ ರಕ್ಷಸೇ ವಿನಿಕ್ಷೇ ॥
ತೈ.ಸಂ. 1.2.14

★ ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ ।
ದೃಶೇ ವಿಶ್ವಾಯ ಸೂರ್ಯಮ್ ॥ ತೈ.ಸಂ. 1.4.43

★ ಶ್ರುತಿಯಲ್ಲಿ ಪ್ರತೀಕ ಮಾತ್ರ ಗ್ರಹಣವಿದೆ. ಈ ಮಂತ್ರಗಳ ಪದಶಃ ಅರ್ಥವನ್ನು ಹಿಂದಿನ ಸಂಪುಟಗಳಲ್ಲಿ ನೀಡಲಾಗಿದೆ. ಇಲ್ಲಿ ಮಂತ್ರಗಳ ತಾತ್ಪರ್ಯವನ್ನು ಮಾತ್ರ ಮುಂದಿನ ಪುಟದಲ್ಲಿ ನೀಡಲಾಗಿದೆ.

# ಸಪ್ತ ತ್ವಾ ಹರಿತೋ ರಥೇ ವಹಂತಿ ದೇವ ಸೂರ್ಯ ।
# ಶೋಚಿಷ್ಕೇಶಂ ವಿಚಕ್ಷಣ ॥

---

ಸಪ್ತ। ತ್ವಾ। ಹರಿತಃ। ರಥೇ। ವಹಂತಿ। ದೇವ। ಸೂರ್ಯ॥ ಶೋಚಿಷ್ಕೇಶಮಿತಿ ಶೋಚಿಃ – ಕೇಶಮ್। ವಿಚಕ್ಷಣೇತಿ ವಿ-ಚಕ್ಷಣ॥

---

| ಮಂತ್ರ | ವಿನಿಯೋಗ |
|---|---|
| ಸಪ್ತ... ವಿಚಕ್ಷಣ ॥ | ಹಿಂದಿನ ಇಷ್ಟಿಯಲ್ಲಿಯೇ ವಿಕಲ್ಪಿತವಾದ ಪುರೋನುವಾಕ್ಯೆ/ಯಾಜ್ಯೆ |

---

❖ **ದೇವ ಸೂರ್ಯ** = ಸೂರ್ಯದೇವನೇ! **ವಿಚಕ್ಷಣ** = ಲೋಕಪ್ರಕಾಶಕನೇ/ಎಲ್ಲವನ್ನೂ ತಿಳಿದವನೇ!; **ಸಪ್ತ ಹರಿತಃ** = ಏಳು ಕುದುರೆಗಳು/ ರಶ್ಮಿಗಳು; **ಶೋಚಿಷ್ಕೇಶಮ್ ತ್ವಾ** = ಪ್ರಕಾಶಮಾನನಾದ /ಕೇಶಸ್ಥಾನೀಯವಾದ ಕಿರಣಗಳುಳ್ಳ; ನಿನ್ನನ್ನು; **ರಥೇ** = ರಥದಲ್ಲಿ /ಮಂಡಲದಲ್ಲಿ; **ವಹಂತಿ** = ಒಯ್ಯುತ್ತವೆ. [ಇಂತಹ ನೀನು ನಮಗೆ ಕಣ್ಣನ್ನು ಕೊಡು].

---

**[ಉದಗ್ನೇ.. ಅರ್ಚಯಃ]** ಹೇ! ಅಗ್ನಿಯೇ! ನಿನ್ನ ಶುಭ್ರವಾದ ಜ್ವಾಲೆಗಳು ಪ್ರಕಾಶಿಸುತ್ತಾ ಮೇಲ್ಮುಖವಾಗಿ ಹೋಗುತ್ತವೆ. ನಿನ್ನ ಜ್ವಾಲೆಗಳು ಗ್ರಹ-ನಕ್ಷತ್ರಾದಿರೂಪವಾಗಿವೆ. ನಿನ್ನನ್ನು ಅರ್ಚಿಸುವವರು ನಕ್ಷತ್ರಲೋಕಕ್ಕೆ ಹೋಗುತ್ತಾರೆ.

**[ವಿ ಜ್ಯೋತಿಷಾ..ವಿನಿಕ್ಷೇ]** ಈ ಅಗ್ನಿದೇವನು ತನ್ನ ಜ್ವಾಲೆಗಳಿಂದ ಬಹುವಿಧವಾಗಿ ಪ್ರಕಾಶಿಸುವನು. ತನ್ನ ಮಹಿಮೆಗಳನ್ನು ಲೋಕಕ್ಕೆ ತೋರಿಸುತ್ತಾನೆ. ಸಹಿಸಲು ಕಷ್ಟಕರವಾದ ರಾಕ್ಷಸರ ಮಾಯೆಗಳನ್ನು ಈತನು ನಿವಾರಿಸಲಿ. ತೀಕ್ಷ್ಣವಾದ ಕೊಂಬುಗಳಂತಿರುವ ತನ್ನ ಜ್ವಾಲೆಗಳನ್ನು ರಾಕ್ಷಸರನ್ನು ನಾಶಪಡಿಸಲು ಸಜ್ಜುಗೊಳಿಸಲಿ.

**[ಉದು ತ್ಯಂ...ಸೂರ್ಯಮ್]** ಎಲ್ಲವನ್ನೂ ತಿಳಿದ ಸರ್ವಜ್ಞನಾದ ಸೂರ್ಯನನ್ನು ಲೋಕವು ನೋಡುವುದಕ್ಕಾಗಿ ಕಿರಣಗಳು ಮೇಲಕ್ಕೆ ತರುತ್ತವೆ. ಆತನು ನಮಗೆ ದೃಷ್ಟಿ ಪ್ರಕಾಶವನ್ನು ಕೊಡಲಿ.

# ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।

**ಚಿತ್ರಮ್** । ದೇವಾನಾಮ್ । ಉದಿತಿ । ಅಗಾತ್ । ಅನೀಕಮ್ । ಚಕ್ಷುಃ । ಮಿತ್ರಸ್ಯ । ವರುಣಸ್ಯ । ಅಗ್ನೇಃ ।

| ಮಂತ್ರ | ವಿನಿಯೋಗ |
|---|---|
| ಚಿತ್ರಂ ... ಚ ॥ | ಸೌರ್ಯಚರುವಿನ ಯಾಜ್ಯೆ/ಪಿಂಡದಾನದಲ್ಲಿಯೂ ವಿನಿಯೋಗವಿದೆ. |

❖ **ಚಿತ್ರಮ್** = ಬಗೆ ಬಗೆಯ ಬಣ್ಣಗಳಿಂದ ಕೂಡಿ ಚಿತ್ರ, ವಿಚಿತ್ರವಾಗಿರುವ; **ದೇವಾನಾಮ್ ಅನೀಕಮ್** = ದೇವತೆಗಳ ಸೈನ್ಯದಂತಿರುವ [ಸೂರ್ಯಮಂಡಲವು]; **ಉದಗಾತ್** = ಉದಯಿಸಿ ಮೇಲಕ್ಕೆ ಬರುತ್ತದೆ. [ಈ ಸೂರ್ಯನು]; **ಮಿತ್ರಸ್ಯ ವರುಣಸ್ಯ ಅಗ್ನೇಃ** = ಮಿತ್ರ, ವರುಣ ಹಾಗೂ ಅಗ್ನಿ ದೇವತೆಗಳ; [ಹಾಗೂ ಜಗತ್ತಿನ ಪ್ರಾಣಿಗಳ] **ಚಕ್ಷುಃ** = ಕಣ್ಣಾಗಿರುವವನು.

ಸೂರ್ಯದೇವನೇ ! ನೀನು ಪ್ರಕಾಶಕನು, ಸರ್ವಜ್ಞನು. ನಿನ್ನನ್ನು ಏಳು ಕುದುರೆಗಳು / ನೀರನ್ನು ಎಳೆದುಕೊಳ್ಳಬಲ್ಲ ಕಿರಣಗಳು ರಥದಲ್ಲಿ / ಸೂರ್ಯಮಂಡಲದಲ್ಲಿ ಒಯ್ಯುತ್ತವೆ. ಪ್ರಕಾಶವೇ ಕೂದಲಿನಂತೆ ಇರುವ / ರಶ್ಮಿವಂತನಾದ ನೀನು ನಮಗೆ ಕಣ್ಣುಗಳನ್ನು ಕರುಣಿಸು.

ವಿಧ ವಿಧವಾದ ಬಣ್ಣಗಳಿಂದ ಕೂಡಿ ಚಿತ್ರವಿಚಿತ್ರವಾದ ಕಿರಣಗಳ ಸೇನೆಯಂತಿರುವ ಸೂರ್ಯಮಂಡಲವು ಉದಯಿಸಿ ಮೇಲೆ ಬರುತ್ತದೆ. ಈ ಸೂರ್ಯದೇವನು ಮಿತ್ರಾದಿದೇವತೆಗಳ ಮತ್ತು ಇಡೀ ವಿಶ್ವದ ಕಣ್ಣೇ ಆಗಿರುತ್ತಾನೆ. ಚರಾಚರ ಜಗತ್ತಿನ ಆತ್ಮ ಸ್ವರೂಪನಾದ ಸೂರ್ಯದೇವನು ಲೋಕತ್ರಯವನ್ನೂ ತನ್ನ ಕಿರಣಗಳಿಂದ ವ್ಯಾಪಿಸಿರುತ್ತಾನೆ. ಆತನು ನಮಗೆ ಕಣ್ಣುಗಳನ್ನು ಕರುಣಿಸಲಿ.

**ಆಽಪ್ರಾ ದ್ಯಾವಾಪೃಥಿವೀ ಅಂತರಿಕ್ಷಗ್ಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ [ತಸ್ಥುಷಃ (೪)ಚ]॥ ವಿಶ್ವೇ ದೇವಾ ಋತಾವೃಧ ಋತುಭಿರ್ ಹವನಶ್ರುತಃ।**

---

ಏತಿ। ಅಪ್ರಾಃ। ದ್ಯಾವಾಪೃಥಿವೀ ಇತಿ ದ್ಯಾವಾ– ಪೃಥಿವೀ। ಅಂತರಿಕ್ಷಮ್। ಸೂರ್ಯಃ। ಆತ್ಮಾ। ಜಗತಃ। ತಸ್ಥುಷಃ। ಚ॥ **ವಿಶ್ವೇ**। ದೇವಾಃ। ಋತಾವೃಧ ಇತ್ಯೃತ - ವೃಧಃ। ಋತುಭಿರಿತ್ಯೃತು – ಭಿಃ। ಹವನಶ್ರುತ ಇತಿ ಹವನ – ಶ್ರುತಃ॥

---

| ಮಂತ್ರ | ವಿನಿಯೋಗ |
| --- | --- |
| **ವಿಶ್ವೇ ದೇವಾ...ಪಯಃ॥** | ಗ್ರಾಮಕಾಮನಿಗೆ ವಿಹಿತವಾಗಿರುವ ಸಾಂಗ್ರಹಣೇಷ್ಟಿಯ ಪುರೋನುವಾಕ್ಯೆ. |

---

**ಸೂರ್ಯಃ** = ಈ ಸೂರ್ಯದೇವನು; **ಜಗತಃ ತಸ್ಥುಷಃ ಚ ಆತ್ಮಾ** = ಚರಾಚರಜಗತ್ತಿನ ಆತ್ಮಸ್ವರೂಪನು; [ಈ ಸೂರ್ಯನು] **ದ್ಯಾವಾಪೃಥಿವೀ ಅಂತರಿಕ್ಷಮ್** = ಭೂಮಿಯೇ ಮೊದಲಾದ ಲೋಕತ್ರಯವನ್ನೂ; **ಆ ಅಪ್ರಾಃ** = [ತನ್ನ] ಕಿರಣಗಳಿಂದ ವ್ಯಾಪಿಸಿರುತ್ತಾನೆ. [ಆತನು ನಮಗೆ ಕಣ್ಣನ್ನು ಕೊಡಲಿ] ✦ **ಋತಾವೃಧಃ** = ಸತ್ಯವನ್ನೂ, ಯಜ್ಞವನ್ನೂ ವೃದ್ಧಿಗೊಳಿಸುವ; **ಋತುಭಿಃ ಹವನಶ್ರುತಃ** = ಆಯಾ ಋತುಗಳಲ್ಲಿ [ಮಾಡಬೇಕಾದ ಕರ್ಮಗಳಲ್ಲಿ] ಋತ್ವಿಜರ ಆಹ್ವಾನವನ್ನು ಕೇಳಿ ಆಗಮಿಸುವ; **ವಿಶ್ವೇ ದೇವಾಃ** = ವಿಶ್ವೇ

---

ವಿಶ್ವೇದೇವರು ಸತ್ಯವನ್ನೂ, ಯಜ್ಞವನ್ನೂ ವೃದ್ಧಿಗೊಳಿಸತಕ್ಕವರು. ಆಯಾ ಕಾಲದಲ್ಲಿ

**ಜುಷಂತಾಂ ಯುಜ್ಯಂ ಪಯಃ॥ ವಿಶ್ವೇ ದೇವಾಃ ಶೃಣುತೇ-ಮಗ್ಂ ಹವಂ ಮೇ ಯೇ ಅಂತರಿಕ್ಷೇ ಯ ಉಪ ದ್ಯವಿ ಷ್ಠ।**

---

ಜುಷಂತಾಮ್ । ಯುಜ್ಯಮ್ । ಪಯಃ ॥ **ವಿಶ್ವೇ** । ದೇವಾಃ । ಶೃಣುತ । ಇಮಮ್ । ಹವಮ್ । ಮೇ । ಯೇ । ಅಂತರಿಕ್ಷೇ । ಯೇ । ಉಪೇತಿ । ದ್ಯವಿ । ಸ್ಥ॥

---

| ಮಂತ್ರ | ವಿನಿಯೋಗ |
|---|---|
| **ವಿಶ್ವೇ ದೇವಾಃ ....ಮಾದಯಧ್ವಮ್ ॥** | ಸಾಂಗ್ರಹಣೇಷ್ಟಿಯ ಯಾಜ್ಯೆ. |

---

ದೇವತೆಗಳು; **ಯುಜ್ಯಮ್** = ಯೋಗ್ಯವಾದ; **ಪಯಃ** = ಹಾಲಿನಂತೆ ರುಚಿಕರವಾದ/ ಹಾಲಿನಲ್ಲಿ ಬೇಯಿಸಿದ, ಚರುವನ್ನು; **ಜುಷಂತಾಮ್** = ಸೇವಿಸಲಿ. [ನಮ್ಮ ಇಷ್ಟಗಳನ್ನು ಕರುಣಿಸಲಿ] ❖ **ಯೇ ಅಂತರಿಕ್ಷೇ** = ಯಾರು ಅಂತರಿಕ್ಷದಲ್ಲಿಯೂ; **ಯೇ ಉಪ** = ಯಾರು ಸಮೀಪದ ಭೂಲೋಕದಲ್ಲಿಯೂ; ಯೇ **ದ್ಯವಿ ಸ್ಥ** = ದ್ಯುಲೋಕದಲ್ಲಿಯೂ ಇರುವಿರೋ; [ತೇ] **ವಿಶ್ವೇ ದೇವಾಃ** = ಆ ವಿಶ್ವೇದೇವರೇ! **ಮೇ** = ನನ್ನ; **ಇಮಮ್ ಹವಮ್** = ಈ ಆಹ್ವಾನವನ್ನು; **ಶೃಣುತ** = ಆಲಿಸಿರಿ.

---

ಮಾಡುವ ಯಾಗಗಳಲ್ಲಿ ಋತ್ವಿಜರ ಆಹ್ವಾನವನ್ನು ಮನ್ನಿಸಿ ಬರತಕ್ಕವರು. ಅವರು ಹಾಲಿನಂತಿರುವ / ಹಾಲಿನಿಂದ ಮಾಡಿದ ಸಿಹಿಯಾದ ಹವ್ಯವನ್ನು ಸ್ವೀಕರಿಸಲಿ. ನಮ್ಮ ಇಷ್ಟಾರ್ಥವನ್ನು ಪೂರೈಸಲಿ.

ಅಂತರಿಕ್ಷ – ಭೂಮಿ–ಸ್ವರ್ಗ ಲೋಕಗಳಲ್ಲಿರುವ ವಿಶ್ವೇ ದೇವರೇ! ನೀವು ನಮ್ಮ ಈ ಕರೆಯನ್ನು ಕೇಳಿರಿ.

# ಯೇ ಅಗ್ನಿಜಿಹ್ವಾ ಉತ ವಾ ಯಜತ್ರಾ

# ಆಸದ್ಯಾಸ್ಮಿನ್ಬರ್‌ಹಿಷಿ ಮಾದಯಧ್ವಮ್ ॥೪೮-14॥

[ತದೀಶಾನಮದ್ರಿಸ್ತಸ್ಥುಷಸ್ತ್ರಿಗ್ಂಶಚ್ಚ ॥]

---

ಯೇ । ಅಗ್ನಿ ಜಿಹ್ವಾ ಇತ್ಯಗ್ನಿ - ಜಿಹ್ವಾಃ । ಉತ । ವಾ । ಯಜತ್ರಾಃ । ಆಸದ್ಯೇತ್ಯಾ – ಸದ್ಯ । ಅಸ್ಮಿನ್ನ್ । ಬರ್‌ಹಿಷಿ । ಮಾದಯಧ್ವಮ್॥14॥

---

**ಯೇ ಅಗ್ನಿಜಿಹ್ವಾಃ** = ಯಾರು ಅಗ್ನಿಯೇ ನಾಲಿಗೆಯಾಗಿ ಉಳ್ಳವರೋ; **ಉತ ವಾ ಯಜತ್ರಾಃ** = ಮತ್ತು ಯಾಗದಲ್ಲಿ ಹವಿಸ್ಸನ್ನು /ಪೂಜೆಯನ್ನು ಸ್ವೀಕರಿಸತಕ್ಕವರೋ; [ಅಂತಹ ವಿಶ್ವೇ ದೇವರೇ !] **ಅಸ್ಮಿನ್ ಬರ್‌ಹಿಷಿ** = ಈ ಯಾಗದಲ್ಲಿ; **ಆಸದ್ಯ** = ಬಂದು ಕುಳಿತು; **ಮಾದಯಧ್ವಮ್** = [ಹವಿಸ್ಸನ್ನು ಸ್ವೀಕರಿಸಿ] ತೃಪ್ತರಾಗಿರಿ.

---

ಅಗ್ನಿಯ ಮೂಲಕವಾಗಿ ಹವ್ಯವನ್ನು ಸ್ವೀಕರಿಸುವ ಮತ್ತು ಬೇರೆಯ ರೀತಿಯಲ್ಲಿಯೂ ಪೂಜೆಯನ್ನು ಕೈಗೊಳ್ಳುವ ವಿಶ್ವೇದೇವರೇ ! ನೀವು ನಮ್ಮ ಯಾಗಕ್ಕೆ ಆಗಮಿಸಿ, ಹವಿಸ್ಸನ್ನು ಸ್ವೀಕರಿಸಿ, ಸಂತೋಷಪಡಿರಿ. ಇಷ್ಟಾರ್ಥವನ್ನು ನೀಡಿ ಯಜಮಾನನನ್ನು ಸಂತೋಷಪಡಿಸಿರಿ.

* * *

## ವಿನಿಯೋಗ ಸಂಗ್ರಹ

**ಆದಿತ್ಯೇಷ್ಟೌ ನವೋ ದ್ವೇ ತು[1-2] ಪ್ರಾಚ್ಯಾ[3-10] ಮಿತ್ಯಾದಿಕಂ ತ್ರಯಮ್ ।**

**[..ಮಿತ್ಯಾದಿ ಚಾಷ್ಟಕಮ್]**

**ರಾಜಾದಿಗುಣಕೇಂದ್ರಸ್ಯ ಪುರೋಡಾಶಸಮೂಹಕೇ ।**

**ಆಗ್ನೇಯ [11]ಉದ ವಿಜ್ಯೋ[12] ದ್ವೇ ಉದು ತ್ಯಂ[13] ಜಾತವೇದಸಮ್ ।**

**ಸಪ್ತ[14] ಚಿತ್ರಂ[15] ತ್ರಯಂ ಸೌರ್ಯೇ ಸಾಂಗ್ರಹಣ್ಯಾ ಉಭೇ ಇಮೇ ।**

**ವಿಶ್ವೇ ದೇವಾ[16-17] ಇತಿ ಪ್ರೋಕ್ತಾ ಮಂತ್ರಾಃ ಸಪ್ತದಶೈವ ಹಿ ॥**

**ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ – 17**

ದೇವಾ ಮನುಷ್ಯಾ ದೇವಾಸುರಾ ಅಬ್ರುವನ್ದೇವಾಸುರಾಸ್ತೇಷಾಂ
ಗಾಯತ್ರೀ ಪ್ರಜಾಪತಿಸ್ತಾ ಯತ್ರಾಗ್ನೇ ಗೋಭಿಶ್ಚಿತ್ರಯಾ ಮಾರುತಂ
ದೇವಾ ವಸವ್ಯಾ ಅಗ್ನೇ ಮಾರುತಮಿತಿ ದೇವಾ ವಸವ್ಯಾ ದೇವಾಃ
ಶರ್ಮಣ್ಯಾಃ ಸರ್ವಾಣಿ ತ್ವಷ್ಟಾ ಹತಪುತ್ರೋ ದೇವಾ ವೈ ರಾಜನ್ಯಾ
ನ್ನವೋನವಶ್ಚತುರ್ದಶ ॥೧೪॥

**ದೇವಾ ಮನುಷ್ಯಾಃ ಪ್ರಜಾಂ ಪಶೂನ್ದೇವಾ ವಸವ್ಯಾಃ**
**ಪರಿದಧ್ಯಾದಿದಮಸ್ತ್ವಷ್ಟಾ ಚತ್ವಾರಿಗ್ಂಶತ್ ॥೪೦॥**

ದೇವಾ ಮನುಷ್ಯಾ ಮಾದಯಧ್ವಮ್ ॥

**ಹರಿಃ ಓಂ**

**॥ಶ್ರೀ ಕೃಷ್ಣಾರ್ಪಣಮಸ್ತು॥**

**ಇತಿ ದ್ವಿತೀಯಕಾಂಡೇ ಚತುರ್ಥಃ ಪ್ರಶ್ನಃ**



# ಅನುವಾಕದ ವಿಶೇಷ ವಿಷಯಗಳು

## ಅ) ಛಂದಸ್ಸು

| ಮಂತ್ರ | | ಛಂದಸ್ಸು |
|---|---|---|
| 1. | ನಮೋ ನಮೋ..... ಆಯುಃ ॥ | ತ್ರಿಷ್ಟುಪ್ |
| 2. | ಯಮಾದಿತ್ಯಾ.... ಗೋಪಾಃ ॥ | ತ್ರಿಷ್ಟುಪ್ |
| 3. | ಪ್ರಾಚ್ಯಾಂ ದಿಶಿ..... ಹವ್ಯಃ ॥ | ತ್ರಿಷ್ಟುಪ್ |
| 4. | ಇಂದ್ರೋ ಜಯಾತಿ.... ಅಸತ್ ॥ | ತ್ರಿಷ್ಟುಪ್ |
| 5. | ಅಸ್ಯೇದೇವ.... ರಣಾಯ ॥ | ತ್ರಿಷ್ಟುಪ್ |
| 6. | ಅಭಿ ತ್ವಾ.... ತಸ್ಥುಷಃ ॥ | ಪಥ್ಯಾಬೃಹತೀ |
| 7. | ತ್ವಾಮಿದ್ಧಿ.... ಅರ್ವತಃ ॥ | ಪಥ್ಯಾಬೃಹತೀ |
| 8. | ಯದ್ದ್ಯಾವ.... ರೋದಸೀ ॥ | ಪಥ್ಯಾಬೃಹತೀ |
| 9. | ಪಿಬಾ.... ನಾರ್ವಾ ॥ | ತ್ರಿಪದಾ ವಿರಾಟ್ |
| 10. | ರೇವತೀರ್ನಃ ....ಮದೇಮ ॥ | ಗಾಯತ್ರೀ |
| 11. | ಉದಗ್ನೇ...ಅರ್ಚಯಃ ॥ | ಗಾಯತ್ರೀ |
| 12. | ವಿ ಜ್ಯೋತಿಷಾ....ವಿನಿಕ್ಷೇ ॥ | ತ್ರಿಷ್ಟುಪ್ |
| 13. | ಉದು ತ್ಯಂ....ಸೂರ್ಯಮ್ ॥ | ಗಾಯತ್ರೀ |
| 14. | ಸಪ್ತ ತ್ವಾ.....ವಿಚಕ್ಷಣ ॥ | ಗಾಯತ್ರೀ |

15. ಚಿತ್ರಂ.....ಚ ॥ ತ್ರಿಷ್ಟುಪ್

16. ವಿಶ್ವೇ ದೇವಾಃ.....ಪಯಃ ॥ ಗಾಯತ್ರೀ

17. ವಿಶ್ವೇ ದೇವಾಃ...ಮಾದಯಧ್ವಮ್ ॥ ತ್ರಿಷ್ಟುಪ್





## ಕೃಷ್ಣ ಯಜುರ್ವೇದ ಕನ್ನಡ ಪ್ರಕಾಶನ

**ಸಂಪುಟ – 1**

(ವೇದಗಳ ಪರಿಚಯ, ಕೃಷ್ಣ ಯಜುರ್ವೇದ ಪರಿಚಯ,
ಯಜ್ಞಗಳ ಪರಿಚಯ)

**ಸಂಪುಟ – 2**

ತೈತ್ತಿರೀಯ ಸಂಹಿತೆ
(ಪ್ರಥಮ ಕಾಂಡ 1 –, 2 ಪ್ರಪಾಠಕಗಳು)

**ಸಂಪುಟ – 3**

ತೈತ್ತಿರೀಯ ಸಂಹಿತೆ
(ಪ್ರಥಮ ಕಾಂಡ 3 – 4 – 5 ಪ್ರಪಾಠಕಗಳು)

**ಸಂಪುಟ – 4**

ತೈತ್ತಿರೀಯ ಸಂಹಿತೆ
(ಪ್ರಥಮ ಕಾಂಡ 6 – 7 –8 ಪ್ರಪಾಠಕಗಳು)

**ಸಂಪುಟ – 5**

ತೈತ್ತಿರೀಯ ಸಂಹಿತೆ
(ದ್ವಿತೀಯ ಕಾಂಡ 1 – 2 ಪ್ರಪಾಠಕಗಳು)

**ಸಂಪುಟ – 6**

ತೈತ್ತಿರೀಯ ಸಂಹಿತೆ
(ದ್ವಿತೀಯ ಕಾಂಡ 3 – 4 ಪ್ರಪಾಠಕಗಳು)

*ಪ್ರತಿಗಳಿಗೆ :*

**ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ**
31, ಪಂಪಮಹಾಕವಿ ರಸ್ತೆ, ಬೆಂಗಳೂರು–560 004.
ದೂರವಾಣಿ : 26677852

ಪರಿಮಳ ಮುದ್ರಣಾಲಯ, ಶ್ರೀನಗರ, ಬೆಂಗಳೂರು–50. ☎ : 26525516



ಸಂಪುಟ –

ತೈತ್ತಿರೀಯ ಸಂಹಿತೆ

